ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮುಹಮ್ಮದ್(ಸ) ಅವರನ್ನು ಅಲ್ಲಾಹನು ಪ್ರವಾದಿಯಾಗಿ ನೇಮಿಸಿ ಕಳುಹಿಸುವಾಗ ಅವರಿಗೆ ತನ್ನ ಗ್ರಂಥವನ್ನೂ ಆ ಗ್ರಂಥದ ಆಶಯವನ್ನು ವಿವರಿಸಿಕೊಡುವ ಜಾಣ್ಮೆ (ಹಿಕ್ಮತ್) ಯನ್ನು ದಯಪಾಲಿಸಿರುವನು. ಆದ್ದರಿಂದ ಪ್ರವಾದಿ(ಸ) ಅವರ ಪ್ರಿಯ ಪತ್ನಿ ಆಯಿಶಾ(ರ) ರೊಂದಿಗೆ ಯಾರೋ ಪ್ರವಾದಿಯವರ ಚಾರಿತ್ರ್ಯದ ಕುರಿತು ವಿಚಾರಿಸಿದಾಗ, 'ನೀವು ಕುರ್‌ಆನ್ ಓದಿಲ್ಲವೇ? ಪ್ರವಾದಿಯವರು ಸ್ವಯಂ ಕುರ್‌ಆನ್ ಆಗಿದ್ದರು' ಎಂದವರು ವಿಸ್ತರಿಸಿದರು. ಪ್ರವಾದಿ(ಸ) ಕುರ್‌ಆನಿನ ಸೂಕ್ತಗಳ ಇಂಗಿತವನ್ನು ಜನರಿಗೆ ಮನವರಿಕೆ ಮಾಡಿ ಕೊಡುವ ತಮ್ಮ ಕರ್ತವ್ಯವನ್ನು ಸುಸೂತ್ರವಾಗಿ ನಿಭಾಯಿಸಿರುವರು ಅವರ ಮಾತು ಮತ್ತು ಕೃತಿಗಳೇ ಪ್ರವಾದಿಯವರ 'ಸುನ್ನತ್' (ಚರ್ಯೆ)ಎಂದು ಪರಿಗಣಿಸಲಾಗಿದೆ. ಜೀವನದ ಸಕಲ ರಂಗಗಳಿಗೂ ಸಂಬಂಧಿಸಿದ ಮಾತು ಹಾಗೂ ಕೃತಿಗಳು ಹದೀಸ್ ಗ್ರಂಥಗಳಲ್ಲಿ ಲಭ್ಯವಿದೆ.

ಪ್ರಕಾಶ ಬಿಂದುಗಳು ಎಂಬ ಈ ಕೃತಿಯಲ್ಲಿ ಪ್ರವಾದಿ ಯವರ ಜೀವನದಿಂದ ಸತ್ಯವಿಶ್ವಾಸಿಗಳಿಗೆ ಉಪಯುಕ್ತ ಕೆಲವು ಆದೇಶ-ನಿರ್ದೇಶನಗಳು ಹಾಗೂ ಉಪದೇಶಗಳನ್ನು ಸಂಗ್ರಹಿಸಲಾಗಿದೆ. ಈ ಸಂಕಲನದಲ್ಲಿ ಒಟ್ಟು 59 ಹದೀಸ್‌ಗಳನ್ನು ಉದ್ಧರಿಸಲಾಗಿದೆ. ಪ್ರತಿಯೊಂದು ಹದೀಸ್‌ಗೆ ವ್ಯಾಖ್ಯಾನವನ್ನೂ ನೀಡಲಾಗಿದೆ. ಪ್ರಬೋಧನಂ ಕೇರಳದ ಮಲಯಾಳ ವಾರಪತ್ರಿಕೆಯ ಪ್ರಧಾನ ಸಂಪಾದಕರಾಗಿದ್ದ ಟಿ.ಕೆ. ಉಬೈದ್‌ರವರು ರಚಿಸಿರುವ 'ಹದೀಸ್ ಬೋಧನಂ' ಎಂಬ ಮಲಯಾಳ ಕೃತಿಯ ಕನ್ನಡಾನುವಾದವಾಗಿದೆ ಈ ಕೃತಿ. 'ಅನುಪಮ' ಮಹಿಳಾ ಮಾಸಿಕದ ಉಪಸಂಪಾದಕಿಯಾಗಿರುವ ಸಬೀಹಾ ಫಾತಿಮಾರವರು ಅದನ್ನು ಕನ್ನಡಕ್ಕೆ ಸುಂದರವಾಗಿ ಭಾಷಾಂತರಿಸಿದ್ದಾರೆ.

ಈ ಗ್ರಂಥದ ಅಧ್ಯಯನವು ವಿಶ್ವಾಸಿಯ ಜೀವನವನ್ನು ಸಂಸ್ಕರಿಸಲು ಉಪಯಕ್ತವಾಗ ಬಹುದೆಂಬುದರಲ್ಲಿ ಸಂದೇಹವಿಲ್ಲ. ದೈನಂದಿನ ಜೀವನದಲ್ಲಿ ಮಾರ್ಗದರ್ಶಕವಾಗಬಲ್ಲ ಈ ಹದೀಸ್ ಸಂಕಲನವು ಪ್ರತಿಯೊಂದು ಮನೆಯಲ್ಲೂ ಇರಬೇಕಾದ ಗ್ರಂಥವಾಗಿದೆ. ಕನ್ನಡ ಸಾಹಿತ್ಯ ಲೋಕಕ್ಕೆ ಇದೊಂದು ಹೊಸ ಸೇರ್ಪಡೆಯಾಗಿದ್ದು ಕನ್ನಡ ಜನತೆಗೆ ಇದು ಪ್ರಯೋಜನಕಾರಿಯಾಗಲಿ ಎಂದು ಹಾರೈಸುತ್ತೇವೆ.

- ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# 1. ಮುಸ್ಲಿಮ್ ಯಾರು?

عَنْ اَنَسِ بْنِ مَالِكٍ قَالَ قَالَ رَسُولُ اللّٰهِ ﷺ مَنْ
صَلَّى صَلَاتَنَا وَاسْتَقْبَلَ قِبْلَتَنَا وَأَكَلَ ذَبِيحَتَنَا فَذٰلِكَ الْمُسْلِمُ الَّذِي لَهُ
ذِمَّةُ اللّٰهِ وَذِمَّةُ رَسُولِهِ فَلَا تُخْفِرُوا فِي ذِمَّتِهِ (بخارى)

ಅನಸ್ ಬಿನ್ ಮಾಲಿಕ್(ರ) ಹೇಳುತ್ತಾರೆ: ಪ್ರವಾದಿ ಮುಹಮ್ಮದ್(ಸ) ಹೇಳಿದರು- ''ಯಾರು ನಮ್ಮಂತೆ ನಮಾಝ್ ಮಾಡುತ್ತಾನೋ ನಮ್ಮ ಕಿಬ್ಲಾವನ್ನು ಕಿಬ್ಲಾ(ಅಭಿಮುಖ ಕೇಂದ್ರ) ಆಗಿ ಮಾಡುತ್ತಾನೋ ಮತ್ತು ನಾವು ದಿಬಹ್ ಮಾಡಿದುದನ್ನು ತಿನ್ನುತ್ತಾನೋ ಅವನು ಮುಸ್ಲಿಮ್ ಆಗಿದ್ದಾನೆ. ಅವನಿಗೆ ಅಲ್ಲಾಹ್ ಮತ್ತು ರಸೂಲರ ಆಶ್ರಯವಿದೆ. ಆದ್ದರಿಂದ ನೀವು ಅವನನ್ನು ಅಲ್ಲಾಹನ ಆಶ್ರಯದಿಂದ ವಂಚಿಸದಿರಿ.'' (ಬುಖಾರಿ)

ಈ ಪ್ರವಾದಿ ವಚನವನ್ನು ಸರಿಯಾಗಿ ಮನದಟ್ಟು ಮಾಡಬೇಕಾದರೆ ಇದರ ಹಿನ್ನೆಲೆಯನ್ನು ಅರಿತಿರಬೇಕಾದುದು ಅಗತ್ಯ. ಪ್ರವಾದಿ ಮುಹಮ್ಮದ್‌ರ(ಸ) ಕಾಲದಲ್ಲಿ ಇಸ್ಲಾಮ್ ಜನ ಬೆಂಬಲ ಮತ್ತು ಸಂಪತ್ತಿನ ಬಲವನ್ನು ಗಳಿಸಿದಾಗ ಜನರು ತಂಡೋಪ ತಂಡಗಳಾಗಿ ಅಲ್ಲಾಹನ ಧರ್ಮದೊಳಗೆ ಪ್ರವೇಶಿಸಲಾರಂಭಿಸಿದರು. ಈ ರೀತಿ ಹೊಸತಾಗಿ ಇಸ್ಲಾಮ್ ಸ್ವೀಕರಿಸಿ ಮುಸ್ಲಿಮರಾದವರ ಪೈಕಿ ಕೆಲವರ ಬಗ್ಗೆ ಈ ಮೊದಲೇ ಇಸ್ಲಾಮ್ ಸ್ವೀಕರಿಸಿ ಮುಸ್ಲಿಮರಾಗಿದ್ದವರಿಗೆ ಸಂಶಯ ಬರಲಾರಂಭಿಸಿತು. ಇವರು ನಿಜವಾಗಿಯೂ ಇಸ್ಲಾಮನ್ನು ಸತ್ಯಪೂರ್ಣವಾಗಿ ಅಂಗೀಕರಿಸಿ ವಿಶ್ವಾಸವಿಟ್ಟಿರಬಹುದೇ? ಇಸ್ಲಾಮಿನ ಆದರ್ಶ ಮತ್ತು ಆಚಾರಗಳ ಬಗ್ಗೆ ಇವರಿಗೆ ಸರಿಯಾದ ವಿಶ್ವಾಸವಿದೆಯೇ? ಅಥವಾ ಜನ ಬೆಂಬಲ ಮತ್ತು ಸಂಪತ್ತನ್ನು ಹೊಂದಿರುವವರ ಪಕ್ಷದಲ್ಲಿ ಇದ್ದರೆ ಒಳ್ಳೆಯದೆಂಬ ಸ್ವಾರ್ಥ ಚಿಂತನೆ ಅವರನ್ನು ಮುಸ್ಲಿಮರಾಗಲು ಪ್ರೇರೇಪಿಸಿತೇ? ಈ ರೀತಿ ಸಂಶಯಕ್ಕೆ ಒಳಪಟ್ಟ ವ್ಯಕ್ತಿಗಳಲ್ಲಿ ಯಾರಲ್ಲಾದರೂ ಸಣ್ಣ ಕೊರತೆ ಕಂಡು ಬಂದರೂ ಅವರನ್ನು ಕಪಟ ವಿಶ್ವಾಸಿಗಳು ಅಥವಾ ಅವಿಶ್ವಾಸಿಗಳು ಎಂದು ಅವರಿಗೆ ಅಡ್ಡ ಹೆಸರನ್ನು ಇಡಲು ಕೆಲವರು ಸನ್ನದ್ಧರಾಗಿದ್ದರು. ಇಂತಹ ಸಂದರ್ಭದಲ್ಲಿ ಪ್ರವಾದಿ

ಮುಹಮ್ಮದ್‌ರು(ಸ) ತಮ್ಮ ಅನುಯಾಯಿಗಳಿಗೆ ಈ ರೀತಿ ಕಲಿಸಿದರು. 'ನಾವು ನಮಾಝ್ ಮಾಡುವಂತೆ ನಮಾಝ್ ಮಾಡುವ ನಮ್ಮ ಕಿಬ್ಲಾವನ್ನು ಅಭಿಮುಖ ಮಾಡುವ ಮತ್ತು ನಾವು ದಿಬಹ್ ಮಾಡಿದುದನ್ನು ತಿನ್ನುವ ಎಲ್ಲರನ್ನೂ ಮುಸ್ಲಿಮರೆಂದೇ ಪರಿಗಣಿಸಬೇಕು. ಅವರು ನಿಜವಾಗಿಯೂ ವಿಶ್ವಾಸವಿಟ್ಟಿದ್ದಾರೆಯೇ? ಅವರ ಒಳಗೆ ಕಾಪಟ್ಯದ ಅಂಶಗಳು ಏನಾದರೂ ಇದೆಯೇ ಎಂದೆಲ್ಲಾ ಪರೀಕ್ಷಿಸಬೇಕಾದುದು ನಿಮ್ಮ ಕೆಲಸವಲ್ಲ. ಅವೆಲ್ಲವೂ ಅಲ್ಲಾಹನ ಹೊಣೆಗಾರಿಕೆಯಲ್ಲಿದೆ. ಅವರನ್ನು ಅಪಮಾನಿಸಿದರೆ ಅಥವಾ ತೊಂದರೆಗೊಳ ಪಡಿಸಿದರೆ, ನೀವು ಮುಸ್ಲಿಮರೆಂಬ ನೆಲೆಯಲ್ಲಿ ಇನ್ನೋರ್ವ ಮುಸ್ಲಿಮನನ್ನು ಸಂರಕ್ಷಿಸಬೇಕೆನ್ನುವ ಹೊಣೆಗಾರಿಕೆಯನ್ನು ಉಲ್ಲಂಘಿಸಿದಂತೆ ಆಗುತ್ತದೆ.

ಮುಸ್ಲಿಮರೆಂದು ಅಂಗೀಕರಿಸಲ್ಪಟ್ಟ ಎಲ್ಲರೊಂದಿಗೂ ಸಮಾನತೆ ಮತ್ತು ಸಹೋದರತೆಯ ವರ್ತನೆಯನ್ನು ತೋರಬೇಕು. ಅವರಿಗೆ ಸಹಾಯ, ಸಂರಕ್ಷಣೆಯನ್ನು ನೀಡಬೇಕು. ಇದು ನಿಮ್ಮ ಕರ್ತವ್ಯವಾಗಿದೆ. ಸಂಶಯದ ಆಧಾರದಲ್ಲಿ ಅವರಿಗೆ ಸಹಾಯ ಮಾಡದೆ ಇರಬಾರದು. ದ್ರೋಹ ಬಗೆಯಬಾರದು. ಅವರು ಕಪಟ ವಿಶ್ವಾಸಿಗಳು ಅಥವಾ ಅವಿಶ್ವಾಸಿಗಳು ಎಂದು ಪ್ರಚಾರ ಮಾಡಬಾರದು. ಈ ರೀತಿ ಮಾಡಿದರೆ ಅಲ್ಲಾಹನು ಅವರಿಗೆ ನೀಡಿದ ಆಶ್ರಯದಲ್ಲಿ ಹಸ್ತಕ್ಷೇಪ ನಡೆಸಿದಂತೆ ಆಗುತ್ತದೆ. ಇದು ಬಹಳ ದೊಡ್ಡ ಅಪರಾಧವಾಗುತ್ತದೆ.

ಕೆಡುಕಿನಲ್ಲಿ ನಿರತರಾಗಿದ್ದಾರೆ ಅಥವಾ ಅವರ ಬಗ್ಗೆ ಅಭಿಪ್ರಾಯ ವ್ಯತ್ಯಾಸಗಳಿವೆ ಎಂಬ ಕಾರಣಕ್ಕೆ ಮುಸ್ಲಿಮರ ಒಂದು ಗುಂಪನ್ನೇ ಇಸ್ಲಾಮಿನಿಂದ ಹೊರಹಾಕಿ ಕಾಫಿರ್‌ಗಳೆಂದೋ, ಮುಶ್ರಿಕ್‌ಗಳೆಂದೋ ಅಡ್ಡ ಹೆಸರು ಹಿಡಿದು ಕರೆಯುವ ಅಭ್ಯಾಸ ಇರುವ ವ್ಯಕ್ತಿಗಳು ಈ ಪ್ರವಾದಿ ವಚನವನ್ನು ಬಹಳ ಶ್ರದ್ಧೆಯಿಂದ ಕಲಿಯಬೇಕು. ವ್ಯಕ್ತಿ ತಾನು ಮುಸ್ಲಿಮ್ ಎಂದು ಹೇಳಿಕೊಳ್ಳುತ್ತಿದ್ದರೆ ಆ ವ್ಯಕ್ತಿಯ ಜೀವನ ಶೈಲಿ ಮತ್ತು ಅಭಿಪ್ರಾಯಗಳನ್ನು ನೋಡಿ ಆ ವ್ಯಕ್ತಿಯ ಹೇಳಿಕೆಗೆ ಬೆಲೆ ನೀಡುವುದಲ್ಲ. ಬದಲಾಗಿ ವ್ಯಕ್ತಿ ನಮಾಝ್ ಮಾಡುತ್ತಿರುವನೇ, ಮುಸ್ಲಿಮರ ಆಹಾರ ಕ್ರಮವನ್ನು ಅನುಸರಿಸುತ್ತಿರುವನೇ ಅಥವಾ ಸಾಮೂಹಿಕ ಜೀವನದಲ್ಲಿ ಮುಸ್ಲಿಮರ ಜೊತೆ ಸೇರಿರುವನೇ ಎಂದು ನೋಡಿಕೊಂಡರೆ ಸಾಕು. ಈ ಎರಡು ವಿಷಯಗಳು ಅವನಲ್ಲಿದ್ದರೆ ಅವನು ಮುಸ್ಲಿಮನೆಂದೇ ಪರಿಗಣಿಸಲ್ಪಡುತ್ತಾನೆ. ಆ ಬಳಿಕ ಯಾರಿಗೂ ಆ ವ್ಯಕ್ತಿಯನ್ನು ಕಾಫಿರ್ ಅಥವಾ ಮುಶ್ರಿಕ್ ಎಂದು ಕರೆಯಲು ಅವಕಾಶವಿಲ್ಲ. ಅವನೊಳಗೆ ಶಿರ್ಕ್ ಅಥವಾ ಕುಫ್ರ್‌ನ ಅಂಶವೇನಾದರೂ ಇದ್ದರೆ ಅದನ್ನು ಅಲ್ಲಾಹನು ಪ್ರಶ್ನಿಸುತ್ತಾನೆ.

ಈ ಹದೀಸ್ ವಿವರಿಸುವ ಇನ್ನೊಂದು ಪ್ರಮುಖ ವಿಷಯ ನಮಾಝಿನ ಮಹತ್ವವಾಗಿದೆ. ಮುಸ್ಲಿಮನ ಪ್ರಾಥಮಿಕ ಲಕ್ಷಣವೇ ನಮಾಝ್ ಆಗಿರುತ್ತದೆ. ಮುಸ್ಲಿಮ್ ಮತ್ತು ಮುಸ್ಲಿಮೇತರರನ್ನು ಬೇರ್ಪಡಿಸಿ ತಿಳಿಸುವ ಪ್ರಮುಖ ಲಕ್ಷಣ ನಮಾಝ್ ಆಗಿರುತ್ತದೆ ಎಂಬ ಪ್ರವಾದಿ ವಚನವೂ ಇದೆ. ಆದುದರಿಂದ ನಮಾಝ್ ಮಾಡದ ವ್ಯಕ್ತಿ ತಾನು ಮುಸ್ಲಿಮ್ ಎಂದು ವಾದಿಸುತ್ತಿದ್ದರೂ ಕಾಫಿರ್ ಅಥವಾ ಮುಶ್ರಿಕ್ ಎಂದು ಕರೆಯಲ್ಪಡಲು ಅರ್ಹರಾಗಿರುತ್ತಾರೆ.



# 2. ಸ್ವರ್ಗ ಸಿಗಲು ಇಷ್ಟು ಸಾಕೇ?

عَنْ جَابِرٍ أَنَّ رَجُلًا سَأَلَ رَسُولَ اللّٰهِ ﷺ أَرَأَيْتَ إِذَا صَلَّيْتُ الصَّلَوَاتِ الْمَكْتُوبَاتِ وَصُمْتُ رَمَضَانَ وَأَحْلَلْتُ الْحَلَالَ وَحَرَّمْتُ الْحَرَامَ وَلَمْ أَزِدْ عَلَى ذَلِكَ شَيْئًا أَأَدْخُلُ الْجَنَّةَ؟ قَالَ نَعَمْ (بخاری و مسلم)

ಜಾಬಿರ್(ರ) ಹೇಳುತ್ತಾರೆ: ಓರ್ವ ವ್ಯಕ್ತಿ ಪ್ರವಾದಿ(ಸ)ಯವರೊಂದಿಗೆ ಈ ರೀತಿ ಪ್ರಶ್ನಿಸಿದರು. ನಾನು ಕಡ್ಡಾಯ ನಮಾಝ್‌ಗಳನ್ನು ಮಾಡುತ್ತೇನೆ. ರಮಝಾನಿನ ಉಪವಾಸ ಗಳನ್ನು ಆಚರಿಸುತ್ತೇನೆ. ಧರ್ಮಸಮ್ಮತ ಕೆಲಸಗಳನ್ನು ಸಮ್ಮತವೆಂದೂ, ಧರ್ಮನಿಷಿದ್ಧ ಕೆಲಸಗಳನ್ನು ನಿಷಿದ್ಧವೆಂದೂ ತಿಳಿದು ಅದನ್ನು ಪಾಲಿಸುತ್ತೇನೆ. ಇದರ ಹೊರತಾಗಿ ಬೇರೇನನ್ನೂ ನಾನು ಮಾಡುವುದಿಲ್ಲ, ನಾನು ಸ್ವರ್ಗಕ್ಕೆ ಹೋಗಬಹುದು ಎಂದು ತಾವು ಭಾವಿಸುವಿರಾ? ಪ್ರವಾದಿ(ಸ) ''ಹೌದು'' ಎಂದು ಉತ್ತರಿಸಿದರು. (ಬುಖಾರಿ, ಮುಸ್ಲಿಮ್)

ಇಸ್ಲಾಮಿನ ಸರಳತೆ ಮತ್ತು ಸಂದೇಶ ಪ್ರಚಾರಕನಲ್ಲಿರಬೇಕಾದ ಯುಕ್ತಿಯ ಮಹತ್ವವನ್ನು ಈ ಹದೀಸ್ ನಮಗೆ ತಿಳಿಸುತ್ತದೆ.

ಪ್ರವಾದಿ ಮಹಮ್ಮದರ(ಸ) ಬಳಿ ಹಲವು ರೀತಿಯ ಜನರು ಬರುತ್ತಿದ್ದರು. ಇವರ ಪೈಕಿ ಅರಬರು–ಅರಬೇತರರು, ನಾಗರಿಕರು–ಅನಾಗರಿಕರು, ಪಂಡಿತರು–ಪಾಮರರು, ಧನಿಕರು–ದರಿದ್ರರು ಎಲ್ಲರೂ ಇರುತ್ತಿದ್ದರು. ಇವರೆಲ್ಲರಿಗೂ ಇಸ್ಲಾಮಿನ ಆದರ್ಶವನ್ನು ಪ್ರವಾದಿ(ಸ) ಮನವರಿಕೆ ಮಾಡಿಸಿ ಕೊಡುತ್ತಿದ್ದರು. ಕೆಲವರು ಆ ಕೂಡಲೇ ಸಂಪೂರ್ಣ ಪ್ರಜ್ಞೆಯೊಂದಿಗೆ ಇಸ್ಲಾಮನ್ನು ಸ್ವೀಕರಿಸುತ್ತಿದ್ದರು. ಕೆಲವರು ನಿಷೇಧಿಸುತ್ತಿದ್ದರು. ಇನ್ನು ಕೆಲವರು ಇಸ್ಲಾಮನ್ನು ಸ್ವೀಕರಿಸುತ್ತಿದ್ದರು. ಇನ್ನು ಕೆಲವರು ಇಸ್ಲಾಮನ್ನು ಸ್ವೀಕರಿಸಬೇಕೇ? ತಿರಸ್ಕರಿಸಬೇಕೇ ಎಂದು ಆ ಕ್ಷಣ ತೀರ್ಮಾನಿಸಲಾಗದೆ ಬಳಿಕ ಯೋಚಿಸಿ ತೀರ್ಮಾನಿಸುವುದಾಗಿ ಹೇಳುತ್ತಿದ್ದರು. ಮತ್ತು ಕೆಲವರು ಸಂದೇಶವು ಉತ್ತಮವೂ ಸ್ವೀಕಾರಾರ್ಹವೂ ಆಗಿದೆ. ಆದರೆ ಇದನ್ನು ಸ್ವೀಕರಿಸುವುದರಿಂದ ನಮ್ಮ ಮೇಲೆ ಕಡ್ಡಾಯವಾಗುವ ಜವಾಬ್ದಾರಿಗಳನ್ನು, ಕರ್ತವ್ಯಗಳನ್ನು ನೆರವೇರಿಸುವುದು ಮಾತ್ರ ಸಾಧ್ಯವಿಲ್ಲದ ಕೆಲಸ ಎಂಬ ಅಭಿಪ್ರಾಯವುಳ್ಳವರಾಗಿದ್ದರು. ಕೆಲವರು

ನಿರ್ದಿಷ್ಟ ಕೆಲಸಗಳನ್ನು ಮಾತ್ರ ಮಾಡಿದರೆ ಮುಸ್ಲಿಮ್ ಆದುದರ ಪುಣ್ಯ ಸಿಗಬಹುದೇ ಎಂದು ಪ್ರಶ್ನಿಸುತ್ತಿದ್ದರು. ಈ ಪೈಕಿ ಒಬ್ಬ ವ್ಯಕ್ತಿ ಪ್ರವಾದಿ ಮುಹಮ್ಮದ್‌ರೊಂದಿಗೆ(ಸ) ಕೇಳಿದ ಪ್ರಶ್ನೆ ಮತ್ತು ಅದಕ್ಕೆ ಅವರು ನೀಡಿದ ಉತ್ತರವೇ ಈ ಮೇಲಿನ ಹದೀಸ್ ಆಗಿದೆ.

ನಮಾಝ್, ಉಪವಾಸವ್ರತ ನಿರ್ವಹಿಸಬಹುದು. ಧರ್ಮ ಸಮ್ಮತ - ವಿಧಿ - ನಿಷೇಧಗಳನ್ನು ಪಾಲಿಸಬಹುದು. ಇದರ ಹೊರತು ಬೇರೇನನ್ನೂ ಮಾಡದಿದ್ದರೂ ಸ್ವರ್ಗ ಪ್ರವೇಶಿಸಲು ಸಾಧ್ಯವೇ ಎಂಬ ಪ್ರಶ್ನೆಗೆ 'ಹೌದು ಸಾಧ್ಯ' ಎಂದಾಗಿತ್ತು ಪ್ರವಾದಿಯವರ(ಸ) ಉತ್ತರ. ಹಾಗಾದರೆ ಝಕಾತ್ ಪಾವತಿಸದೆ ಇರುವುದು ಅಥವಾ ಹಜ್ಜ್ ಕರ್ಮ ನೆರವೇರಿಸದೆ ಇರುವುದು ಅವರ ಸ್ವರ್ಗ ಪ್ರವೇಶಕ್ಕೆ ಅಡ್ಡಿಯಾಗಲಾರದು ಎಂದಾಯಿತು. ಒಬ್ಬ ವ್ಯಕ್ತಿ ಇಸ್ಲಾಮನ್ನು ಎಷ್ಟರ ಮಟ್ಟಿಗೆ ಮನವರಿಕೆ ಮಾಡಿಕೊಂಡಿರುವನೋ ಅದರಂತೆ ಜೀವಿಸಿದರೆ ಅದಕ್ಕೆ ಪ್ರತಿಫಲವಿದೆ. ಆದುದರಿಂದ ಅವರಿಗೆ ಮನವರಿಕೆಯಾದಷ್ಟು ಮುಸ್ಲಿಮನಾಗಿರಲು ಅವರನ್ನು ಪ್ರೋತ್ಸಾಹಿಸಲಾಗಿದೆ. ಏಕೆಂದರೆ ಒಬ್ಬ ವ್ಯಕ್ತಿ ಅಣು ತೂಕದಷ್ಟು ಪುಣ್ಯ ಕೆಲಸವನ್ನು ಮಾಡಿದರೆ ಪರಲೋಕದಲ್ಲಿ ಪ್ರತಿಫಲ ಸಿಗುತ್ತದೆ. ಅಣು ತೂಕದಷ್ಟು ಕೆಡುಕನ್ನು ಮಾಡಿದರೂ ಅದಕ್ಕೆ ಶಿಕ್ಷೆಯು ಸಿಗುವುದು. ಇಸ್ಲಾಮಿಗೆ ಹೊಸತಾಗಿ ಪ್ರವೇಶಿಸುವವರೊಂದಿಗೆ ಅದರ ಎಲ್ಲಾ ನಿಯಮ ನಿರ್ದೇಶನಗಳನ್ನು, ಅದು ನೀಡುವ ಜವಾಬ್ದಾರಿಯನ್ನು ಸಂಪೂರ್ಣವಾಗಿ ಆಗಿಂದಾಗಲೇ ಪಾಲಿಸಬೇಕು ಎಂದು ನಿರ್ಬಂಧಿಸಿ ಅವರನ್ನು ಭೀತಿಗೊಳಪಡಿಸಬಾರದು. ಓರ್ವ ವ್ಯಕ್ತಿ ಮುಸ್ಲಿಮನಾದ ಕೂಡಲೇ ಇಸ್ಲಾಮಿನ ಎಲ್ಲಾ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಆರಂಭಿಸಬೇಕೆಂದು ಒತ್ತಾಯ ಪಡಿಸುವುದಾಗಲೀ, ಏನಾದರೂ ಲೋಪದೋಷಗಳು ಕಂಡು ಬಂದರೆ ಅವನ ವಿಶ್ವಾಸವನ್ನು ಸಂಶಯದ ದೃಷ್ಟಿಯಿಂದ ನೋಡುವುದಾಗಲಿ ಸಲ್ಲದು. ಇಲ್ಲಿ ನಮಾಝನ್ನು ಮಾಡುವ, ಉಪವಾಸವನ್ನು ಆಚರಿಸುವ, ವಿಧಿ ನಿಷೇಧಗಳನ್ನು ಪಾಲಿಸುವ ವ್ಯಕ್ತಿ ಮತ್ತೇನನ್ನು ಮಾಡದಿದ್ದರೂ ಸ್ವರ್ಗವನ್ನು ಗಳಿಸುತ್ತಾನೆ ಎಂದು ಹೇಳಿರುವುದರ ಅರ್ಥವೇನೆಂದರೆ, ಅವನ ಕರ್ಮಗಳಿಗೆ ಸೂಕ್ತವಾದ ಪ್ರತಿಫಲ ಸಿಗುತ್ತದೆ ಎಂದಾಗುತ್ತದೆ. ಝಕಾತ್, ಹಜ್ಜ್ ಮುಂತಾದ ಕರ್ಮಗಳನ್ನು ಮಾಡುವುದು ಸ್ವರ್ಗ ಗಳಿಸಲು ಅಗತ್ಯವಿಲ್ಲ ಅಥವಾ ಮನಃಪೂರ್ವಕ ಇದನ್ನು ಉಪೇಕ್ಷಿಸಿದರೂ ಶಿಕ್ಷೆಯು ಸಿಗಲಾರದು ಎಂಬುದು ಇದರ ಅರ್ಥವಲ್ಲ.

ಹಾಗಾದರೆ ಝಕಾತ್, ಹಜ್ಜ್ ಮುಂತಾದ ಸತ್ಕರ್ಮಗಳ ಬಗ್ಗೆ ಪ್ರವಾದಿಯವರು(ಸ) ಆ ವ್ಯಕ್ತಿಯನ್ನು ಏಕೆ ಎಚ್ಚರಿಸಲಿಲ್ಲ? ಈ ಪ್ರಶ್ನೆಗೆ ವಿದ್ವಾಂಸರು ಎರಡು ರೀತಿಯ ಉತ್ತರವನ್ನು ನೀಡಿದ್ದಾರೆ. ಈ ಘಟನೆ ಸಂಭವಿಸುವಾಗ ಝಕಾತ್ ಮತ್ತು ಹಜ್ಜ್ ಕಡ್ಡಾಯವಾಗಿರಲಿಲ್ಲ ಎಂಬುದು ಒಂದನೆಯ ಅಭಿಪ್ರಾಯವಾಗಿದೆ. ಈ ಪ್ರಶ್ನೆಯನ್ನು ಕೇಳಿದ ವ್ಯಕ್ತಿ ಝಕಾತ್ ಕೊಡಲಿಕ್ಕೆ ಮತ್ತು ಹಜ್ಜ್ ನಿರ್ವಹಿಸಲಿಕ್ಕೆ ಅಗತ್ಯವಾದ ಸಂಪತ್ತು ಮತ್ತು ಆರೋಗ್ಯವನ್ನು ಹೊಂದಿದ ವ್ಯಕ್ತಿಯಲ್ಲ ಎಂದು ಪ್ರವಾದಿಯವರಿಗೆ(ಸ) ತಿಳಿದಿದ್ದ ಕಾರಣ ಈ ರೀತಿ ಉತ್ತರ

ನೀಡಿದ್ದರು ಎಂಬುದು ಎರಡನೆಯ ಉತ್ತರವಾಗಿದೆ. ಈ ಎರಡೂ ಉತ್ತರಗಳು ಬಾಲಿಶವಾಗಿ ಕಂಡು ಬರುತ್ತದೆ.

ಪ್ರವಾದಿಯವರಂತೆ(ಸ) ಸಮರ್ಥರಾದ ಓರ್ವ ಸಂದೇಶಪ್ರಚಾರಕ, ಯುಕ್ತಿ ಮತ್ತು ಜಾಣ್ಮೆಯನ್ನು ಹೊಂದಿದ ವ್ಯಕ್ತಿಯ ಬಗ್ಗೆ ಆಲೋಚಿಸಿದಾಗ ಇದಕ್ಕೆ ಸರಳವಾದ ಉತ್ತರವನ್ನು ನಾವು ಮನದಟ್ಟು ಮಾಡಬಹುದಾಗಿದೆ. ಆ ನವಮುಸ್ಲಿಮನು ಸ್ವಯಂ ಆಚರಿಸಲು ಸಿದ್ದನಾಗಿರುವ ಕರ್ಮಗಳಿಗೆ ಮತ್ತಷ್ಟನ್ನು ಸೇರಿಸಿಕೊಡುವುದು ಉಚಿತವಲ್ಲವೆಂದು ಪ್ರವಾದಿಯವರಿಗೆ(ಸ) ತೋಚಿತು. ಸ್ವಯಂ ಮಾಡಲು ಸಿದ್ಧನಿಲ್ಲದ ಕೆಲಸಗಳನ್ನು ವ್ಯಕ್ತಿಯ ಮೇಲೆ ಹೊರಿಸಿದರೆ, ಒಂದು ವೇಳೆ ಆ ವ್ಯಕ್ತಿ ಇಸ್ಲಾಮಿನಂತೆ ಜೀವಿಸುವುದು ನನಗೆ ಸಾಧ್ಯವಾಗಲಿಕ್ಕಿಲ್ಲ ಎಂಬ ತೀರ್ಮಾನವನ್ನು ತೆಗೆದುಕೊಳ್ಳುವ ಸಾಧ್ಯತೆ ಇರುತ್ತದೆ. ನಮಾಝ್ ಮತ್ತು ಉಪವಾಸವ್ರತ ಬಹಳ ಮಹತ್ವಪೂರ್ಣ ಕರ್ಮಗಳಾಗಿದೆ. ಸ್ವಯಂ ಪ್ರೇರಿತನಾಗಿ ಅವುಗಳನ್ನು ನಿರ್ವಹಿಸುವ ಮತ್ತು ಧರ್ಮದ ವಿಧಿ ನಿಷೇಧಗಳನ್ನು ಪಾಲಿಸುವ ವ್ಯಕ್ತಿ ಕ್ರಮೇಣ ಇಸ್ಲಾಮಿನ ಉಳಿದೆಲ್ಲಾ ಕರ್ಮಗಳನ್ನು ಸ್ವಯಂ ಸ್ಫೂರ್ತಿಯಿಂದ ಪಾಲಿಸಲು ಸನ್ನದ್ಧನಾಗಬಹುದು. ಭಯಭಕ್ತಿಯಿಂದ ನಿರ್ವಹಿಸಲಾಗುವ ನಮಾಝ್ ಮನುಷ್ಯನನ್ನು ಎಲ್ಲಾ ರೀತಿಯ ಕೆಡುಕು ಮತ್ತು ಅಶ್ಲೀಲತೆಗಳಿಂದ ತಡೆಯುತ್ತದೆ ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ. ಉಪವಾಸ ವ್ರತವು ವ್ಯಕ್ತಿಯಲ್ಲಿ ಆತ್ಮಸಂಸ್ಕರಣೆಯನ್ನುಂಟು ಮಾಡುತ್ತದೆ ಮತ್ತು ತ್ಯಾಗ ಮನೋಭಾವವನ್ನು ಬೆಳೆಸುತ್ತದೆ. ಅಲ್ಲಾಹನ ವಿಧಿ ನಿಷೇಧಗಳನ್ನು ಪಾಲಿಸುತ್ತೇನೆಂದು ವ್ಯಕ್ತಿ ಈ ಮೊದಲೇ ಪ್ರತಿಜ್ಞೆ ಮಾಡಿರುತ್ತಾನೆ. ಹೀಗಿರುವಾಗ ಆ ವ್ಯಕ್ತಿಗೆ ದೀರ್ಘ ಕಾಲದವರೆಗೆ ಕೇವಲ ನಮಾಝ್ ಮತ್ತು ಉಪವಾಸ ವ್ರತಕ್ಕೆ ಮಾತ್ರ ಸೀಮಿತವಾಗಿದ್ದುಕೊಂಡು ಬೇರೆ ಕರ್ಮಗಳನ್ನು ನಿರ್ವಹಿಸದೆ ಇರಲು ಖಂಡಿತ ಸಾಧ್ಯವಿಲ್ಲ. ಆ ವ್ಯಕ್ತಿಯ ಪ್ರಶ್ನೆಗೆ ಪ್ರವಾದಿಯವರು(ಸ) ನೀಡಿದ ಉತ್ತರದ ಒಳಾರ್ಥ ಇದುವೇ ಆಗಿದೆ. ಜನರಿಗೆ ಇಸ್ಲಾಮನ್ನು ಈ ರೀತಿಯಲ್ಲಿ ಪರಿಚಯ ಪಡಿಸಿರುವ ಉದಾಹರಣೆಗಳನ್ನು ಬೇರೆ ಹದೀಸ್‌ಗಳಲ್ಲೂ ನೋಡಬಹುದು. ''ಲಾ ಇಲಾಹ ಇಲ್ಲಲ್ಲಾಹ್ ಎಂದು ಹೇಳಿದವರೆಲ್ಲರೂ ಸ್ವರ್ಗವನ್ನು ಪ್ರವೇಶಿಸುವರು'' ಎಂದು ಕೂಡಾ ಕೆಲವು ಸಂದರ್ಭಗಳಲ್ಲಿ ಪ್ರವಾದಿಯವರು(ಸ) ಹೇಳಿರುವರು. ವಿಷಯವನ್ನು ಸರಳವಾಗಿಸುವ ಮೂಲಕ ವಿಶ್ವಾಸಗಳನ್ನು ಬೆಳೆಸುವ ಪರಿಣಾಮ ಕಾರಿ ರೀತಿಯಿದು.

ಒಮ್ಮೆ ಒಬ್ಬ ಕೆಟ್ಟ ವ್ಯಕ್ತಿ ಪ್ರವಾದಿಯವರ(ಸ) ಬಳಿ ಬಂದ. ತಾನು ಉತ್ತಮ ವ್ಯಕ್ತಿಯಾಗ ಬಯಸಿರುವುದಾಗಿ ಹೇಳಿದ. ಆಗ ಪ್ರವಾದಿಯವರು(ಸ) ಅವನಿಗೆ ಕೇವಲ ಒಂದು ಉಪದೇಶವನ್ನು ಮಾತ್ರ ನೀಡಿದರು. ''ನೀನು ಸುಳ್ಳು ಹೇಳಬಾರದು.'' ಆ ವ್ಯಕ್ತಿ ಈ ಉಪದೇಶವನ್ನು ಪಾಲಸುತ್ತೇನೆಂದು ಪ್ರತಿಜ್ಞೆ ಮಾಡಿ ಅಲ್ಲಿಂದ ತೆರಳಿದ. ಮುಂದೆಂದೂ ಆ ವ್ಯಕ್ತಿ ಕೆಡುಕನ್ನು ಮಾಡಲಿಲ್ಲ. ಅವನಿಗೆ ಕೆಟ್ಟ ಕೆಲಸಗಳನ್ನು ಮಾಡುವ ಪ್ರೇರಣೆ ಉಂಟಾದಾಗ ಅವನ ಮನಃಸಾಕ್ಷಿಯು ಅವನನ್ನು ಈ ರೀತಿ ಎಚ್ಚರಿಸಿತು. ಕದ್ದ ವಸ್ತುವನ್ನು ಮಾರುವ ಸಂದರ್ಭ

ಬಂದಾಗ ಇದು ಎಲ್ಲಿಂದ ಸಿಕ್ಕಿತೆಂದು ಕೇಳುವಾಗ ಸುಳ್ಳನ್ನು ಹೇಳಬೇಕಾಗುತ್ತದೆಯಲ್ಲವೇ? ನಿನ್ನೆ ರಾತ್ರಿ ಎಲ್ಲಿಗೆ ಹೋಗಿದ್ದೆ ಎಂದು ಯಾರಾದರೂ ಕೇಳಿದರೆ ಏನು ಹೇಳುವುದು?.... ಈ ರೀತಿ ಆ ವ್ಯಕ್ತಿ ಸತ್ಯಸಂಧ ಮತ್ತು ಉತ್ತಮ ನಡತೆಯ ವ್ಯಕ್ತಿಯಾಗಿ ಬದಲಾದ ಇದುವೇ ''ಲಾ ಇಲಾಹ ಇಲ್ಲಲ್ಲಾಹ್'' ಎಂದು ಹೇಳಿದ ವ್ಯಕ್ತಿಗೆ ಸ್ವರ್ಗ ಸಿಗುತ್ತದೆ. ಉಪವಾಸ, ನಮಾಝ್ ನಿರ್ವಹಿಸಿದ ವ್ಯಕ್ತಿಗೆ ಸ್ವರ್ಗ ಸಿಗುತ್ತದೆ. ಈ ರೀತಿಯ ಉಪದೇಶಗಳ ಒಳ ಮರ್ಮ ಇದುವೇ ಆಗಿರುತ್ತದೆ.



# 3. ಲಾ ಇಲಾಹ ಇಲ್ಲಲ್ಲಾಹು

عن أبي ذَرٍّ رَضِيَ اللّهُ عَنْهُ قَالَ قَالَ رَسُولُ اللّهِ ﷺ مَا مِنْ عَبْدٍ قَالَ
لَا إِلَهَ إِلَّا اللّهُ ثُمَّ مَاتَ عَلَى ذَلِكَ إِلَّا دَخَلَ الْجَنَّةَ (مسلم)

ಅಬೂದರ್ರ್(ರ) ವರದಿ ಮಾಡುತ್ತಾರೆ: ಪ್ರವಾದಿ(ಸ) ಈ ರೀತಿ ಹೇಳಿದರು- ಲಾ ಇಲಾಹ್ ಇಲ್ಲಲ್ಲಾಹ್ ಎಂದು ಹೇಳಿ ಆ ಬಳಿಕ ಅದೇ ಸ್ಥಿತಿಯಲ್ಲಿ ಮರಣ ಹೊಂದಿದ ಯಾವ ವ್ಯಕ್ತಿಯೂ ಸ್ವರ್ಗವನ್ನು ಪ್ರವೇಶಿಸದೇ ಇರಲಾರರು. (ಮುಸ್ಲಿಮ್)

عَنْ سُفْيَانَ الثَّقَفِيِّ رَضِيَ اللّهُ عَنْهُ قَالَ قُلْتُ يَا رَسُولَ اللّهِ قُلْ لِي فِي الْإِسْلَامِ قَوْلًا
لَا أَسْأَلُ عَنْهُ أَحَدًا بَعْدَكَ قَالَ قُلْ آمَنْتُ بِاللّهِ ثُمَّ اسْتَقِمْ (مسلم)

ಸುಫ್ಯಾನುಸ್ಸಖಫಿ(ರ) ಹೇಳುತ್ತಾರೆ: ನಾನು ಕೇಳಿದೆ 'ಓ ಅಲ್ಲಾಹನ ಸಂದೇಶವಾಹಕರೇ! ತಮ್ಮ ಹೊರತು ಇನ್ನಾರಲ್ಲಿಯೂ ಏನನ್ನೂ ಕೇಳಲು ಅವಕಾಶವಾಗದಂತೆ ಇಸ್ಲಾಮಿನ ಯಾವುದಾದರೂ ವಿಷಯದ ಬಗ್ಗೆ ನನಗೆ ತಿಳಿಸಿರಿ. ಪ್ರವಾದಿ(ಸ) ಹೇಳಿದರು: ''ನಾನು ಅಲ್ಲಾಹನ ಮೇಲೆ ವಿಶ್ವಾಸವಿರಿಸಿದೆ ಎಂದು ಹೇಳು. ತರುವಾಯ ಆ ಮಾತಿನಲ್ಲಿ ಸ್ಥಿರವಾಗಿರು.'' (ಮುಸ್ಲಿಮ್)

مَنْ قَالَ لاَ إله الاَّ الله مخلصا دخل الجَنَّة. قِيل ومَا اخلاصها؟ قال ان تحجزه
عن محارم الله (طبراني)

ನಿಷ್ಕಳಂಕವಾಗಿ ಲಾ ಇಲಾಹ ಇಲ್ಲಲ್ಲಾಹ್ ಎಂದು ಹೇಳಿದ ವ್ಯಕ್ತಿ ಸ್ವರ್ಗ ಪ್ರವೇಶಿಸುವನು. ಒಬ್ಬರು ಪ್ರಶ್ನಿಸಿದರು 'ಈ ನಿಷ್ಕಳಂಕತೆ' ಎಂದರೇನು? ಪ್ರವಾದಿ(ಸ) ಉತ್ತರಿಸಿದರು ''ಆ ವಚನವು ಅವನನ್ನು ಅಲ್ಲಾಹನು ವಿರೋಧಿಸಿದ ಎಲ್ಲಾ ವಿಷಯಗಳಿಂದ ದೂರವಿರಿಸಲು ಸಾಧ್ಯವಾಗಬೇಕು.'' (ತಬ್ರಾನಿ)

ಇಸ್ಲಾಮ್ ಧರ್ಮದ ಬುನಾದಿಯನ್ನು ಪರಾಮರ್ಶಿಸುವ ವಚನಗಳಿವು. ಲಾ ಇಲಾಹ ಇಲ್ಲಲ್ಲಾಹ್ ಎಂಬ ವಚನದ ಅರ್ಥ ವೈಶಾಲ್ಯ ಮತ್ತು ಮಹತ್ವದ ಮೇಲೆ ಈ ವಚನಗಳು

ಬೆಳಕು ಚೆಲ್ಲುತ್ತವೆ. ದೌರ್ಭಾಗ್ಯವಶಾತ್ ಚಿಂತನೆ ನಡೆಸುವ ಸಾಮರ್ಥ್ಯವಿಲ್ಲದ ಕೆಲವರು ಈ ವಚನವನ್ನು ತಪ್ಪಾಗಿ ಅರ್ಥೈಸಿದ್ದಾರೆ. ಮಾತ್ರವಲ್ಲ ಅದರ ಆಶಯವನ್ನು ಸಂಕುಚಿತವಾಗಿ ಗ್ರಹಿಸಿರುವುದನ್ನು ನಾವು ಕಾಣುತ್ತೇವೆ. ಮೇಲೆ ಉದ್ಧರಿಸಲ್ಪಟ್ಟಿರುವ ಈ ಹದೀಸ್ ವಚನಗಳ ಸಂಕ್ಷಿಪ್ತ ರೂಪ ಯಾರು ಲಾ ಇಲಾಹ ಇಲ್ಲಲ್ಲಾಹ್ ಎಂದು ಹೇಳುವರೋ ಅವರು ಸ್ವರ್ಗವನ್ನು ಪ್ರವೇಶಿಸುವರು ಎಂದಾಗಿದೆ. ಈ ರೀತಿಯ ವಚನಗಳ ಬಾಹ್ಯ ಅರ್ಥವನ್ನು ಮಾತ್ರ ಗ್ರಹಿಸಿ ಲಾ ಇಲಾಹ ಇಲ್ಲಲ್ಲಾಹ್ ಎಂದು ಹೇಳುವವರು ಸ್ವರ್ಗವನ್ನು ಮಾತ್ರ ಗ್ರಹಿಸಿ ಲಾ ಇಲಾಹ್ ಇಲ್ಲಲ್ಲಾಹ್ ಎಂದು ಹೇಳಿಬಿಟ್ಟ ಕೂಡಲೇ ಮತ್ತೆ ಹೇಗೆ ಜೀವನ ನಡೆಸಿದರೂ ಸ್ವರ್ಗ ಪ್ರವೇಶ ನಿಶ್ಚಿತ ಎಂದು ಈ ಜನರು ತಿಳಿದುಕೊಂಡಿದ್ದಾರೆ.

ಸಾಕ್ಷ್ಯ ವಚನಗಳ ಅಥವಾ ಧರ್ಮದ ಬುನಾದಿಯಾದ ತತ್ವಗಳ ನಿಜಾರ್ಥವನ್ನು ಗ್ರಹಿಸುವ ಸ್ವಭಾವ ಇಲ್ಲದ ಕಾರಣ ಈ ರೀತಿಯ ತಪ್ಪು ಅಭಿಪ್ರಾಯಗಳುಂಟಾಗಿವೆ. ಸಾಕ್ಷ್ಯ ವಚನಗಳ ಅರ್ಥ ಮತ್ತು ವ್ಯಾಖ್ಯಾನವು ಎಂದೂ ಅದರ ಅಕ್ಷರಗಳ ಅರ್ಥದಲ್ಲಿ ಮಾತ್ರ ಇರುವುದಲ್ಲ, ಕೇವಲ ಬಾಹ್ಯ ಅರ್ಥದಲ್ಲಿ ಇಂತಹ ವಚನಗಳನ್ನು ಹೇಳಲಾಗುವುದಿಲ್ಲ.★ ಅವು ವಿಶಾಲವಾದ ಅರ್ಥವ್ಯಾಪ್ತಿಯುಳ್ಳ, ವ್ಯಾಖ್ಯಾನವುಳ್ಳ ಸಮಗ್ರ ಪದಗುಚ್ಛಗಳಾಗಿವೆ.

ಒಂದು ಉದಾಹರಣೆಯ ಮೂಲಕ ಈ ವಿಷಯವನ್ನು ಇನ್ನಷ್ಟು ಚೆನ್ನಾಗಿ ಮನವರಿಕೆ ಮಾಡಿಕೊಳ್ಳಬಹುದು. 'ಎ' ಎಂಬ ವ್ಯಕ್ತಿಯನ್ನು ನಮ್ಮ ದೇಶದ ಅರಸನನ್ನಾಗಿ ಮಾಡಿದರೆ ಈ ದೇಶದ ಸಮಸ್ಯೆಗಳೆಲ್ಲವೂ ಪರಿಹಾರವಾಗ ಬಲ್ಲದು ಎಂದು ಒಬ್ಬ ವ್ಯಕ್ತಿ ಭಾವಿಸುತ್ತಾನೆ ಎಂದಿಟ್ಟುಕೊಳ್ಳೋಣ. 'ಎ' ನಮ್ಮ ರಾಜನಾಗಿದ್ದಾನೆ ಎಂದು ನಾಲಗೆಯಿಂದ ಹೇಳುತ್ತಾ ಕುಳಿತರೆ ರಾಜ್ಯದ ಸಮಸ್ಯೆಗಳೆಲ್ಲ ಪರಿಹಾರವಾಗಿ ಬಿಡುತ್ತದೆ ಎಂದು ಈ ಮೇಲೆ ಹೇಳಿದ ವಿಷಯದ ಅರ್ಥವೆಂದು ಯಾರೂ ಭಾವಿಸಲಾರರು. 'ಎ'ಗೆ ಅಧಿಕಾರವಿದೆ. ದೇಶವು 'ಎ'ಯ ಅಧೀನದಲ್ಲಿದೆ. ನಾವು 'ಎ'ಯ ಪ್ರಜೆಗಳು. ನಾವು 'ಎ'ಯನ್ನು ಅನುಸರಿಸಬೇಕು. ಅನುಸರಿಸದೆ ಇದ್ದರೆ 'ಎ'ಯು ನಮ್ಮನ್ನು ಶಿಕ್ಷಿಸಬಹುದು. ಈ ರೀತಿ ಹಲವು ವಿಷಯಗಳು ಈ ಮೇಲಿನ ಹೇಳಿಕೆಯಿಂದ ವಿಶದವಾಗುತ್ತದೆ. ಈ ವಿಷಯಗಳನ್ನು ಗ್ರಹಿಸದೆ 'ಎ' ಎಂಬವನು ನಮ್ಮ ಅರಸನಾಗಿದ್ದಾನೆ ಎಂದು ಹೇಳಿಕೊಳ್ಳುವುದಾದರೆ ಆ ಹೇಳಿಕೆ ತೀರಾ ಅರ್ಥಹೀನವೆನಿಸುತ್ತದೆ. ಲಾ ಇಲಾಹ ಇಲ್ಲಲ್ಲಾಹ್ ಎಂದು ನಾಲಗೆಯಿಂದ ಸುಮ್ಮನೆ ಹೇಳಿಬಿಟ್ಟರೆ ಅದು ಇದೇ ರೀತಿಯಾಗುತ್ತದೆ.

'ಲಾ ಇಲಾಹ ಇಲ್ಲಲ್ಲಾಹ್' ಎಂಬುದು ಇಸ್ಲಾಮಿನ ಆಧಾರ ಸ್ತಂಭವಾಗಿದೆ. ಈ ಸಿದ್ಧಾಂತದ ಬುನಾದಿಯಲ್ಲಿ ಇಸ್ಲಾಮಿನ ಇತರೆಲ್ಲಾ ತತ್ವಗಳು ನಿಂತಿವೆ.

ದೇವನೆಂದರೆ ಸೃಷ್ಟಿಸುವ, ಸಂರಕ್ಷಿಸುವ ಮತ್ತು ಸಂಹರಿಸುವ ಸಾಮರ್ಥ್ಯವುಳ್ಳವನಲ್ಲವೇ? ಆ ದೇವನು ಏಕನಾದ ಅಲ್ಲಾಹನು ಎಂದಾದ ಮೇಲೆ ಸೃಷ್ಟಿಗಳು ಅನುಸರಿಸಬೇಕಾದುದು,

★ ಸಾಕ್ಷ್ಯ ವಚನಗಳು

ಆರಾಧಿಸಬೇಕಾದುದು, ಪ್ರೀತಿಸಬೇಕಾದುದು ಮತ್ತು ಭಯ ಪಡಬೇಕಾದುದೆಲ್ಲವೂ ಅವನನ್ನು ಮಾತ್ರ. ಅಂದರೆ ಅಲ್ಲಾಹನು ಮಾತ್ರ ದೇವನು ಎಂದ ಮೇಲೆ ಅದರ ಇನ್ನೊಂದು ಭಾಗ ಅವನನ್ನು ಮಾತ್ರ ಸೃಷ್ಟಿಗಳು ಆರಾಧಿಸಬೇಕು ಎಂದಾಗುತ್ತದೆ. ಅಲ್ಲಾಹನನ್ನು ಆರಾಧಿಸಬೇಕೆಂದರೆ, ಆರಾಧಿಸುವುದು ಹೇಗೆ ಎಂದು ಮನುಷ್ಯನಿಗೆ ತಿಳಿದಿರಬೇಕು. ಇದು ಸಾಧಿತವಾಗಬೇಕಾದರೆ ದೇವನ ಸಂದೇಶವು ಮನುಷ್ಯನನ್ನು ತಲುಪುವ ವ್ಯವಸ್ಥೆ ಇರಬೇಕಾದುದು ಅನಿವಾರ್ಯವಾಗಿದೆ. ಇದುವೇ ಪ್ರವಾದಿಗಳ ಮೇಲೆ ಮತ್ತು ಗ್ರಂಥಗಳ ಮೇಲಿನ ವಿಶ್ವಾಸ. ಅಲ್ಲಾಹನನ್ನು ಆರಾಧಿಸಬೇಕು ಎಂಬುದು ಮನುಷ್ಯನ ಕಡ್ಡಾಯ ಧರ್ಮವಾಗಿದ್ದರೆ ಆ ಧರ್ಮವನ್ನು ಅನುಸರಿಸಿದವರಿಗೆ ಪುಣ್ಯ ಪ್ರತಿಫಲ ಮತ್ತು ಅನುಸರಿಸದವರಿಗೆ ಶಿಕ್ಷೆ ಲಭಿಸಬೇಕಲ್ಲವೇ? ಇದು ಪರಲೋಕ ಜೀವನ ಹಾಗೂ ಸ್ವರ್ಗ, ನರಕಗಳನ್ನು ಅನಿವಾರ್ಯ ಗೊಳಿಸುತ್ತದೆ. ಈ ರೀತಿ ಇಸ್ಲಾಮಿನ ಯಾವುದೇ ನಿಯಮವನ್ನು ತೆಗೆದು ನೋಡಿದರೂ ಅವೆಲ್ಲವೂ 'ಲಾ ಇಲಾಹ ಇಲ್ಲಲ್ಲಾಹ್'ನ ವಿಶಾಲ ತಾತ್ಪರ್ಯದಲ್ಲಿ ಅಡಕವಾಗಿರುವುದನ್ನು ಕಾಣಬಹುದಾಗಿದೆ.

ಹಾಗಾದರೆ, ಲಾ ಇಲಾಹ ಇಲ್ಲಲ್ಲಾಹ್ ಎಂದು ಹೇಳಿ ಅದರ ಮೇಲೆ ವಿಶ್ವಾಸವಿರಿಸುವುದು ಎಂದರೆ ಕೇವಲ ಅಲ್ಲಾಹನಲ್ಲದೆ ಬೇರೆ ದೇವನಿಲ್ಲವೆಂದು ಹೇಳುವುದು ಮತ್ತು ವಿಶ್ವಾಸವಿರಿಸುವುದು ಮಾತ್ರ ಅಲ್ಲ, ಇಸ್ಲಾಮಿನ ಎಲ್ಲಾ ನಿಯಮಗಳನ್ನು, ಅಂಗೀಕರಿಸಿ ಅನುಸರಿಸಬೇಕು ಎಂಬುದು ಇದರ ಅರ್ಥವಾಗಿದೆ.

ಇಸ್ಲಾಮಿನ ನಿಯಮಗಳ ಬಗ್ಗೆ ವಿಶ್ವಾಸವಿದ್ದರೆ ಅಥವಾ ಅದನ್ನು ಬಾಯಿಯಿಂದ ಹೇಳಿದರೆ ಮಾತ್ರ ಸಾಲದು. ಆ ವಿಶ್ವಾಸದ ಪ್ರಕಾರ ಜೀವಿಸಬೇಕು. ವಿಶ್ವಾಸ ಮತ್ತು ಹೇಳಿಕೆಗೆ ಅನುಗುಣವಾಗಿ ಜೀವನವನ್ನು ಉತ್ತಮ ಪಡಿಸಬೇಕಾದುದು ಪ್ರಾಮಾಣಿಕ ವಿಶ್ವಾಸ ಮತ್ತು ಹೇಳಿಕೆಯ ಭಾಗವೇ ಆಗಿದೆ. ಆದುದರಿಂದ 'ಹೇಳಿರಿ' ಎಂದು ಆದೇಶಿಸಿರುವಲ್ಲಿ ಅದೇ ರೀತಿ ಜೀವನವನ್ನು ರೂಪಿಸಬೇಕೆಂಬ ನಿರ್ದೇಶನ ಇಲ್ಲದೇ ಇದ್ದರೂ, ಆ ಅರ್ಥವೂ ಅದರಲ್ಲಿ ಅಡಕವಾಗಿದೆ. ಆದರೆ ಪ್ರಸ್ತುತ ಎರಡು ಹದೀಸ್‌ಗಳಲ್ಲಿ 'ಲಾಇಲಾಹ ಇಲ್ಲಲ್ಲಾಹ್' ಎಂದು ಹೇಳುವುದರ ಜೊತೆಗೆ ಅದಕ್ಕೆ ಅನುಸಾರವಾಗಿ ಜೀವಿಸಬೇಕೆಂಬ ಆದೇಶವೂ ಒಳಗೊಂಡಿದೆ. ಒಂದನೇ ಹದೀಸಿನಲ್ಲಿ ಬಂದಿರುವಂತೆ 'ಅದೇ ಸ್ಥಿತಿಯಲ್ಲಿ ಮರಣ ಹೊಂದಿದ ವ್ಯಕ್ತಿ' ಎಂಬ ವಾಕ್ಯ ಮತ್ತು ಎರಡನೇ ಹದೀಸಿನಲ್ಲಿ ಬಂದಿರುವ 'ತರುವಾಯ ಆ ಮಾತಿನಲ್ಲಿ ಸ್ಥಿರವಾಗಿರು' ಎಂಬ ವಾಕ್ಯವು ಇದನ್ನೇ ಸೂಚಿಸುತ್ತದೆ. ಮೂರನೇ ಹದೀಸಿನಲ್ಲಿ ಹಾಗೆ ಸ್ಥಿರವಾಗಿ ನಿಲ್ಲುವುದು ಹೇಗೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ.

ಲಾ ಇಲಾಹ ಇಲ್ಲಲ್ಲಾಹ್ ಎಂದು ಬಾಯಿಯಿಂದ ಹೇಳಿಬಿಟ್ಟು ಮರಣ ಹೊಂದಿದ ವ್ಯಕ್ತಿ ಸ್ವರ್ಗ ಪ್ರವೇಶಿಸುವುದು ನಿಶ್ಚಿತ ಎಂದು ಒಂದನೇ ಪ್ರವಾದಿವಚನದ ತಾತ್ಪರ್ಯವೆಂದು ವ್ಯಾಖ್ಯಾನವಿದೆ. ಮರಣಾಸನ್ನ ವೇಳೆಯಲ್ಲಿ ಕಲಿಮತುತ್ತೌಹೀದ್ ನೆನಪಿಸುವುದು ಮತ್ತು ಹೇಳುವುದು ಒಂದು ಮಹತ್ವಪೂರ್ಣ ಪುಣ್ಯ ಕಾರ್ಯವಾಗಿದೆ. ಆದರೆ ಜೀವನ ಪೂರ್ತಿ

ಮನಃಪೂರ್ವಕವಾಗಿ ಲಾ ಇಲಾಹ ಇಲ್ಲಲ್ಲಾಹ್ ಎಂಬ ವಚನಕ್ಕೆ ವಿರುದ್ಧವಾಗಿ ವರ್ತಿಸಿದ ವ್ಯಕ್ತಿ ಮರಣಾಸನ್ನನಾದಾಗ ಬೋಧ ಶೂನ್ಯನಾಗಿ ಅಥವಾ ಮಂಪರಿನಲ್ಲಿ ಈ ವಚನವನ್ನು ಉದ್ಧರಿಸಿಬಿಟ್ಟರೆ ಸ್ವರ್ಗವು ಸಿಗುವುದೆಂದು ಭಾವಿಸುವಂತಿಲ್ಲ, ಜೀವನ ಪೂರ್ತಿ ಅವಿಶ್ವಾಸ ಮತ್ತು ಅಧರ್ಮದಲ್ಲೇ ಇದ್ದ ವ್ಯಕ್ತಿ ಜೀವನದ ಕೊನೆಯ ನಿಮಿಷದಲ್ಲಿ 'ಲಾ ಇಲಾಹ ಇಲ್ಲಲ್ಲಾಹ್' ಎಂದು ಹೇಳುವುದಾದರೆ ಅದು 'ಫಿರ್‌ಔನನ ಈಮಾನ್' ಆಗಿರುವುದು. ಅಂತಹ ವಿಶ್ವಾಸವನ್ನು ಅಲ್ಲಾಹನು ಸ್ವೀಕರಿಸುವುದಿಲ್ಲ. ಆದರೆ ಜೀವನದ ಕೊನೆಯ ಘಟ್ಟದಲ್ಲಿ 'ಲಾ ಇಲಾಹ ಇಲ್ಲಲ್ಲಾಹ್' ಎಂದು ಉಚ್ಚರಿಸಿ ವಿಶ್ವಾಸ ಸ್ವೀಕರಿಸಿದ ವ್ಯಕ್ತಿಗೆ ಅದರ ತಾತ್ಪರ್ಯವನ್ನು ಗ್ರಹಿಸಲು ಮತ್ತು ಅನುಸರಿಸಿ ಜೀವಿಸಲು ಅವಕಾಶ ಲಭಿಸದೆ ಇದ್ದು, ಆ ವ್ಯಕ್ತಿ ಅದೇ ಸ್ಥಿತಿಯಲ್ಲಿ ಮರಣ ಹೊಂದಿದರೆ, ಈ ವಚನದ ಆಧಾರದಲ್ಲಿ ಬಾಯಿಯಿಂದ ಸತ್ಯವಚನವನ್ನು ಹೇಳಿದ ಕಾರಣಕ್ಕಾಗಿ ಪರಲೋಕದಲ್ಲಿ ಸ್ವರ್ಗ ಪ್ರವೇಶವನ್ನು ನಿರೀಕ್ಷಿಸಬಹುದಾಗಿದೆ.



# 4. ಅಲ್ಲಾಹನನ್ನು ಅರಿಯಿರಿ

عَنِ ابْنِ عَبَّاسٍ قَالَ كُنْتُ خَلْفَ رَسُولِ اللَّهِ ﷺ يَوْمًا فَقَالَ يَا غُلَامُ إِنِّي أُعَلِّمُكَ كَلِمَاتٍ احْفَظِ اللَّهَ يَحْفَظْكَ احْفَظِ اللَّهَ تَجِدْهُ تِجَاهَكَ إِذَا سَأَلْتَ فَاسْأَلِ اللَّهَ وَإِذَا اسْتَعَنْتَ فَاسْتَعِنْ بِاللَّهِ. تَعَرَّفْ إِلَى اللهِ فِي الرَّخَاءِ يَعْرِفْكَ فِي الشِّدَّةِ. وَاعْلَمْ أَنَّ النَّصْرَ مَعَ الصَّبْرِ وَأَنَّ الْفَرَجَ مَعَ الْكَرْبِ وَأَنَّ مَعَ الْعُسْرِ يُسْرًا (ترمذي)

ಇಬ್ನ್ ಅಬ್ಬಾಸ್(ರ) ಹೇಳುತ್ತಾರೆ: ಒಂದು ದಿನ ನಾನು ಪ್ರವಾದಿಯವರ(ಸ) ಹಿಂದೆ ಸವಾರಿಯಲ್ಲಿ ಕುಳಿತಿದ್ದೆ. ಪ್ರವಾದಿ(ಸ) ಹೇಳಿದರು- ಎಲೈ ಬಾಲಕನೇ, ನಾನು ನಿನಗೆ ಕೆಲವು ವಿಷಯಗಳನ್ನು ಹೇಳಿ ಕೊಡುತ್ತೇನೆ. (ಗಮನ ಕೊಟ್ಟು ಕೇಳು), ನೀನು ಅಲ್ಲಾಹನನ್ನು ಸ್ಮರಿಸು; ಅವನು ನಿನ್ನನ್ನು ಸ್ಮರಿಸುವನು. ಅಲ್ಲಾಹನನ್ನು ಸ್ಮರಿಸಿದರೆ ಅವನನ್ನು ನಿನ್ನ ಮುಂದೆ ಕಾಣುವಿ. ನೀನು ಬೇಡುವಾಗ ಅಲ್ಲಾಹನಲ್ಲಿ ಬೇಡು. ನಿನಗೇನಾದರೂ ಸಂಕಷ್ಟ ಎದುರಾದರೆ ಸಹಾಯದ ಅಗತ್ಯವಿರುವಾಗ ಅಲ್ಲಾಹನಿಂದ ಸಹಾಯ ಯಾಚಿಸು. ಕ್ಷೇಮದಿಂದಿರುವಾಗ ನೀನು ಅಲ್ಲಾಹನನ್ನು ನೆನಪಿಸಬೇಕು. ಅವನು ನಿನ್ನ ಸಂಕಷ್ಟದ ಸಮಯದಲ್ಲಿ ನಿನ್ನನ್ನು ನೆನಪಿಸುತ್ತಾನೆ. ತಿಳಿದಿರಲಿ, ವಿಜಯವು ಸಹನೆಯೊಂದಿಗಿದೆ, ಸುಖವು ದುಃಖದೊಂದಿಗಿದೆ, ಸಂಕೀರ್ಣತೆಯೊಂದಿಗೆ ವೈಶಾಲ್ಯವೂ ಇದೆ. (ತಿರ್ಮಿದಿ)

ಬಾಲಕನಾಗಿದ್ದ ಇಬ್ನ್ ಅಬ್ಬಾಸ್(ರ) ಪ್ರವಾದಿ ಮುಹಮ್ಮದ್(ಸ)ರೊಂದಿಗೆ ಪ್ರಯಾಣಿಸುತ್ತಿದ್ದರು. ಈ ವಚನಗಳ ಮೂಲಕ ಪ್ರವಾದಿಯವರು(ಸ) ಬಾಲಕನಿಗೆ ಅಲ್ಲಾಹ್ ಮತ್ತು ಮನುಷ್ಯನ ನಡುವೆ ಇರುವ ಸಂಬಂಧ, ಮನುಷ್ಯನಿಗೆ ಅಲ್ಲಾಹನೊಂದಿಗಿರಬೇಕಾದ ಸಾಮೀಪ್ಯದ ಮೂಲ ಪಾಠಗಳನ್ನು ಕಲಿಸಿಕೊಟ್ಟಿದ್ದಾರೆ.

"ನೀನು ಅಲ್ಲಾಹನನ್ನು ಸ್ಮರಿಸು. ಅವನು ನಿನ್ನನ್ನು ಸ್ಮರಿಸುವನು." ಇದು ಪ್ರಥಮ ಪಾಠವಾಗಿದೆ. ಸ್ಮರಿಸು ಎಂದು ಅನುವಾದಿಸಿರುವುದು 'ಇಹ್‌ಫ್ಝ್' ಎಂಬ

ಅರಬಿ ಪದವನ್ನಾಗಿದೆ. ಈ ಪದಕ್ಕೆ ಹೃದ್ಯಸ್ಥಗೊಳಿಸು, ಮೇಲ್ನೋಟ ವಹಿಸುವುದು, ಸಂರಕ್ಷಿಸು, ಮುಂತಾದ ಅರ್ಥಗಳೂ ಇವೆ. ಹಣದ ವಿಷಯದಲ್ಲಿ ಜಾಗರೂಕರಾಗಿರು, ಹಾವಿನ ಬಗ್ಗೆ ಜಾಗರೂಕರಾಗುವುದು, ನಾಯಕನ ಬಗ್ಗೆ ಜಾಗರೂಕನಾಗಿರು ಎಂದು ಹೇಳುವಾಗ ಈ ಎಲ್ಲಾ ಕಡೆಗಳಲ್ಲೂ ಒಂದೇ ಅರ್ಥದಲ್ಲಿ ಈ ಪದವನ್ನು ಪ್ರಯೋಗಿಸ ಲಾಗುವುದಿಲ್ಲ. ಆದರೂ ಎಲ್ಲ ಅರ್ಥಗಳಿಗೂ ಸಮಾನವಾದ ಒಂದು ಉದ್ದೇಶವಿದೆ. ಅಂದರೆ ಸಂಬಂಧಪಟ್ಟ ವಿಷಯದ ಬಗ್ಗೆ ಸದಾ ಜಾಗೃತನಾಗಿರಬೇಕು. ಹೃದ್ಯಸ್ಥಗೊಳಿಸುವುದು ಎಂಬ ಅರ್ಥವು ಈ ಉದ್ದೇಶದೆಡೆಗೆ ಹೆಚ್ಚು ಬೆಳಕು ಚೆಲ್ಲುತ್ತದೆ. 'ನೀನು ಅಲ್ಲಾಹನನ್ನು ಸ್ಮರಿಸು ಅಲ್ಲಾಹನು ನಿನ್ನನ್ನು ಸ್ಮರಿಸುವನು' ಎಂಬ ವಾಕ್ಯದಲ್ಲಿ ಸ್ಮರಿಸು ಎಂಬ ಪದಕ್ಕೆ ಈ ರೀತಿಯ ಅರ್ಥಗಳಿರುವುದು ವ್ಯಕ್ತವಾಗುತ್ತದೆ.

ಅಲ್ಲಾಹನನ್ನು ಸ್ಮರಿಸುವುದು ಎಂದರೆ ಅಲ್ಲಾಹನ ಬಗ್ಗೆ ಸದಾ ಜಾಗೃತನಾಗಿರಬೇಕು. ಅಲ್ಲಾಹನನ್ನು ಎಂದೂ ಮರೆತು ಬಿಡಬಾರದು. ಅವನು ಸದಾ ನಮ್ಮ ಮನಸ್ಸಿನಲ್ಲಿರಬೇಕು. ಕೇವಲ ಒಂದು ಅವ್ಯಕ್ತ ಸಂಕಲ್ಪದ ರೂಪದಲ್ಲಿ ಅಲ್ಲ, ಬದಲಾಗಿ ನಮ್ಮ ಕರ್ಮ ಜೀವನವನ್ನು ನಿಯಂತ್ರಿಸುವ ಸಜೀವ ಶಕ್ತಿಯಾಗಿ ಅವನು ನಮ್ಮ ನೆನಪಿನಲ್ಲಿರಬೇಕು. ಬೇರೆ ರೀತಿಯಲ್ಲಿ ಹೇಳುವುದಾದರೆ ಮನುಷ್ಯನು ಅಲ್ಲಾಹನನ್ನು ಸ್ಮರಿಸುವುದು ಎಂದರೆ ಜೀವನದ ಪ್ರತಿ ಹೆಜ್ಜೆಯಲ್ಲೂ ಅವನ ವಿಧಿ ನಿಷೇಧಗಳನ್ನು ಅನುಸರಿಸಿ ನಡೆಯುವುದಾಗಿದೆ. ಅಲ್ಲಾಹನು ಮನುಷ್ಯನನ್ನು ಸ್ಮರಿಸುವುದು ಅಂದರೆ ಮನುಷ್ಯನ ಮೇಲ್ನೋಟ ವಹಿಸುವುದು. ಅವನಿಗೆ ಅಗತ್ಯವಾದ ವಸ್ತುಗಳನ್ನು, ಯೋಗ್ಯತೆಗಳನ್ನು ನೀಡುವುದು ಮತ್ತು ಸಂರಕ್ಷಿಸುವುದು. ಈ ಮೊದಲು ಹೇಳಿದ ಸ್ಮರಿಸುವ ಕೆಲಸ ಮನುಷ್ಯನಿಂದ ಆದರೆ ಎರಡನೆಯದಾಗಿ ಹೇಳಲಾದ ಸ್ಮರಿಸುವಿಕೆ ಅಲ್ಲಾಹನಿಂದ ಉಂಟಾಗುವುದು ಎಂಬುದು ನಿಸ್ಸಂದೇಹ.

ಆದರೆ ಅಲ್ಲಾಹನು ನಮ್ಮನ್ನು ಸ್ಮರಿಸುವನು ಎಂಬುದು ನಮಗೆ ಸರಿಯಾಗಿ ಮನದಟ್ಟಾಗುವುದು ಪರಲೋಕದಲ್ಲಾಗಿದೆ. ಈ ಲೋಕದಲ್ಲಿ ಅವನು ತನ್ನ ದಾಸರನ್ನು ರಕ್ಷಿಸುವುದಿಲ್ಲ ಎಂದಲ್ಲ, ಅವನ ಸಂರಕ್ಷಣೆ ಇಲ್ಲದೆ ಮನುಷ್ಯನಿಗೆ ಮಾತ್ರವಲ್ಲ ಯಾವ ಜೀವಿಗೂ ಒಂದರೆ ನಿಮಿಷವೂ ಜೀವಂತವಿರಲು ಸಾಧ್ಯವಿಲ್ಲ. ಆದರೆ ಇಲ್ಲಿನ ರಕ್ಷಣೆ ಮತ್ತು ಶಿಕ್ಷೆಗಳನ್ನು ಕಾರ್ಯ ಕಾರಣ ಸಂಬಂಧವಾಗಿ ಮಾತ್ರ ನಮಗೆ ನೋಡಲಿಕ್ಕೆ ಸಾಧ್ಯವಿದೆ. ಆದುದರಿಂದ ಕೆಲವು ರಕ್ಷಣೆಗಳು ಪ್ರತ್ಯಕ್ಷದಲ್ಲಿ ಶಿಕ್ಷೆಗಳಾಗಿಯೂ, ಇದಕ್ಕೆ ತದ್ವಿರುದ್ಧವಾಗಿಯೂ ಅನುಭವಕ್ಕೆ ಬರುವುದು. ಅಲ್ಲಾಹನ ಕೆಲವು ರಕ್ಷಣೆಯ ಕ್ರಮಗಳು ಯಥಾರ್ಥದಲ್ಲಿ ನಮ್ಮ ಪಾಲಿಗೆ ರಕ್ಷಣೆಯಾಗಿತ್ತು ಎಂಬ ವಿಷಯವು ಈ ಲೋಕದಲ್ಲಿ ಮನುಷ್ಯನಿಗೆ ಅರ್ಥವಾಗಿರಬಹುದು. ಇದಕ್ಕೊಂದು ಉದಾಹರಣೆಯನ್ನು ಪವಿತ್ರ ಕುರ್‌ಆನಿನ ಸೂರಃ ಅಲ್ ಕಹ್ಫ್‌ನಲ್ಲಿ ನೋಡಬಹುದಾಗಿದೆ. ಪ್ರವಾದಿ ಮೂಸಾ(ಅ)ಮತ್ತು ಅವರ ಗುರುಗಳು ಒಂದು ಊರಿನ ಮೂಲಕ ಹಾದು ಹೋಗುತ್ತಿದ್ದರು. ಅಲ್ಲಿ ಅವರಿಗೆ ಸಿಕ್ಕಿದ ಒಬ್ಬ ಬಾಲಕನನ್ನು ಗುರುಗಳು ನಿಷ್ಕರುಣೆಯಿಂದ

ಸಾಯಿಸಿ ಬಿಟ್ಟರು. ಆ ಬಾಲಕನ ಹೆತ್ತವರಿಗೆ ಈ ಘಟನೆಯಿಂದ ಎಷ್ಟು ನೋವಾಗಬಹುದೆಂದು ಊಹಿಸಬಹುದಲ್ಲವೇ? ಸ್ವಾಭಾವಿಕವಾಗಿ ಮೂಸಾ(ಅ) ಗುರುವಿನ ವರ್ತನೆಯನ್ನು ಆಕ್ಷೇಪಿಸಿದರು. ಈ ರೀತಿಯ ಇನ್ನೂ ಕೆಲವು ಅಕ್ರಮಗಳು ಗುರುವಿನಿಂದ ಸಂಭವಿಸಿದವು. ಆದರೆ ಆ ಗುರು ಅಲ್ಲಾಹನ ವತಿಯಿಂದ ಸವಿಶೇಷವಾದ ಜ್ಞಾನ ಮತ್ತು ನಿಯಮಗಳು ಲಭಿಸಿದ ಮಹಾತ್ಮರಾಗಿದ್ದರು. ಬಳಿಕ ಆ ಗುರು ತನ್ನ ಶಿಷ್ಯನಿಗೆ ತಾನು ಮಾಡಿದ 'ಅಕ್ರಮ'ಗಳ ರಹಸ್ಯವನ್ನು ತಿಳಿಸಿ ಹೇಳಿದರು. ಬಾಲಕನನ್ನು ಕೊಂದುದಕ್ಕೆ ಆ ಗುರು ನೀಡಿದ ಕಾರಣ ಈ ಹೀಗಿತ್ತು– ಅವನ ಮಾತಾಪಿತರು ಬಹಳ ಒಳ್ಳೆಯ ವ್ಯಕ್ತಿಗಳು. ಆದರೆ ಬಾಲಕ ಒಳ್ಳೆಯವನಲ್ಲ, ಜೀವಂತವಾಗಿದ್ದರೆ ಆ ಬಾಲಕ ಮುಂದೆ ತನ್ನ ಮಾತಾಪಿತರಿಗೆ ಕಠಿಣ ದ್ರೋಹವನ್ನು ಬಗೆಯುತ್ತಾನೆ. ಅವನಿಗೆ ಬದಲಾಗಿ ಅವರನ್ನು ಪ್ರೀತಿಸುವ, ಅವರ ಸೇವೆ ಮಾಡುವ ಒಳ್ಳೆಯ ಸಂತಾನವನ್ನು ನೀಡುವುದು ಅಲ್ಲಾಹನ ಉದ್ದೇಶವಾಗಿತ್ತು. ಅಲ್ಲಾಹನನ್ನು ಸ್ಮರಿಸಿ ಜೀವಿಸುವ ಸಜ್ಜನರು ತಮ್ಮ ತಪ್ಪು ಕೆಲಸಗಳಿಂದಾಗಿ ಮತ್ತು ಅಶ್ರದ್ಧೆಯ ಕಾರಣ ಕೆಲವು ಕಷ್ಟನಷ್ಟಗಳನ್ನು ಎದುರಿಸಬೇಕಾಗುತ್ತದೆ. ಅದಕ್ಕೆ ಕಾರಣ ಅಲ್ಲಾಹನ ಸಂರಕ್ಷಣೆ ಅವರಿಗೆ ಸಿಗಲಿಲ್ಲ ಅಥವಾ ಅಲ್ಲಾಹನು ಅವರನ್ನು ಕಡೆಗಣಿಸಿರುವನು ಎಂದು ಭಾವಿಸಬೇಕಾಗಿಲ್ಲ, ಅವುಗಳನ್ನು ಅಲ್ಲಾಹನ ಸಂರಕ್ಷಣೆಯ ಒಂದು ವಿಧಾನವಾಗಿ ಸ್ವೀಕರಿಸಬೇಕು. ಈ ಜೀವನದಲ್ಲೂ ಮರಣಾನಂತರ ಪರಲೋಕದಲ್ಲೂ ಅಲ್ಲಾಹನು ತನ್ನ ದಾಸರನ್ನು ಸಂರಕ್ಷಿಸುತ್ತಾನೆ.

ಮರಣಾನಂತರವೂ ಮರಣ ಹೊಂದಿದ ವ್ಯಕ್ತಿಯನ್ನು ಅಲ್ಲಾಹನು ಸಂರಕ್ಷಿಸುತ್ತಾನೆ ಎನ್ನುವುದಕ್ಕೆ ಒಂದು ಉದಾಹರಣೆಯು ಈ ಮೊದಲು ಹೇಳಿದ ಮೂಸಾ(ಅ) ಮತ್ತು ಅವರ ಗುರುವಿನ ಕಥೆಯಲ್ಲಿ ನೋಡಬಹುದು. ಗುರು ಮತ್ತು ಶಿಷ್ಯನು ಜನವಿರಳವಾಗಿರುವ ಒಂದು ಗ್ರಾಮದ ಮೂಲಕ ಹಾದು ಹೋಗುತ್ತಿದ್ದರು. ಹೋಟೇಲುಗಳಾಗಲೀ, ಛತ್ರಗಳಾಗಲೀ ಇಲ್ಲದ ಒಂದು ಗ್ರಾಮ. ಗ್ರಾಮವಾಸಿಗಳು ಅವರಿಗೆ ಹಸಿವು ನೀಗಿಸಲಿಕ್ಕಾಗಿ ಆಹಾರವನ್ನಾಗಲೀ, ಉಳಿದುಕೊಳ್ಳಲು ವ್ಯವಸ್ಥೆಯನ್ನಾಗಲೀ ಮಾಡಿಕೊಡಲಿಲ್ಲ, ಹೀಗೆ ಅವರು ಅಸಹಾಯಕರಾಗಿ ಹೋಗುತ್ತಿದ್ದಾಗ ಒಂದೆಡೆ ಮುರಿದು ಬಿದ್ದಿದ್ದ ಒಂದು ಗೋಡೆಯನ್ನು ಕಂಡರು. ಗುರು ಆ ಗೋಡೆಯನ್ನು ಶ್ರಮ ಪಟ್ಟು ಸರಿಪಡಿಸಿ ಸುದೃಢಗೊಳಿಸಿ ನಿಲ್ಲಿಸಿದರು. ಯಾರಿಂದಲೂ ಯಾವುದೇ ಪ್ರತಿಫಲವನ್ನು ನಿರೀಕ್ಷಿಸಲಿಲ್ಲ, ಇದನ್ನು ನೋಡಿದ ಮೂಸಾ(ಅ) ಕೇಳಿದರು. 'ನೀವು ಈ ಕೆಲಸಕ್ಕೆ ಮಜೂರಿ ಪಡೆದುಕೊಂಡಿದ್ದರೆ ಅದರಿಂದ ನಾವು ಆಹಾರವನ್ನು ಖರೀದಿಸಬಹುದಿತ್ತಲ್ಲವೇ?' ಆದರೆ ಅವರು ಅದಕ್ಕೆ ಒಪ್ಪಲಿಲ್ಲ, ಕೊನೆಯಲ್ಲಿ ತಮ್ಮ ಕೆಲಸಗಳ ಬಗ್ಗೆ ವಿವರಣೆಯನ್ನು ನೀಡಿದಾಗ ತಮ್ಮ ಈ ಕೆಲಸಕ್ಕೆ ಅವರು ನೀಡಿದ ವಿವರಣೆ ಹೀಗಿತ್ತು.– 'ಆ ಗೋಡೆಯ ಅಡಿಯಲ್ಲಿ ಒಂದು ನಿಧಿಯಿದೆ. ಅದು ಎರಡು ಅನಾಥ ಮಕ್ಕಳಿಗೆ ಸೇರಿದ್ದಾಗಿದೆ. ಅವರ ತಂದೆ ಬಹಳ ಉತ್ತಮ ಮನುಷ್ಯನಾಗಿದ್ದ, ಈಗಲೇ ಆ ನಿಧಿ ಹೊರಬಂದರೆ ದುಷ್ಟ ವ್ಯಕ್ತಿಗಳು ಅದನ್ನು ತಮ್ಮದಾಗಿಸಿಕೊಳ್ಳುವರು. ಆದುದರಿಂದ ಸದ್ಯಕ್ಕೆ ಆ ನಿಧಿ ಅಡಗಿಯೇ

ಇರಬೇಕು. ಆ ಒಳ್ಳೆಯ ಸಜ್ಜನ ಮಕ್ಕಳು ಪ್ರಾಯ ಪ್ರಬುದ್ಧರಾದ ಬಳಿಕ ಅದನ್ನು ನೋಡಿದರೆ ಸಾಕೆಂಬುದು ಅಲ್ಲಾಹನ ತೀರ್ಮಾನವಾಗಿತ್ತು.' ಅಲ್ಲಾಹನನ್ನು ಭಯಪಟ್ಟು ಜೀವಿಸಿದ ವ್ಯಕ್ತಿಯನ್ನು ಮರಣಾ ನಂತರವೂ ಅಲ್ಲಾಹನು ಸಂರಕ್ಷಿಸುತ್ತಾನೆ ಎಂಬುದನ್ನು ಈ ಘಟನೆಯು ನಮಗೆ ಮನವರಿಕೆ ಮಾಡಿಕೊಡುತ್ತದೆ. ಪರಲೋಕದಲ್ಲಿ ಅಲ್ಲಾಹನು ನಮ್ಮನ್ನು ಸಂರಕ್ಷಿಸುತ್ತಾನೆ ಎಂಬುದು ಸತ್ಯವಿಶ್ವಾಸಿಗಳಿಗೆ ಸಂಬಂಧಪಟ್ಟಂತೆ ಯಾವುದೇ ಚರ್ಚೆಯಿಲ್ಲದ ವಿಷಯವಾಗಿದೆ.

ಅಲ್ಲಾಹನನ್ನು ಸ್ಮರಿಸುತ್ತಿದ್ದರೆ ಅವನು ಸದಾ ನಮ್ಮೊಂದಿಗೆ ಇರುತ್ತಾನೆ. ಎಂದಿಗೂ ಅವನು ನಮ್ಮನ್ನು ಬಿಟ್ಟಗಲುವುದಿಲ್ಲ. ನಾವು ಅಲ್ಲಾಹನನ್ನು ಮರೆತರೆ ಅವನು ನಮ್ಮನ್ನು ಬಿಟ್ಟಗಲುತ್ತಾನೆ. 'ನೀವು ನನ್ನನ್ನು ಸ್ಮರಿಸುತ್ತಲಿರಿ. ನಾನು ನಿಮ್ಮನ್ನು ಸ್ಮರಿಸುವೆನು' ಎಂದು ಪವಿತ್ರ ಕುರ್‌ಆನ್ ನಮ್ಮನ್ನು ನೆನಪಿಸುತ್ತದೆ. ಅಲ್ಲಾಹನ ಬಗ್ಗೆ ಜಾಗೃತಾವಸ್ಥೆಯಲ್ಲಿ ನಮ್ಮ ಮನಸ್ಸು ಇದ್ದಾಗ ನಮ್ಮ ಮುಂದೆ ಅಲ್ಲಾಹನನ್ನು ಕಾಣಬಹುದೆಂದು ಪ್ರವಾದಿ ಮುಹಮ್ಮದ್(ಸ) ಹೇಳಿರುವರು. ಅಲ್ಲಾಹನು ಭೌತಿಕ ಶರೀರದೊಂದಿಗೆ ನಮ್ಮ ಮುಂದೆ ಬಂದು ನಿಲ್ಲುತ್ತಾನೆ ಎಂಬುದು ಈ ಮಾತಿನ ಅರ್ಥವಲ್ಲ. ಎಲ್ಲ ಸಂದರ್ಭಗಳಲ್ಲೂ ಅಲ್ಲಾಹನು ನಮ್ಮನ್ನು ನೇರಮಾರ್ಗದಲ್ಲೇ ಮುಂದುವರಿಸುತ್ತಾನೆ ಎಂಬುದು ಇದರ ಅರ್ಥವಾಗಿದೆ. ಸಮಸ್ಯೆಗಳು, ಸಂಕಷ್ಟಗಳು ಎದುರಾದರೂ ನಾವು ಭಯಭೀತರಾಗುವುದಿಲ್ಲ. ಅಲ್ಲಾಹನು ನಮ್ಮೊಂದಿಗಿದ್ದಾನೆ ಎಂಬ ವಿಶ್ವಾಸವು ಧೈರ್ಯ ಮತ್ತು ಸಮಾಧಾನವನ್ನು ನೀಡುತ್ತಿರುತ್ತದೆ. ಸರಿ-ತಪ್ಪು, ಸತ್ಯ-ಮಿಥ್ಯ, ಒಳಿತು-ಕೆಡುಕುಗಳನ್ನು ಬೇರ್ಪಡಿಸಿ ತಿಳಿಯಲು ಸಾಧ್ಯವಾಗದಂತೆ ಸ್ತಬ್ಧರಾಗಿ ಬಿಡಬೇಕಾಗಿಲ್ಲ. ಯಾವುದು ಸರಿ, ಸತ್ಯವೇನು, ಒಳಿತೇನು ಎಂಬುದನ್ನೆಲ್ಲ ಸೂಕ್ತ ಸಮಯದಲ್ಲಿ ಅವನು ನಮಗೆ ತೋರಿಸಿಕೊಡುತ್ತಿರುವನು. ಈ ಕೆಲಸಗಳಿಗೆ ನಮಗೆ ಸಹಾಯಕವಾಗಲೆಂದು ಅವನು ದೈವಿಕ ಗ್ರಂಥಗಳನ್ನು ಕಳುಹಿಸಿರುವನು. ಇದರಿಂದ ಬೇಕಾದ ರೀತಿಯಲ್ಲಿ ಮಾರ್ಗದರ್ಶನ ಪಡೆದರೆ ಸಾಕಾಗುತ್ತದೆ.

ಅದನ್ನೇ ಮುಂದುವರಿಸುತ್ತಾ ಹೇಳಲಾಗುತ್ತದೆ. ಸಂಶಯ ನಿವಾರಣೆಗೆ, ಪ್ರಶ್ನೆಗಳನ್ನು ಎದುರಿಸಬೇಕಾಗಿ ಬಂದಾಗ ಮೊತ್ತಮೊದಲು ಅಲ್ಲಾಹನೊಂದಿಗೆ ಬೇಡಿರಿ. ಅವನು ಕಳುಹಿಸಿದ ಕುರ್‌ಆನ್ ಮತ್ತು ಅವನು ಕಳುಹಿಸಿದ ಪ್ರವಾದಿಯವರು ಏನು ಹೇಳುತ್ತಾರೆ ಎಂಬುದೇ ಅಲ್ಲಾಹನೊಂದಿಗೆ ಬೇಡುವುದಾಗಿದೆ. ಇಷ್ಟು ಮಾತ್ರವಲ್ಲದೆ ನಮ್ಮ ಎಲ್ಲ ಬೇಡಿಕೆಗಳನ್ನೂ ಅಲ್ಲಾಹನ ಮುಂದೆ ಇಡಬೇಕು. ಆ ಬಳಿಕ ಅವನು ಅವುಗಳ ಪೂರ್ತೀಕರಣಕ್ಕೆ ನಮಗೆ ಕಲಿಸಿಕೊಟ್ಟಿರುವ ಸ್ವಾಭಾವಿಕ ಮಾರ್ಗಗಳನ್ನು ಸ್ವೀಕರಿಸಬೇಕು. ನಮ್ಮ ಅಗತ್ಯಗಳಿಗೆ, ಸಮಸ್ಯೆಗಳ ಪರಿಹಾರಕ್ಕೆ ಸಹಾಯ ಬೇಡುವುದು ಎಲ್ಲವೂ ಅಲ್ಲಾಹನೊಂದಿಗಾಗಿರಬೇಕು. ಅಲ್ಲಾಹನ ಕೃಪೆ ಇದ್ದರೆ ಮಾತ್ರ ಯಾವುದಾದರೂ ಭೌತಿಕ ಉಪಾಧಿಗಳಿಗೆ ನಮಗೆ ಸಹಾಯ ನೀಡಲಿಕ್ಕೆ ಸಾಧ್ಯ. ಅಭೌತಿಕವಾದ ರೀತಿಯಲ್ಲಿ ಇರುವ ಸಹಾಯವಾಗಿದ್ದರೆ ಅದನ್ನು ಅಲ್ಲಾಹನೊಂದಿಗೆ ಮಾತ್ರ ಕೇಳಲು ಸಾಧ್ಯ. ಅಭೌತಿಕ ಜ್ಞಾನ ಮತ್ತು ಸಾಮರ್ಥ್ಯ ಸಂಪೂರ್ಣವಾಗಿ ಅಲ್ಲಾಹನ ಹಸ್ತದಲ್ಲಿದೆ.

ಅದು ಬೇರೆಯಾರೊಂದಿಗಾದರೂ ಇದೆ ಎಂದು ಸಂಕಲ್ಪ ಮಾಡಿದರೆ ಮತ್ತು ಅವರೊಂದಿಗೆ ಸಹಾಯಕ್ಕಾಗಿ ಮೊರೆ ಹೋಕ್ಕರೆ ಅಲ್ಲಾಹನಿಗೆ ಮಾತ್ರ ಸೀಮಿತವಾಗಿರುವ ಅವನ ಹಕ್ಕುಗಳಲ್ಲಿ ಬೇರೆಯವರನ್ನು ಸಹಭಾಗಿಗಳಾಗಿಸಿದಂತೆ ಆಗುವುದು.

ಕ್ಷೇಮದಿಂದಿರುವಾಗ ನೀನು ಅಲ್ಲಾಹನನ್ನು ನೆನಪಿಸಿದರೆ ಅವನು ನಿನ್ನನ್ನು ಸಂಕಷ್ಟದ ಸಮಯದಲ್ಲಿ ನೆನಪಿಸುತ್ತಾನೆ ಎಂದು ಮುಂದುವರಿಯುತ್ತಾ ಹೇಳಲಾಗಿದೆ. ಇಲ್ಲಿ ನೆನಪಿಸು ವುದು ಎಂದು 'ತಅರ್ರಫ್' 'ಯಅ್‌ರಿಫು' ಎಂಬ ಪದಗಳ ಅರ್ಥ ಕೇವಲ ಅರಿಯುವುದು ಮಾತ್ರವಲ್ಲ, ಸರಿಯಾಗಿ ತಿಳಿದುಕೊಳ್ಳುವುದು, ಅಂಗೀಕರಿಸುವುದು, ಪರಿಚಯ ಪಡುವುದು ಎಂಬಿತ್ಯಾದಿ ಅರ್ಥಗಳೆಲ್ಲ ಒಳಗೊಂಡ ಪದವಾಗಿದೆ. ಇವುಗಳನ್ನೆಲ್ಲ ಗಣನೆಗೆ ತೆಗೆದುಕೊಂಡರೆ ಈ ಮೇಲಿನ ವಚನದಲ್ಲಿ ಈ ಪದದ ಅರ್ಥ ಸ್ಥಿರವಾಗಿ ಸಂಪರ್ಕ ಸಾಧಿಸುವುದು ಎಂಬುದಾಗಿ ತಿಳಿಯಬಹುದು. 'ತಅರುಫು ಇಲಲ್ಲಾಹ್' ಎಂಬುದನ್ನು ಭಕ್ತಿಯೊಂದಿಗೆ ವಿಧೇಯತೆಯೊಂದಿಗೆ, ಹೆಚ್ಚು ಹೆಚ್ಚು ಪ್ರಾರ್ಥಿಸುವ ಮೂಲಕ, ದಿಕ್ರ್‌ಗಳ ಮೂಲಕ ಅವನೊಂದಿಗೆ ಸಂಪರ್ಕವನ್ನು ಹೆಚ್ಚಿಸುವುದು ಎಂದು ವಿದ್ವಾಂಸರು ವ್ಯಾಖ್ಯಾನಿಸುತ್ತಾರೆ. الرَّخَاء ಎಂಬ ಪದವನ್ನು ಕ್ಷೇಮ ಎಂದು ಅನುವಾದಿಸಲಾಗಿದೆ. ಆರೋಗ್ಯ, ಸಂಪತ್ತು, ಕುಟುಂಬ, ಪರಿಸರ, ಮಾನಸಿಕ ಅವಸ್ಥೆ ಇತ್ಯಾದಿಗಳೆಲ್ಲವೂ ಒಳಗೊಂಡ ಕಾರ್ಯಗಳಲ್ಲಿ ಕ್ಷೇಮವನ್ನು ಈ ಮೂಲಕ ಉದ್ದೇಶಿಸಲಾಗಿದೆ.

ಅಗತ್ಯವಿರುವಾಗ ಮಾತ್ರ ಬೇಡುವುದು ಅನಿವಾರ್ಯತೆಯೊದಗಿದಾಗ ಅಲ್ಲಾಹ ನೊಂದಿಗೆ ಸಹಾಯ ಯಾಚಿಸುವುದು. ಇಂತಹ ಸಂದರ್ಭಗಳಲ್ಲಿ ಮಾತ್ರ ಅಲ್ಲಾಹನನ್ನು ಅರಿತರೆ ಸಾಲದು ಎಂಬುದನ್ನು ಈ ಪ್ರವಾದಿ ವಚನವು ನಮಗೆ ಮನವರಿಕೆ ಮಾಡಿಸುತ್ತದೆ. ಅಂತ್ಯ ಸಮೀಪಿಸಿದಾಗ ಎಲ್ಲರೂ ಅಲ್ಲಾಹನೆಡೆಗೆ ತಿರುಗುವರು. 'ಆಗ ಕೈಗಳನ್ನೆತ್ತಿ, ನಮ್ಮ ಪ್ರಭೂ ನಮ್ಮ ಪ್ರಭೂ!' ಎಂದು ಪ್ರಲಾಪಿಸುತ್ತಿರುವರು. ಆ ಸಂದರ್ಭದಲ್ಲಿ ಅಲ್ಲಾಹನನ್ನು ನೆನಪಿಸಿದವರನ್ನು ಅಲ್ಲಾಹನು ನೆನಪಿಸಬೇಕೆಂದೇನೂ ಇಲ್ಲ ಅಥವಾ ತಿರುಗಿ ನೋಡಬೇಕೆಂದೇನೂ ಇಲ್ಲ. ಬಹಳ ವ್ಯಥೆಯೊಂದಿಗೆ ಪದೇ ಪದೇ ಕೂಗಿ ಕರೆದು ಪ್ರಾರ್ಥಿಸಿದರೂ ಸಹಾಯ ಲಭಿಸುವುದು ಕಾಣದಿದ್ದರೆ ಕೆಲವರು ಅಲ್ಲಾಹನಿಗೆ ಕ್ರೂರತೆ, ನಿರ್ದಯತೆಯನ್ನು ಆರೋಪಿಸುತ್ತಾರೆ. ಕೆಲವರು ಅಂತಹ ಶಕ್ತಿ ಎಂಬುದೇ ಇಲ್ಲ ಎಂದು ಹೇಳಿ ಬಿಡುತ್ತಾರೆ. ಆದರೆ ಈ ಸಂಕಷ್ಟದ ಪರಿಸ್ಥಿತಿ ಬರುವ ಮುನ್ನ ನಾನು ಅಲ್ಲಾಹನನ್ನು ಅರಿತಿರಲೇ ಇಲ್ಲ, ತಿರುಗಿ ನೋಡಲೇ ಇಲ್ಲ ಎಂಬುದನ್ನು ಅವರು ನೆನಪಿಸಿಕೊಳ್ಳುವುದಿಲ್ಲ.

ಅಲ್ಲಾಹನ ದಾಸನು ತನ್ನ ಸುದಿನಗಳಲ್ಲೂ ದುರ್ದಿನಗಳಲ್ಲೂ ಒಂದೇ ರೀತಿಯಲ್ಲಿ ಅಲ್ಲಾಹನನ್ನು ನೆನಪಿಸುತ್ತಿರಬೇಕು. ನಾನು ಅಲ್ಲಾಹನ ದಾಸನಾಗಿದ್ದೇನೆ. ನನಗೆ ಸಿಕ್ಕಿರುವ ಸೌಭಾಗ್ಯಗಳೆಲ್ಲವೂ ಅವನು ಮಾತ್ರ ನೀಡಿರುವವುಗಳು. ಅವನನ್ನು ಅನುಸರಿಸುವುದು, ಅವನ ಆರಾಧನೆ ಮಾಡುವುದು ನನ್ನ ಕರ್ತವ್ಯವಾಗಿದೆ ಎಂಬ ದೃಢವಾದ ನಂಬಿಕೆಯು ಅಲ್ಲಾಹನನ್ನು ಅರಿಯುವುದರ ಸರಿಯಾದ ರೂಪವಾಗಿದೆ. ಈ ಪ್ರಜ್ಞೆಯಿಲ್ಲದವನು ಅಲ್ಲಾಹನನ್ನು ಅರಿಯದವ

ನಾಗಿದ್ದಾನೆ. ಭಯ-ಭಕ್ತಿಯೊಂದಿಗೆ ಅಲ್ಲಾಹನನ್ನು ಸ್ಮರಿಸುತ್ತಿರುವುದು. ತನಗೆ ನೀಡಿದ ಅನುಗ್ರಹಗಳಿಗಾಗಿ ಅವನೊಂದಿಗೆ ಗರಿಷ್ಠ ಕೃತಜ್ಞತೆಯುಳ್ಳವನಾಗಿರುವುದು ತನ್ನ ಸೌಭಾಗ್ಯಗಳು ತನ್ನನ್ನು ದೇವಧಿಕ್ಕಾರದೆಡೆಗೆ, ಕೃತಘ್ನತೆಯೆಡೆಗೆ ಒಯ್ಯದಿರಲಿ ಎಂದು ಪ್ರಾರ್ಥಿಸುತ್ತಿರುವುದು ಇವೆಲ್ಲವೂ ಅಲ್ಲಾಹನನ್ನು ಅರಿಯುವುದರ ಪ್ರಾಯೋಗಿಕ ಫಲವಾಗಿದೆ. ಹೀಗೆ ತತ್ವದಲ್ಲಿಯೂ, ಪ್ರಾಯೋಗಿಕವಾಗಿಯೂ ಅಲ್ಲಾಹನನ್ನು ಅರಿಯುವುದು, ಸ್ಮರಿಸುತ್ತಿರುವವರನ್ನು ಅಲ್ಲಾಹನು ಎಂದೂ ಕೈ ಬಿಡುವುದಿಲ್ಲ. ಸಮಸ್ಯೆಗಳು ಎದುರಾದಾಗ ಅವರು ಅವನನ್ನು ಕೂಗಿ ಕರೆದರೆ ಅವನು ಅತಿ ಹತ್ತಿರ ಇರುವನು.

ಯಾವುದೇ ಕೆಲಸವು ಯಶಸ್ಸನ್ನು ಗಳಿಸಬೇಕಾದರೆ ಸ್ವಾಭಾವಿಕವಾಗಿ ಕೆಲವು ಉಪಾಧಿಗಳಿರುತ್ತವೆ. ವ್ಯಾಪಾರದಲ್ಲಿ ಮೂಲಧನ(ಬಂಡವಾಳ), ಕೃಷಿಯಲ್ಲಿ ಯಂತ್ರಗಳು, ಧಾರ್ಮಿಕ ಜೀವನದಲ್ಲಿ ಸತ್ಯವಿಶ್ವಾಸ, ಧರ್ಮದ ಬಗ್ಗೆ ತಿಳುವಳಿಕೆ ಇತ್ಯಾದಿ. ಆದರೆ ಈ ಎಲ್ಲಾ ಸ್ವಾಭಾವಿಕ ಉಪಾಧಿಗಳು ಸಾಕಷ್ಟು ಲಭ್ಯವಿದ್ದರೂ ಹಲವರು ಈ ಕ್ಷೇತ್ರಗಳಲ್ಲಿ ವಿಫಲರಾಗುವುದನ್ನು ನೋಡಬಹುದಾಗಿದೆ. ಇದಕ್ಕೆಲ್ಲಾ ಕಾರಣ ಸಹನೆಯ ಕೊರತೆಯಾಗಿದೆ. ಸಹನೆಯೊಂದಿಗೆ ಪ್ರಯತ್ನಿಸಿ ಕೆಲಸ ಮಾಡಿದರೆ ಯಾವುದೇ ಕೆಲಸವು ಯಶಸ್ಸನ್ನು ಗಳಿಸುತ್ತದೆ. ಕೆಲವರು ಎಲ್ಲಾ ಸೌಕರ್ಯಗಳೊಂದಿಗೆ ದೊಡ್ಡ ಮಟ್ಟದಲ್ಲಿ ವ್ಯಾಪಾರವನ್ನು ಆರಂಭಿಸುತ್ತಾರೆ. ಆರಂಭದಲ್ಲಿಯೇ ತಾವು ನಿರೀಕ್ಷಿಸಿದ ರೀತಿಯಲ್ಲಿ ಲಾಭ ಸಿಗದಿದ್ದರೆ ಅಥವಾ ಕೆಲಸದಲ್ಲಿ ಏನಾದರೂ ಅಡ್ಡಿ ಆತಂಕಗಳು ಎದುರಾದರೆ ಎಲ್ಲವನ್ನೂ ಬಿಟ್ಟು ಬೇರೆಯೇ ದಾರಿಯನ್ನು ಕಂಡುಕೊಳ್ಳುತ್ತಾರೆ. ವಿದ್ಯಾಭ್ಯಾಸ, ಉದ್ಯೋಗ, ದಾಂಪತ್ಯ ಜೀವನ, ಸಂಘಟನಾತ್ಮಕ ಕೆಲಸ, ಪ್ರಚಾರ ಇತ್ಯಾದಿಗಳ ವಿಷಯದಲ್ಲೂ ಈ ರೀತಿಯ ವ್ಯಕ್ತಿಗಳನ್ನು ನಾವು ನೋಡಬಹುದಾಗಿದೆ. ಅದೇ ವೇಳೆ ಸಣ್ಣ ಮೊತ್ತದ ಬಂಡವಾಳದಿಂದ ಆರಂಭಿಸಿ ದೊಡ್ಡ ವ್ಯಾಪಾರವನ್ನು ನಡೆಸುವವರು, ಶಿಕ್ಷಣ ಮತ್ತು ಜ್ಞಾನವನ್ನು ಹೊಂದಿದ್ದರೂ ಕೆಡುಕಿನಿಂದ ತುಂಬಿದ ಜೀವನವನ್ನು ನಡೆಸುವಾಗ, ಸಾಮಾನ್ಯ ವಿದ್ಯಾಭ್ಯಾಸವೂ ಇಲ್ಲದ ವ್ಯಕ್ತಿಗಳು ಗೌರವಾರ್ಹವಾದ ಉತ್ತಮ ಜೀವನವನ್ನು ಸಾಗಿಸುತ್ತಿರುವುದನ್ನು ಕಾಣಬಹುದು. ಕ್ಷಮೆ ಮತ್ತು ಸಹನೆಯು ಅವರ ಯಶಸ್ಸಿನ ಹಿಂದಿರುವ ಗುಟ್ಟು. ತಾಳ್ಮೆಯಿಲ್ಲದಿದ್ದರೆ ಬೇರೆಲ್ಲಾ ಸೌಕರ್ಯಗಳನ್ನು ಹೊಂದಿದ್ದರೂ ಯಾವುದೇ ಕೆಲಸದಲ್ಲಿ ಯಶಸ್ಸನ್ನು ಗಳಿಸುವುದು ಸಾಧ್ಯವಿಲ್ಲ. ಯಶಸ್ವೀ ದಾಂಪತ್ಯ ಜೀವನ ನಡೆಸಬೇಕಾದರೆ ಒಂದು ಉತ್ತಮ ಕುಟುಂಬವಿರಬೇಕು. ಪತಿ-ಪತ್ನಿಯರಲ್ಲಿ ಎಷ್ಟೇ ಯೋಗ್ಯತೆಗಳಿದ್ದರೂ, ಸಹನೆಯೊಂದಿಲ್ಲದಿದ್ದರೆ ಅವರ ದಾಂಪತ್ಯ ಜೀವನ ಯಶಸ್ವಿಯಾಗುವುದಿಲ್ಲ. ಸಹನೆಯೊಂದು ಧಾರಾಳವಾಗಿದ್ದರೆ ಅಷ್ಟೇನೂ ಯೋಗ್ಯತೆಯಿಲ್ಲದವರು ಕೂಡಾ ಸುಖಕರ ದಾಂಪತ್ಯ ಜೀವನವನ್ನು ನಡೆಸಬಹುದು. ಎಲ್ಲ ವಿಷಯಗಳಲ್ಲೂ ಸಹನೆಯನ್ನು ಪಾಲಿಸಲು ಕಲಿಯಬೇಕು. ಅದುವೇ ಎಲ್ಲಾ ಕೆಲಸಗಳು ಯಶಸ್ಸನ್ನು ಗಳಿಸಲಿಕ್ಕಿರುವ ಪ್ರಥಮ ಉಪಾಧಿಯಾಗಿದೆ. ಸಹನೆ ವಹಿಸುವುದೆಂದರೆ ಬಿಟ್ಟುಬಿಡುವುದು ಅಥವಾ ನಿಷ್ಕ್ರಿಯರಾಗುವುದು ಎಂದಲ್ಲ. ಸಹನೆ

ವಹಿಸುವುದೆಂದರೆ ಗುರಿ ಸಾಧನೆಗೆ ಅಡ್ಡಿಯಾಗಿರುವ ಎಲ್ಲವನ್ನು ಶ್ರಮಪಟ್ಟು ಹೇಗಾದರೂ ನೀಗಿಸಿಕೊಂಡು, ಅಡ್ಡಿ ಆತಂಕಗಳನ್ನು ಮೆಟ್ಟಿಕೊಂಡು ಗುರಿಯೆಡೆಗೆ ಮುನ್ನುಗ್ಗುವುದು. ಹೀಗೆ ಮಾಡುವವರ ಲೌಕಿಕ ಮತ್ತು ಪಾರತ್ರಿಕ ಜೀವನವು ವಿಜಯಶಾಲಿಯಾಗುತ್ತದೆ. ''ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲರೊಂದಿಗಿದ್ದಾನೆ.'' (ಪವಿತ್ರ ಕುರ್‌ಆನ್)

ಮುಂದುವರಿಯುತ್ತಾ ಎರಡು ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ಸುಖವು ದುಃಖ ದೊಂದಿಗೆ ಮತ್ತು ಸಂಕೀರ್ಣತೆಯೊಂದಿಗೆ ವೈಶಾಲ್ಯವೂ ಇದೆ. ಸಹನೆಯು ವಿಜಯದ ಅನಿವಾರ್ಯ ಉಪಾಧಿಯೇಕೆ ಎಂಬುದಕ್ಕೆ ಇದು ಮತ್ತಷ್ಟು ವಿವರಣೆಯಾಗಿದೆ. ದುಃಖವನ್ನು ಎದುರಿಸದೆ, ಸಹಿಸದೆ ನಿಮಗೆ ಸುಖವು ಸಿಗುವುದಿಲ್ಲ, ದುಃಖವನ್ನು ಎದುರಿಸಲು ಸಹನೆಯಿಲ್ಲದವರಿಗೆ ಸಾಧ್ಯವಿಲ್ಲ, ವೈಶಾಲ್ಯದ ವಿಷಯವೂ ಇದೇ ರೀತಿಯಾಗಿದೆ. ಯಾವುದಾದರೂ ಕೊರತೆಯನ್ನು ತುಂಬಿಸಲು ಇದ್ದರೆ ಮಾತ್ರ ನಮಗೆ ಏನನ್ನಾದರೂ ಸಾಧಿಸಲು ಸಾಧ್ಯವಾಗುತ್ತದೆ. ಕೊರತೆಯನ್ನು ತುಂಬುವುದು ಎಂದರೆ ಸಹನೆಯೊಂದಿಗೆ ಅದಕ್ಕಾಗಿ ಪ್ರಯತ್ನಿಸುತ್ತಿರುವುದಾಗಿದೆ.ಹದೀಸಿನ ಮೂಲ ವಚನವನ್ನು ಸಂಕೀರ್ಣತೆಯೊಂದಿಗೆ ವೈಶಾಲ್ಯವೂ ಇದೆ ಎಂದು ಅನುವಾದಿಸಲಾಗಿದೆ. ಕಠಿಣ ಶ್ರಮದಿಂದ ಅಡ್ಡಿ ಆತಂಕಗಳನ್ನು ಎದುರಿಸಿ ಮುನ್ನುಗ್ಗಿದರೆ ಸುಸ್ಥಿತಿಗೆ ತಲುಪಬಹುದು ಎಂಬುದು ಇದರ ಆಶಯವಾಗಿದೆ.

ಸುಖ ದುಃಖಗಳು, ಸಂಕೀರ್ಣತೆ-ವೈಶಾಲ್ಯಗಳೊಂದಿಗೆ ಜೀವಿಸುವುದನ್ನು ಎತ್ತಿ ಹೇಳಿರುವುದಕ್ಕೆ ಇನ್ನೂ ಕೆಲವು ಅರ್ಥಗಳಿವೆ. ದುಃಖದ ಅಭಾವದಲ್ಲಿ ಸುಖಕ್ಕೆ ಯಾವುದೇ ಮಹತ್ವವಿಲ್ಲ, ದುಃಖವಿಲ್ಲದಿದ್ದರೆ ಸುಖವಿಲ್ಲ, ಸಂಕೀರ್ಣತೆಯಿಲ್ಲದಿದ್ದರೆ ವೈಶಾಲ್ಯವೂ ಇಲ್ಲ, ಈ ವೈರುಧ್ಯಗಳನ್ನು ತಳ್ಳಿ ಹಾಕುವುದು ಅಸಾಧ್ಯ. ಏಕೆಂದರೆ ಅದರ ಅಸ್ತಿತ್ವವೇ ಪರಸ್ಪರ ಪೂರಕವಾಗಿರುತ್ತದೆ. ಈ ದ್ವಂದ್ವಗಳ ಮಧ್ಯೆ ದೇವನ ಮೇಲೆ ವಿಶ್ವಾಸ, ಧಾರ್ಮಿಕ ಸದಾಚಾರಗಳು, ಮೌಲ್ಯಗಳಲ್ಲಿ ಬಹಳ ಭದ್ರವಾಗಿ ನೆಲೆ ನಿಲ್ಲುವಾಗ ಜೀವನವು ಸಾರ್ಥಕ ಮತ್ತು ವಿಜಯಶಾಲಿಯಾಗುತ್ತದೆ. ಈ ರೀತಿ ದೃಢವಾಗಿ ನಿಲ್ಲುವುದಕ್ಕೆ ಧೈರ್ಯ, ಸ್ಥೈರ್ಯವನ್ನು ನೀಡುವ ಶಕ್ತಿಯೇ ಕ್ಷಮೆ ಮತ್ತು ಸಹನೆಯಾಗಿದೆ.



# 5. ಅಲ್ಲಾಹನ ಕರುಣೆ ಮತ್ತು ಔದಾರ್ಯ

عَنْ أَبِي هُرَيْرَةَ رَضِيَ اللهُ عَنْهُ قَالَ: قَالَ رَسُولُ اللهِ ﷺ
إِنَّ لِلَّهِ مِائَةَ رَحْمَةٍ فَمِنْهَا رَحْمَةٌ بِهَا يَتَرَاحَمُ الْخَلْقُ بَيْنَهُمْ وَتِسْعَةٌ
وَتِسْعِينَ لِيَوْمِ الْقِيَامَةِ (متفق عليه)

ಅಬೂಹುರ್ರೈರ(ರ) ಉಲ್ಲೇಖಿಸುತ್ತಾರೆ: ಪ್ರವಾದಿ ಮುಹಮ್ಮದ್(ಸ) ಹೇಳಿದರು: ಅಲ್ಲಾಹನೊಂದಿಗೆ ನೂರು ಕಾರುಣ್ಯವಿದೆ. ಅದರ ಪೈಕಿ ಒಂದು ಕಾರುಣ್ಯದಿಂದಾಗಿ ಸೃಷ್ಟಿಗಳು ಪರಸ್ಪರ ಕರುಣೆ ತೋರುತ್ತಾರೆ. ಬಾಕಿಯಿರುವ ತೊಂಬತ್ತೊಂಬತ್ತು ಕರುಣೆಯು ಪುನರುತ್ಥಾನ ದಿನದಂದು ಪ್ರಕಟವಾಗುವುದು. (ಮುತ್ತಫಕುನ್ ಅಲೈಹಿ)

عَنِ ابْنِ عَبَّاسٍ عن رَسُولِ اللهِ ﷺ فِيمَا يَرْوِي عَنْ رَبِّهِ تَبَارَكَ وَتَعَالَى
قَالَ إِنَّ اللَّهَ كَتَبَ الْحَسَنَاتِ وَالسَّيِّئَاتِ ثُمَّ بَيَّنَ ذَلِكَ
فَمَنْ هَمَّ بِحَسَنَةٍ فَلَمْ يَعْمَلْهَا كَتَبَهَا اللَّهُ عِنْدَهُ حَسَنَةً كَامِلَةً وَإِنْ هَمَّ بِهَا فَعَمِلَهَا
كَتَبَهَا اللَّهُ عَزَّوَجَلَّ عِنْدَهُ عَشْرَ حَسَنَاتٍ إِلَى سَبْعِ مِائَةِ ضِعْفٍ إِلَى أَضْعَافٍ كَثِيرَةٍ وَإِنْ
هَمَّ بِسَيِّئَةٍ فَلَمْ يَعْمَلْهَا كَتَبَهَا اللَّهُ عِنْدَهُ حَسَنَةً كَامِلَةً وَإِنْ هَمَّ بِهَا فَعَمِلَهَا
كَتَبَهَا اللَّهُ سَيِّئَةً وَاحِدَةً (بخارى ومسلم)

ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳಿರುವುದಾಗಿ ಇಬ್ನ್ ಅಬ್ಬಾಸ್(ರ) ವರದಿ ಮಾಡುತ್ತಾರೆ: ಅಲ್ಲಾಹನು ಒಳಿತು ಕೆಡುಕುಗಳನ್ನು ಸ್ಪಷ್ಟಪಡಿಸಿರುತ್ತಾನೆ. ಬಳಿಕ ಅದನ್ನು ವಿಶದೀಕರಿಸುತ್ತಾನೆ. ಒಬ್ಬ ವ್ಯಕ್ತಿ ಒಂದು ಸತ್ಕರ್ಮವನ್ನು ಮಾಡ ಬಯಸುತ್ತಾನೆ. ಆದರೆ ಅವನು ಅದನ್ನು ಮಾಡುವುದಿಲ್ಲ, ಆದರೂ ಅಲ್ಲಾಹನು ಅದನ್ನು ಒಂದು ಸತ್ಕರ್ಮವಾಗಿ ಬರೆದಿಡುವನು. ಸತ್ಕರ್ಮ ಮಾಡಲು ಬಯಸಿ ಅದನ್ನು ಮಾಡಿದರೆ ಅಲ್ಲಾಹನು ಅವನಿಗೆ ಹತ್ತರಿಂದ ಏಳ್ನೂರರ

ವರೆಗೆ ಅಥವಾ ಅದಕ್ಕಿಂತಲೂ ಹೆಚ್ಚು ಪುಣ್ಯಗಳನ್ನು ಬರೆದಿಡುವನು. ಒಬ್ಬ ವ್ಯಕ್ತಿ ಕೆಡುಕನ್ನು ಮಾಡಬೇಕೆಂದು ಆಲೋಚಿಸುವನು. ಆದರೆ ಅವನು ಅದನ್ನು ಮಾಡುವುದಿಲ್ಲ. ಹಾಗಾದರೆ ಅಲ್ಲಾಹನು ಅವನ ಪಾಲಿಗೆ ಒಂದು ಸತ್ಕರ್ಮವೆಂದು ಬರೆದಿಡುವನು. ಇನ್ನು ಒಬ್ಬ ವ್ಯಕ್ತಿ ಕೆಡುಕನ್ನು ಮಾಡಲು ಬಯಸಿ ಅದನ್ನು ಮಾಡಿದರೆ ಅವನ ಪಾಲಿಗೆ ಒಂದು ಪಾಪವನ್ನು ಬರೆದಿಡುವನು.

(ಬುಖಾರಿ, ಮುಸ್ಲಿಮ್)

ಕರುಣೆ ಎಂಬ ಮನುಷ್ಯ ಸ್ವಭಾವದ ಮಹತ್ವ ಮತ್ತು ಪ್ರಾಧಾನ್ಯತೆಯನ್ನು, ದೇವನ ಕಾರುಣ್ಯದ ಮಹಾನತೆಯನ್ನು ಮನದಟ್ಟು ಪಡಿಸುವ ಪ್ರವಾದಿ ವಚನವಿದು. ಸ್ನೇಹ, ಕಾರುಣ್ಯದ ಸಾಕಾರ ಮೂರ್ತಿಗಳೆಂದು ಪರಿಗಣಿಸಲ್ಪಟ್ಟ ಅನೇಕ ವ್ಯಕ್ತಿಗಳು ಜಗತ್ತಿನಲ್ಲಿದ್ದಾರೆ. ಹಿಂದೆಯೂ ಇದ್ದರು. ಇನ್ನೂ ಅಂತಹವರು ಬರಬಹುದು. ಲಕ್ಷೋಪಲಕ್ಷ ಮನುಷ್ಯರಲ್ಲಿ ಜೀವಿಗಳಲ್ಲಿ ಕಂಡು ಬರುವ ಈ ಸ್ವಭಾವವನ್ನು ಒಂದು ವಸ್ತುವಿನ ರೂಪದಲ್ಲಿ ಪರಿಗಣಿಸಿದರೆ ಆ ವಸ್ತು ಎಷ್ಟು ದೊಡ್ಡದಾಗಿ ಕಾಣಬಹುದು ಎಂದು ಆಲೋಚಿಸಿ ನೋಡಿ. ಅವೆಲ್ಲವುಗಳನ್ನು ಒಟ್ಟು ಸೇರಿಸಿದರೆ ಅದನ್ನಿಡಲು ಈ ರೀತಿಯ ಅನೇಕ ಭೂಮಿಗಳು ಬೇಕಾಗಬಹುದು.

ಈ ಜಗತ್ತಿನಲ್ಲಿ ಮನುಷ್ಯರು ಪರಸ್ಪರ ತೋರ್ಪಡಿಸುವ ಪ್ರೀತಿ ಮತ್ತು ಕರುಣೆಯು ಅಲ್ಲಾಹನ ಪ್ರೀತಿ ಮತ್ತು ಕಾರುಣ್ಯದ ನೂರರಲ್ಲಿ ಒಂದಂಶವಾಗಿದೆ ಎಂದು ಪ್ರವಾದಿ ಮುಹಮ್ಮದ್‌ರು(ಸ) ಕಲಿಸಿರುವರು. ಹಾಗಾದರೆ ಅಲ್ಲಾಹನ ಕಾರುಣ್ಯವು ಎಷ್ಟು ಅಗಾಧ ಮತ್ತು ಅಪರಿಮಿತವಾಗಿರಬಹುದೆಂದು ಆಲೋಚಿಸಿ ನೋಡಿರಿ. ಆ ದೈವಿಕ ಗುಣದ ಆಳ ಮತ್ತು ವೈಶಾಲ್ಯ ನಮಗೆ ಈ ಲೋಕದಲ್ಲಿ ಮನವರಿಕೆಯಾಗಲು ಸಾಧ್ಯವಿಲ್ಲ. ಅಂತ್ಯ ದಿನದಂದು ಮಾತ್ರ ಅದು ಸೃಷ್ಟಿಗಳ ಮುಂದೆ ಪ್ರಕಟವಾಗುವುದು. 'ರಹ್ಮದ್' ಎಂಬುದು ಸ್ನೇಹ, ಕರುಣೆ, ದಯೆ, ಅನುಗ್ರಹ ಇತ್ಯಾದಿ ಅರ್ಥಗಳನ್ನೊಳಗೊಂಡ ಒಂದು ಪದವಾಗಿದೆ. ಈ ಗುಣಗಳುಳ್ಳವನೇ ರಹ್ಮಾನ್ ಮತ್ತು ರಹೀಮ್. ಅಲ್ಲಾಹನ ಸುಂದರ ಗುಣನಾಮಗಳಲ್ಲಿ ಈ ಹೆಸರುಗಳೂ ಸೇರಿವೆ. ಅಲ್ಲಾಹನು ರಹ್ಮತನ್ನು ತನ್ನ ಮೇಲೆ ಸ್ವಯಂ ಕಡ್ಡಾಯಗೊಳಿಸಿರುವನು ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ. ಅಲ್ಲಾಹನ ಕಾರುಣ್ಯದ ನೂರರಲ್ಲಿ ಒಂದಂಶ ಎಂದು ಹೇಳುವಾಗ ಕರುಣೆ ಎಂಬ ಸ್ವಭಾವವು ಕೇವಲ ಮಾನವೀಯವಲ್ಲ, ದೈವಿಕ ಕೂಡಾ ಆಗಿದೆ ಎಂಬುದು ಮನವರಿಕೆಯಾಗುತ್ತದೆ. ಇದು ದೇವನು ತನ್ನ ಮಹಾನ್ ಗುಣದಿಂದ ಮನುಷ್ಯನ ಮೇಲೆ ವರ್ಷಿಸಿರುವ ಒಂದು ಶೀತಲ ಛಾಯೆಯಾಗಿದೆ.

ಸಂಪತ್ತು ಅತಿಯಾಗಿ ದೊರೆತರೆ ಮನುಷ್ಯನು ಕೆಟ್ಟು ಹೋಗುವನು. ಆಸೆ ಹೆಚ್ಚಾದರೂ ಮನುಷ್ಯ ಕೆಟ್ಟು ಹೋಗುವನು. ದೇಹೇಚ್ಛೆಗಳು ಹೆಚ್ಚಾದರೂ ಮನುಷ್ಯ ಕೆಡುವನು. ಅಸೂಯೆಯಂತಹ ಮನುಷ್ಯ ಸ್ವಭಾವವು ಮನುಷ್ಯನನ್ನು ಕೆಡಿಸುತ್ತದೆ. ಆದರೆ ಪ್ರೀತಿ ಮತ್ತು ಕಾರುಣ್ಯವು ಎಷ್ಟು ಹೆಚ್ಚಿನ ಪ್ರಮಾಣದಲ್ಲಿ ಮನುಷ್ಯನಲ್ಲಿದ್ದರೂ ಅವನು ಮತ್ತಷ್ಟು ಪರಿಶುದ್ಧ ಮತ್ತು ಸೌಭಾಗ್ಯಶಾಲಿ ಎನಿಸಿಕೊಳ್ಳುವನು. ಏಕೆಂದರೆ ಕರುಣೆ ಎಂಬುದು ಮನುಷ್ಯನಿಗೆ

ದೊರೆತ ದೈವಿಕ ಸ್ವಭಾವವಾಗಿದೆ. ಸ್ನೇಹ-ಕರುಣೆ ಮುಂತಾದ ಸ್ವಭಾವಗಳು ಹೆಚ್ಚಾದಷ್ಟೂ ಮನುಷ್ಯ ಅಷ್ಟರ ಮಟ್ಟಿಗೆ ಅಲ್ಲಾಹನಿಗೆ ನಿಕಟನಾಗುತ್ತಾನೆ. ಈ ಸ್ವಭಾವವು ಕಡಿಮೆಯಾದಷ್ಟೂ ಮನುಷ್ಯನು ಅಲ್ಲಾಹನಿಂದ ದೂರ ಸಾಗುವನು. ''ಭೂಮಿಯ ಮೇಲಿರುವವರ ಮೇಲೆ ಕರುಣೆ ತೋರಿಸದಿದ್ದರೆ, ಆಕಾಶದಲ್ಲಿರುವವನು ನಿಮ್ಮ ಮೇಲೆ ಕರುಣೆ ತೋರುವುದಿಲ್ಲ'' ಎಂಬ ಪ್ರವಾದಿ ವಚನದ ತಾತ್ಪರ್ಯ ಇದುವೇ ಆಗಿದೆ.

ಕುಟುಂಬ, ಗೋತ್ರ, ಗ್ರಾಮ, ಸಮುದಾಯ, ದೇಶ ಮುಂತಾದ ಎಲ್ಲ ಮನುಷ್ಯ ಸಂಬಂಧಗಳ ಆತ್ಮವು ಸ್ನೇಹ ಮತ್ತು ಕರುಣೆಯಾಗಿರುತ್ತದೆ. ಪರಸ್ಪರ ಸಹಾಯ ಮಾಡುವ, ಸಂರಕ್ಷಣೆ ನೀಡಲು ಬಯಸುವ ಅಭಿಲಾಶೆ. ಈ ರೀತಿಯ ಸ್ವಭಾವವಿಲ್ಲದಿರುತ್ತಿದ್ದರೆ ಮನುಷ್ಯರಿಗೆ ಸಾಮೂಹಿಕ ಜೀವನ ಮತ್ತು ಸಂಸ್ಕಾರವನ್ನು ಪಾಲಿಸಲು ಸಾಧ್ಯವಾಗುತ್ತಿರಲಿಲ್ಲ, ಮೃಗಗಳಂತೆ ಕೊಂದು ತಿಂದು ಒಂಟಿಯಾಗಿ ಜೀವನವನ್ನು ಸಾಗಿಸುತ್ತಿದ್ದನು. ಈ ವಾಸ್ತವಿಕತೆಯನ್ನು ಮನದಟ್ಟು ಮಾಡಿಕೊಂಡೇ ''ಸ್ನೇಹವು ಎಲ್ಲವುಗಳ ಮೂಲ'' ಎಂದು ಕವಿ ಹಾಡಿರುತ್ತಾನೆ.

ಎಷ್ಟೇ ಜಾಗರೂಕತೆಯನ್ನು ಪಾಲಿಸಿದರೂ ಈ ಜಗತ್ತಿನಲ್ಲಿ ಮನುಷ್ಯನಿಂದ ತಪ್ಪುಗಳು ಸಂಭವಿಸಿದೆ ಇರುವುದಿಲ್ಲ. ತಪ್ಪುಗಳು, ಕೆಡುಕುಗಳು ಸಂಭವಿಸುವುದೆಂದರೆ ಅದು ಮನುಷ್ಯನು ಅಲ್ಲಾಹನೊಂದಿಗೆ ತೋರಿಸುವ ಕೃತಘ್ನತೆ ಮತ್ತು ಧಿಕ್ಕಾರವಾಗಿದೆ. ಅಲ್ಲಾಹನಿಗೆ ನಮ್ಮನ್ನು ಯಾವ ನಿಮಿಷದಲ್ಲಿ ಬೇಕಾದರೂ ಹಿಡಿದು ಶಿಕ್ಷಿಸಲು ಸಾಧ್ಯವಿದೆ. ಆದರೆ ಬಹಿರಂಗವಾಗಿ ಅಲ್ಲಾಹನನ್ನು ಧಿಕ್ಕರಿಸುವ, ಅನುಸರಿಸದೆ ಇರುವ ವ್ಯಕ್ತಿಗಳನ್ನು ಕೂಡಾ ಅವನು ಕೂಡಲೇ ಶಿಕ್ಷಿಸುವುದಿಲ್ಲ. ಅವರಿಗೆ ಆಲೋಚಿಸಲು ತಪ್ಪುಗಳನ್ನು ತಿದ್ದಲು ಅವಕಾಶವನ್ನು ನೀಡುತ್ತಿರುತ್ತಾನೆ. ತನ್ನ ಮೇಲೆ ವಿಶ್ವಾಸವಿರಿಸಿರುವ, ಭಯಭಕ್ತಿಯನ್ನು ಹೊಂದಿರುವ ವ್ಯಕ್ತಿಗಳ ತಪ್ಪುಗಳನ್ನು, ಕೆಟ್ಟ ಕೆಲಸಗಳನ್ನು ಕ್ಷಮಿಸಲು ಅವನು ಸದಾ ಸನ್ನದ್ಧನಾಗಿರುತ್ತಾನೆ. ಇವೆಲ್ಲವೂ ಅಲ್ಲಾಹನ ಸ್ನೇಹ ಮತ್ತು ಕರುಣೆಯ ಫಲವಾಗಿರುತ್ತದೆ. ಈ ಲೋಕದಲ್ಲಿ ಶಿಷ್ಟ ಮತ್ತು ದುಷ್ಟ ವ್ಯಕ್ತಿಗಳು ಅಲ್ಲಾಹನ ಕರುಣೆ ಮತ್ತು ಸ್ನೇಹವನ್ನು ಅನುಭವಿಸದೆ ಒಂದು ನಿಮಿಷವನ್ನೂ ಕಳೆಯುತ್ತಿಲ್ಲ. ಈ ವಾಸ್ತವಿಕತೆಯನ್ನು ಅರಿತಿರುವವನೇ ಮುಸ್ಲಿಮ್. ಅವನಿಗೆ ಇತರ ಸೃಷ್ಟಿಗಳೊಂದಿಗೆ ಕ್ರೂರವಾಗಿ, ಭೀಕರವಾಗಿ ವರ್ತಿಸಲು ಹೇಗೆ ತಾನೇ ಸಾಧ್ಯ? ಒಂದಲ್ಲ ಒಂದು ರೀತಿಯಲ್ಲಿ ಇತರರ ಸಹಾಯ, ಆಶ್ರಯ, ಕೊಡುಕೊಳ್ಳುವಿಕೆ ಅಗತ್ಯವಿರುವ ಮನುಷ್ಯನಿಗೆ ಇತರರೊಂದಿಗೆ ಕರುಣೆ ತೋರಿಸಲು ಸಾಧ್ಯವಿಲ್ಲದಿದ್ದರೆ, ತನ್ನಿಂದ ಯಾವುದೇ ರೀತಿಯಲ್ಲಿ ಆಶ್ರಿತನಲ್ಲದ, ಸಹಾಯದ ಅಗತ್ಯವಿಲ್ಲದ ಅಲ್ಲಾಹನಿಂದ ಕರುಣೆಯನ್ನು ನಿರೀಕ್ಷಿಸಲು ಹೇಗೆ ತಾನೇ ಸಾಧ್ಯ?

ಪರಲೋಕದಲ್ಲಿ ಮನುಷ್ಯನಿಗೆ ಸ್ವರ್ಗವನ್ನು ನೀಡುವುದು ಅಲ್ಲಾಹನ ಕರುಣೆಯಾಗಿರುತ್ತದೆ. ಏಕೆಂದರೆ ತಪ್ಪುಗಳು ಸಂಭವಿಸದ, ಕೆಡುಕುಗಳನ್ನು ಮಾಡದ ವ್ಯಕ್ತಿಗಳು ಇರುವುದಿಲ್ಲ. ಆದರೆ ತಪ್ಪೆಸಗಿದವರನ್ನೆಲ್ಲಾ ಅವನು ನರಕಕ್ಕೆ ತಳ್ಳುವುದಿಲ್ಲ. ಸಾಧ್ಯವಿರುವಷ್ಟು ಎಲ್ಲ ವ್ಯಕ್ತಿಗಳನ್ನು ಪರಮಾವಧಿ

ಕ್ಷಮಿಸುತ್ತಾನೆ. ಅವನ ಕಾರುಣ್ಯ ಮತ್ತು ದಯೆಯ ವಿಶಾಲ ಮೇರೆಯೊಳಗೆ ಯಾವುದಾದರೂ ರೀತಿಯಲ್ಲಿ ಸೇರ್ಪಡೆಗೊಳ್ಳಲು ಸಾಧ್ಯವಿರುವ ಎಲ್ಲ ವ್ಯಕ್ತಿಗಳು ಸ್ವರ್ಗ ಪ್ರವೇಶಿಸುವರು. ಮನುಷ್ಯ ಈ ಲೋಕದಲ್ಲಿ ಅಲ್ಲಾಹನೊಂದಿಗೆ ತೋರಿಸುತ್ತಿರುವ ಧಿಕ್ಕಾರ, ಅನಾದರ, ಕೃತಘ್ನತೆಯನ್ನು, ಅಲ್ಲಾಹನು ಅಂತ್ಯದಿನದಂದು ಮನುಷ್ಯನೊಂದಿಗೆ ತೋರಿಸುವ ಸ್ನೇಹ, ಕಾರುಣ್ಯದೊಂದಿಗೆ ಹೋಲಿಸಿ ನೋಡಿದರೆ, ಮನುಷ್ಯರು ಈ ಲೋಕದಲ್ಲಿ ಪರಸ್ಪರರೊಂದಿಗೆ ತೋರಿಸುವ ಪ್ರೀತಿಯು ಪರಲೋಕದಲ್ಲಿ ಅಲ್ಲಾಹನು ತೋರಿಸುವ ಕರುಣೆಯ ಒಂದಂಶವೆಂಬುದು ತಿಳಿದು ಬರುವುದು.

ಎರಡನೆಯ ಹದೀಸಿನಲ್ಲಿ ವಿಚಾರ ಮತ್ತು ಕರ್ಮಗಳ ಮಧ್ಯೆ ಇರುವ ಸಂಬಂಧ, ಮನುಷ್ಯನ ಮಾನಸಿಕತೆಯನ್ನು ಅಲ್ಲಾಹನು ಸ್ವೀಕರಿಸುವ ರೀತಿ, ತನ್ನ ಸೃಷ್ಟಿಗಳೊಂದಿಗೆ ಅವನಿಗಿರುವ ಅಪಾರ ಕರುಣೆ ಮತ್ತು ಔದಾರ್ಯ ಮುಂತಾದ ವಿಷಯಗಳನ್ನು ವಿವರಿಸಲಾಗಿದೆ. ಅಲ್ಲಾಹನು ಒಳಿತು ಕೆಡುಕುಗಳನ್ನು ಬರೆದಿಟ್ಟುಕೊಳ್ಳುವನು ಎಂದು ಹೇಳಿರುವುದರ ಅರ್ಥವೇನೆಂದರೆ ಒಳಿತು ಯಾವುದು ಕೆಡುಕು ಯಾವುದು ಎಂಬುದನ್ನು ನಿರ್ಣಯಿಸುವನು. ಅಥವಾ ಒಳಿತು ಕೆಡುಕುಗಳು ಯಾವುದು ಎಂಬುದನ್ನು ದೇವಚರರೊಂದಿಗೆ ಹೇಳಿ ಬರೆಸಿದನು ಎಂದೂ ಆಗಬಹುದು. ಬಳಿಕ ಅದನ್ನು ವಿವರಿಸಿದನು ಎಂಬುದರ ತಾತ್ಪರ್ಯವೇನೆಂದರೆ ಒಬ್ಬ ವ್ಯಕ್ತಿ ಪಾಪಿಯೋ ಅಥವಾ ಪುಣ್ಯಾತ್ಮನೋ ಆಗುವುದು ಹೇಗೆ ಎಂಬುದನ್ನು ವಿವರಿಸಿದನು. 'ಹಮ್ಮ' ಎಂಬ ಮೂಲ ಪದವನ್ನು 'ಆಲೋಚಿಸಿದನು' ಎಂದು ಅನುವಾದಿಸಲಾಗಿದೆ. ಚಿಂತಿಸುವುದು, ತೀರ್ಮಾನಿಸುವುದು, ಆತುರ ಪಡುವುದು ಎಂಬಿತ್ಯಾದಿ ಅರ್ಥಗಳಲ್ಲೂ ಈ ಪದವು ಬಳಸಲ್ಪಡುತ್ತದೆ. ಮಾಡಲು ತೀರ್ಮಾನಿಸುವುದು ಮತ್ತು ಅದಕ್ಕಾಗಿ ಹೊರಡುವುದು ಎಂಬುದು ಇಲ್ಲಿ ಇದರ ಉದ್ದೇಶವಾಗಿದೆ.

'ಮನಸ್ಸು ಉತ್ತಮವಾಗಿದ್ದರೆ, ಮನುಷ್ಯ ಉತ್ತಮನಾಗುತ್ತಾನೆ' ಎಂಬ ಅರ್ಥದಲ್ಲಿ ಒಂದು ಪ್ರವಾದಿ ವಚನವಿದೆ. ಸ್ವತಃ ತಮ್ಮ ಹೃದಯದೆಡೆಗೆ ಬೊಟ್ಟು ಮಾಡುತ್ತಾ 'ತಕ್ವಾ' ಅಂದರೆ ದೇವಭಯ ಇಲ್ಲಿದೆ ಎಂದು ಪ್ರವಾದಿ ಮುಹಮ್ಮದ್‌ರು(ಸ) ಹೇಳಿರುವರು. ಕರ್ಮಗಳು ಉದ್ದೇಶವನ್ನು ಅನುಸರಿಸಿ ಇರುತ್ತದೆ ಎಂಬುದು ಇನ್ನೊಂದು ಪ್ರಸಿದ್ಧ ಪ್ರವಾದಿ ವಚನವಾಗಿದೆ. ಮನುಷ್ಯನ ಮನಸ್ಸಿನಲ್ಲಿರುವ ಭಯ-ಭಕ್ತಿಯನ್ನು ಅಲ್ಲಾಹನು ಪರಿಗಣಿಸುತ್ತಾನೆ ಎಂದು ಪವಿತ್ರ ಕುರ್‌ಆನ್ ಸ್ಪಷ್ಟ ಪಡಿಸಿದೆ. ಪ್ರಸ್ತುತ ಪ್ರವಾದಿ ವಚನದಲ್ಲಿ ಈ ಎಲ್ಲಾ ವಿಷಯಗಳನ್ನು ಇನ್ನೊಂದು ರೀತಿಯಲ್ಲಿ ಹೇಳಲಾಗಿದೆ. ಎಷ್ಟು ಬಯಸಿದರೂ ಎಲ್ಲ ಮನುಷ್ಯರಿಗೂ ಒಂದೇ ರೀತಿಯಲ್ಲಿ ಸತ್ಕರ್ಮಗಳನ್ನು ಮಾಡಲು ಸಾಧ್ಯವಾಗಬೇಕೆಂದಿಲ್ಲ. ಆದರೆ ಪ್ರಾಮಾಣಿಕವಾಗಿ ಬಯಸಲು ಮತ್ತು ತಮ್ಮಿಂದಾದಷ್ಟು ಗರಿಷ್ಠ ಪ್ರಯತ್ನವನ್ನು ನಡೆಸಲು ಎಲ್ಲರಿಗೂ ಸಾಧ್ಯವಿದೆ. ಈ ರೀತಿಯಲ್ಲಿ ಒಳಿತನ್ನು ಮಾಡಲು ಇಚ್ಛಿಸುವುದು ಕೂಡಾ ಒಂದು ಸತ್ಕರ್ಮವಾಗಿದೆ. ಕೇವಲ ಸತ್ಕರ್ಮವಲ್ಲ, ಒಂದು ಸಂಪೂರ್ಣ ಸತ್ಕರ್ಮ. ಯಾವುದೋ ಕಾರಣದಿಂದ ಒಳಿತನ್ನು ಮಾಡುವ ಇಚ್ಛೆಯನ್ನು ಪೂರ್ತಿಗೊಳಿಸಲು ಸಾಧ್ಯವಾಗಲಿಲ್ಲ ಎಂಬುದು ಅದನ್ನು

ಅಪೂರ್ಣ ಅಥವಾ ವಿಕಲವನ್ನಾಗಿಸುವುದಿಲ್ಲ. ಇಲ್ಲಿ ಹೇಳಲಾಗಿರುವುದು ಸುಮ್ಮನೆ ಹಾಗೆ ಮಾಡಬೇಕು. ಹೀಗೆ ಮಾಡಬೇಕು ಎಂದು ಚಿಂತಿಸುವುದರ ಕುರಿತಲ್ಲ. ಮಾಡಬೇಕೆಂಬ ದೃಢ ತೀರ್ಮಾನವನ್ನು ತೆಗೆದುಕೊಂಡವರ ಕುರಿತು ಇದನ್ನು ಹೇಳಲಾಗಿದೆ. ವಿದ್ವಾಂಸರು ಈ ಬಗ್ಗೆ ಉದಾಹರಣೆಯೊಂದನ್ನು ನೀಡಿರುವರು. ಮಧ್ಯರಾತ್ರಿ ಎದ್ದು ತಹಜ್ಜುದ್ ನಮಾಝ್ ನಿರ್ವಹಿಸಬೇಕೆಂಬ ಸಂಕಲ್ಪದೊಂದಿಗೆ ಒಬ್ಬ ವ್ಯಕ್ತಿ ಮಲಗುತ್ತಾನೆ. ಆದರೆ ಅವನಿಗೆ ಬೆಳಗಾದ ಮೇಲೆ ಎಚ್ಚರವಾಯಿತು. ಇದು ತಹಜ್ಜುದ್‌ನಲ್ಲಿ 'ಹಮ್ಮ್' ಉಂಟಾದ ವ್ಯಕ್ತಿ. ಆದುದರಿಂದ ಅಲ್ಲಾಹನು ಆ ವ್ಯಕ್ತಿ ತಹಜ್ಜುದ್ ನಿರ್ವಹಿಸಿದಂತೆ ಎಂದು ಪರಿಗಣಿಸುವನು. ವ್ಯಕ್ತಿ ಮಲಗಲು ಹೋಗುವಾಗ ರಾತ್ರಿ ಎದ್ದು ತಹಜ್ಜುದ್ ನಿರ್ವಹಿಸಬೇಕೆಂದು ಕೊಳ್ಳುತ್ತಾನೆ. ಆದರೆ ಎಚ್ಚರವಾದಾಗ ಆಲಸ್ಯವಾಗುತ್ತದೆ. ಬಳಿಕ ಪುನಃ ನಿದ್ರಿಸುತ್ತಾನೆ. ಅಂದರೆ ಆ ವ್ಯಕ್ತಿಗೆ ತಹಜ್ಜುದ್‌ನ 'ಹಮ್ಮ್' ಇರಲಿಲ್ಲ. ದೃಢ ನಿರ್ಧಾರವಿದ್ದೂ ವ್ಯಕ್ತಿಗೆ ಕರ್ಮವನ್ನು ಮಾಡಲು ಸಾಧ್ಯವಾಗದೆ ಹೋದರೆ, ಅಲ್ಲಾಹನು ಅದನ್ನು ಮಾಡಿದಂತೆ ಎಂದು ಪರಿಗಣಿಸುವನು. ತೀರ್ಮಾನದಿಂದ ಹಿಂಜರಿದರೆ, ಶಿಥಿಲಗೊಳಿಸಿದರೆ, ಆ ವ್ಯಕ್ತಿ ಕರ್ಮವನ್ನು ಮಾಡುವುದರಿಂದ ಹಿಂದೆ ಸರಿದಂತೆ ಆಗುತ್ತದೆ.

ದೃಢ ನಿರ್ಧಾರವನ್ನು ಕೈಗೊಂಡು ಅದರಂತೆ ಸತ್ಕರ್ಮಗಳನ್ನು ಮಾಡಿದರೆ, ಅಲ್ಲಾಹನು ಅದನ್ನು ಕೇವಲ ಒಂದು ಸತ್ಕರ್ಮವಾಗಿಯಲ್ಲ, ಬದಲಾಗಿ ಹತ್ತು ಸತ್ಕರ್ಮಗಳಾಗಿ ಪರಿಗಣಿಸುವನು. ಕೆಲವೊಮ್ಮೆ ಅದಕ್ಕಿಂತಲೂ ಅಧಿಕವೆಂದು ಪರಿಗಣಿಸುವನು. ವ್ಯಕ್ತಿಯ ನಿಷ್ಕಳಂಕತೆ, ಭಯ-ಭಕ್ತಿಯ ಏರಿಳಿತವನ್ನು ಅನುಸರಿಸಿ ಕರ್ಮಗಳ ಪ್ರತಿಫಲವು ಹೆಚ್ಚಿಸಲ್ಪಡುವುದು. ಸತ್ಕರ್ಮಗಳ ಹಿಂದಿರುವ ಪ್ರಾಮಾಣಿಕತೆ, ಭಯ-ಭಕ್ತಿಯು ಹೆಚ್ಚಿದಂತೆ ಅದರ ಮೌಲ್ಯವೂ ಹೆಚ್ಚುತ್ತಾ ಹೋಗುತ್ತದೆ. ಸತ್ಕರ್ಮ ಮಾಡುವ ಇಚ್ಛೆ ಮತ್ತು ತೀರ್ಮಾನದೊಂದಿಗೆ ಮಾಡಿದಾಗ ಕರ್ಮದ ಶ್ರೇಷ್ಠತೆ ಹೆಚ್ಚುತ್ತದೆ. 'ವ ಇನ್ ಹಮ್ಮ ಬಿಹಾಫ ಅಮಿಲಹಾ' ಎಂಬ ವಾಕ್ಯವು ಇದನ್ನೇ ಸ್ಪಷ್ಟಪಡಿಸುತ್ತದೆ. ಉದ್ದೇಶ, ನಿರ್ಧಾರ ಇಲ್ಲದೆ ಮಾಡಿದ ಸತ್ಕರ್ಮಗಳಿಗೆ ಈ ಮಹತ್ವವಿರುವುದಿಲ್ಲ.

ಒಬ್ಬ ವ್ಯಕ್ತಿ ಒಂದು ಕೆಡುಕನ್ನು ಮಾಡಲು ನಿರ್ಧರಿಸಿ ಕೊನೆಯ ನಿಮಿಷದಲ್ಲಿ ಅದರಿಂದ ದೂರ ಉಳಿಯಲು ತೀರ್ಮಾನಿಸಿದರೆ ಅದನ್ನು ಅಲ್ಲಾಹನು ಆ ದಾಸನ ಸತ್ಕರ್ಮವಾಗಿ ದಾಖಲಿಸುವನು. ಇಲ್ಲಿ ಕೆಡುಕನ್ನು ಮಾಡದೆ ಇರುವುದು, ಹಿಂತೆಗೆದುಕೊಳ್ಳುವುದು ಎಂದು ಹೇಳಲಾಗಿರುವುದು, ಅದನ್ನು ಮಾಡಲು ಸಾಧ್ಯವಾಗದಂತಹ ಅಡಚಣೆ ಉಂಟಾದ ಕಾರಣದಿಂದ ನಿರ್ಧಾರದಿಂದ ಹಿಂದೆ ಸರಿದ ವ್ಯಕ್ತಿಯ ಕುರಿತಲ್ಲ, ಬದಲಾಗಿ ಅಲ್ಲಾಹನನ್ನು ಭಯಪಟ್ಟು ನಿರ್ಧಾರವನ್ನು ಹಿಂತೆಗೆದುಕೊಂಡ ವ್ಯಕ್ತಿಯ ಕುರಿತಾಗಿದೆ. ಕೆಡುಕನ್ನು ಮಾಡಲು ನಿರ್ಧರಿಸಿ ಅದನ್ನು ಮಾಡಲು ಸಾಧ್ಯವಾಗದ ಕಾರಣ ಅಥವಾ ಅಡ್ಡಿ-ಆತಂಕಗಳು ಎದುರಾದ ಕಾರಣ ಕೆಡುಕನ್ನು ಮಾಡದೆ ಇದ್ದ ವ್ಯಕ್ತಿಯ ನಿರ್ಧಾರವನ್ನು ಅಲ್ಲಾಹನು ಸತ್ಕರ್ಮವಾಗಿ ಪರಿಗಣಿಸುವುದಿಲ್ಲ, ಬದಲಾಗಿ ಅದನ್ನು ಅವನ ಹೆಸರಿನಲ್ಲಿ ಕೆಡುಕು ಎಂದು ದಾಖಲಿಸುವನು.

'ಆದರೆ ಅವನು, ನೀವು ಹೃತ್ಪೂರ್ವಕ ಮಾಡಿದ ಶಪಥಗಳ ವಿಚಾರಣೆ ನಡೆಸಿಯೇ ತೀರುವನು.' (ಪವಿತ್ರ ಕುರ್‌ಆನ್, 2:225)

ವ್ಯಕ್ತಿ ತನ್ನ ಅಂಗಾಂಗಗಳ ಮೂಲಕ ದುಷ್ಕರ್ಮವನ್ನು ಮಾಡದೆ ಇದ್ದರೂ ಹಾಗೆ ಮಾಡಬೇಕೆಂದು ಹೃತ್ಪೂರ್ವಕ ತೀರ್ಮಾನಿಸಿದ್ದನು. ಆದರ ಹೆಸರಿನಲ್ಲಿ ವ್ಯಕ್ತಿ ಶಿಕ್ಷೆಯನ್ನು ಅನುಭವಿಸುವನು. ಆದರೆ ಮನಸ್ಸಿನಲ್ಲಿ ಹುಟ್ಟಿಕೊಂಡ ಒಂದು ಕೆಟ್ಟ ವಿಚಾರವನ್ನು ಅಲ್ಲಾಹನ ಭಯದಿಂದ ಕಾರ್ಯರೂಪಕ್ಕಿಳಿಸದಿದ್ದರೆ, ಆ ತೀರ್ಮಾನವು ಕೆಟ್ಟ ವಿಚಾರವನ್ನು ನೀಗಿಸಿ ಅದನ್ನು ಒಂದು ಸತ್ಕರ್ಮವಾಗಿಸುತ್ತದೆ. ಒಂದು ಸಂಪೂರ್ಣ ಸತ್ಕರ್ಮದ ರೂಪದಲ್ಲಿ ಅಲ್ಲಾಹನು ಅದನ್ನು ಸ್ವೀಕರಿಸುವನು. ವ್ಯಕ್ತಿ ಒಂದು ಕೆಡುಕನ್ನು ಮಾಡ ಬಯಸಿ ಅದನ್ನು ಮಾಡಿಬಿಟ್ಟರೆ ಅಲ್ಲಾಹನು ಒಂದು ಕೆಡುಕೆಂದು ಪರಿಗಣಿಸುವನು. ಸತ್ಕರ್ಮದಂತೆ ಹತ್ತಾಗಿಯೂ, ಎಪ್ಪತ್ತಾಗಿಯೂ ಅದಕ್ಕಿಂತ ಹೆಚ್ಚಾಗಿಯೂ ಗುಣಿಸುವುದಿಲ್ಲ, ಪವಿತ್ರ ಕುರ್‌ಆನಿನಲ್ಲಿ ಈ ಬಗ್ಗೆ ಎಚ್ಚರಿಸಲಾಗಿದೆ. ಅಲ್ಲಾಹನ ಬಳಿಗೆ ಪುಣ್ಯ ತೆಗೆದುಕೊಂಡು ಬಂದವನಿಗೆ ಹತ್ತು ಪಟ್ಟು ಪುಣ್ಯ ಫಲವಿದೆ. ಪಾಪ ತೆಗೆದುಕೊಂಡು ಬಂದವನಿಗೆ ಅವನು ಮಾಡಿದ ಅಪರಾಧದಷ್ಟೇ ಪ್ರತಿಫಲ ಕೊಡಲಾಗುವುದು ಮತ್ತು ಯಾರ ಮೇಲೂ ಅನ್ಯಾಯವಾಗದು. (ಪವಿತ್ರ ಕುರ್‌ಆನ್, 6:160)

ಒಳಿತನ್ನು ಮಾಡಿದವರಿಗೆ ಹತ್ತರಿಂದ ಆರಂಭಿಸಿ ಅನೇಕ ಪಟ್ಟು ಪ್ರತಿಫಲವನ್ನು ನೀಡುವಾಗ, ಕೆಡುಕನ್ನು ಮಾಡಿದವರಿಗೆ ಅದಕ್ಕೆ ಅರ್ಹವಾದ ಶಿಕ್ಷೆಯನ್ನು ಮಾತ್ರ ನೀಡಲಾಗುವುದು. ಒಳಿತನ್ನು ಮಾಡಲು ತೀರ್ಮಾನಿಸಿ ಅದನ್ನು ಮಾಡಲು ಸಾಧ್ಯವಾಗದೆ ಹೋದರೆ ಅದಕ್ಕೂ ಅರ್ಹವಾದ ಪ್ರತಿಫಲವಿದೆ. ಕೆಡುಕನ್ನು ಮಾಡಲು ನಿರ್ಧರಿಸಿ ಬಳಿಕ ಅಲ್ಲಾಹನನ್ನು ಸ್ಮರಿಸಿ ಅದರಿಂದ ಹಿಂತಿರುಗಿದರೆ, ಒಳಿತನ್ನು ಮಾಡಿದ ಪ್ರತಿಫಲ. ಒಂದು ಕೆಡುಕನ್ನು ಮಾಡಿದರೆ ಅದಕ್ಕೆ ಅರ್ಹವಾದ ಶಿಕ್ಷೆ ಮಾತ್ರ. ಈ ಪ್ರವಾದಿ ವಚನದಲ್ಲಿ ಬೆಳಗುತ್ತಿರುವ ಅಲ್ಲಾಹನ ಕರುಣೆ ಮತ್ತು ಔದಾರ್ಯ ಅವರ್ಣನೀಯ, ಮಾತ್ರವಲ್ಲ ಅಗಾಧವೂ ಆಗಿದೆ.



# 6. ಅಲ್ಲಾಹನ ಪ್ರೀತಿ ಗಳಿಸಲು

عَنْ سَهْلِ بْنِ سَعْدٍ رَضِيَ اللّٰهُ عَنْهُ قَالَ جَاءَ رَجُلٌ إِلَى النَّبِيِّ ﷺ فَقَالَ
يَا رَسُولَ اللّٰهِ دُلَّنِي عَلَى عَمَلٍ إِذَا عَمِلْتُهُ أَحَبَّنِيَ اللّٰهُ وَأَحَبَّنِيَ النَّاسُ. فَقَالَ
ازْهَدْ فِي الدُّنْيَا يُحِبَّكَ اللّٰهُ وَازْهَدْ فِيمَا عِنْدَ النَّاسِ يُحِبَّكَ النَّاسُ (ابن ماجة)

ಸಹ್ಲ್ ಬಿನ್ ಸಅದ್(ರ) ಉಲ್ಲೇಖಿಸುತ್ತಾರೆ: ಒಮ್ಮೆ ಒಬ್ಬ ವ್ಯಕ್ತಿ ಪ್ರವಾದಿ ಮುಹಮ್ಮದ್(ಸ) ಅವರ ಬಳಿ ಬಂದು ಹೀಗೆ ಹೇಳಿದನು. 'ಅಲ್ಲಾಹನ ಸಂದೇಶವಾಹಕರೇ, ಅಲ್ಲಾಹನೂ ನನ್ನನ್ನು ಪ್ರೀತಿಸುವಂತಾಗುವ ಮತ್ತು ಜನರು ಕೂಡಾ ನನ್ನನ್ನು ಪ್ರೀತಿಸಲು ಕಾರಣವಾಗುವ ಕರ್ಮವೊಂದನ್ನು ನನಗೆ ತಿಳಿಸಿರಿ.' ಪ್ರವಾದಿ(ಸ) ಹೇಳಿದರು: 'ನೀನು ಈ ಲೋಕದ ಮೇಲಿನ ಪ್ರೀತಿಯನ್ನು ತ್ಯಜಿಸು. ಅಲ್ಲಾಹನು ನಿನ್ನನ್ನು ಪ್ರೀತಿಸುವನು. ನೀನು ಜನರ ಬಳಿ ಇರುವ ಸಂಪತ್ತು ಮತ್ತು ಸ್ಥಾನ-ಮಾನಗಳ ಬಗೆಗಿನ ಒಲವನ್ನು ತ್ಯಜಿಸು. ಆಗ ಜನರು ನಿನ್ನನ್ನು ಪ್ರೀತಿಸಲಾರಂಭಿಸುವರು.' (ಇಬ್ನು ಮಾಜ)

ಸೃಷ್ಟಿಕರ್ತ ಮತ್ತು ಸೃಷ್ಟಿಗಳ ಪ್ರೀತಿಯನ್ನು ಸಂಪಾದಿಸಲು ಲೋಕದ ಮೇಲಿನ ಪ್ರೀತಿಯನ್ನು ತ್ಯಜಿಸಬೇಕು ಎಂದು ಪ್ರವಾದಿಯವರ(ಸ) ಈ ಮೇಲಿನ ವಚನವು ನಮಗೆ ಕಲಿಸುತ್ತದೆ. ಲೋಕದ ಮೇಲಿನ ಪ್ರೀತಿಯನ್ನು ತ್ಯಜಿಸುವುದೆಂದರೆ ಇಲ್ಲಿನ ಸುಖಾಡಂಬರಗಳನ್ನು ತ್ಯಜಿಸುವುದು ಮತ್ತು ಅದರ ಬಗ್ಗೆ ಅನಾಸಕ್ತನಾಗುವುದು ಎಂದರ್ಥ. ಸನ್ಯಾಸ, ಸರ್ವಸಂಗ ಪರಿತ್ಯಾಗ ಎಂಬಿತ್ಯಾದಿ ಅರ್ಥಗಳಲ್ಲೂ ಈ 'ಝುಹ್‌ದ್' ಎಂಬ ಪದವು ಪ್ರಯೋಗವಾಗುತ್ತದೆ. ಆದುದರಿಂದ ಸನ್ಯಾಸದ ಬಗ್ಗೆ ಒಲವುಳ್ಳ ವ್ಯಕ್ತಿಗಳು ಈ ಪ್ರವಾದಿ ವಚನವನ್ನು ತಮಗೆ ಅನುಕೂಲಕರವಾದ ಪ್ರಮಾಣವೆಂದು ಭಾವಿಸುತ್ತಾರೆ. ದೇವಸಂಪ್ರೀತಿ ಗಳಿಸಬೇಕಾದರೆ ಸನ್ಯಾಸವನ್ನು ಕೈಗೊಳ್ಳಬೇಕು ಎಂಬುದು ಪ್ರವಾದಿ ವಚನದ ಅರ್ಥವಲ್ಲ. ಇಸ್ಲಾಮಿನಲ್ಲಿ ಸನ್ಯಾಸಕ್ಕೆ ಸ್ಥಾನವಿಲ್ಲ. ಭೂಮಿಯ ಮೇಲೆ ಇರುವ ಸಕಲ ವಸ್ತುಗಳನ್ನು ಮನುಷ್ಯನ ಉಪಯೋಗಕ್ಕಾಗಿ ಸೃಷ್ಟಿಸಲಾಗಿದೆ ಎಂದೂ ಅದು ಅಲ್ಲಾಹನ ಅನುಗ್ರಹವಾಗಿದ್ದು ಮನುಷ್ಯ ಅದನ್ನು ಸಂಪಾದಿಸಬೇಕೆಂದೂ ಕುರ್‌ಆನ್ ಹೇಳುತ್ತದೆ ಮಾತ್ರವಲ್ಲ ಅಲ್ಲಾಹನು ಧರ್ಮ

ಸಮ್ಮತಗೊಳಿಸಿರುವ ಜೀವನದ ಸೊಬಗನ್ನು ನಿಷಿದ್ಧಗೊಳಿಸಲು ಯಾರಿಗೂ ಅಧಿಕಾರವಿಲ್ಲವೆಂಬ ಎಚ್ಚರಿಕೆಯನ್ನೂ ಅದು ನೀಡುತ್ತದೆ.

ಹಾಗಾದರೆ ಪ್ರವಾದಿಯವರು ಪ್ರಸ್ತಾಪಿಸಿರುವ ಈ 'ಝುಹ್‌ದ್'ನ ಅರ್ಥವೇನು? ಅಲ್ಲಾಹನು ನಿಷಿದ್ಧಗೊಳಿಸಿರುವುದನ್ನು ಧರ್ಮಸಮ್ಮತಗೊಳಿಸುವುದು ಅಥವಾ ಅಲ್ಲಾಹನು ಧರ್ಮಸಮ್ಮತ ಗೊಳಿಸಿರುವುದನ್ನು ನಿಷಿದ್ಧ ಗೊಳಿಸುವುದು ಇಸ್ಲಾಮಿನ 'ಝುಹ್‌ದ್' ಅಲ್ಲವೆಂದು ಹಿಂದಿನ ಕಾಲದ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಭೌತಿಕ ಸುಖಾಡಂಬರಗಳ ಬಗ್ಗೆ ಅತ್ಯಾಸೆ ತೋರಿಸದಿರುವುದು, ದೇವನು ನಿಷೇಧಿಸಿದವುಗಳನ್ನು ತ್ಯಜಿಸುವುದು ಇಸ್ಲಾಮ್ ಬಯಸುವ 'ಝುಹ್‌ದ್' ಆಗಿದೆ. ವಿಕಾರಗಳನ್ನೂ, ಮೋಹಗಳನ್ನೂ ನಿಗ್ರಹಿಸಲಿಕ್ಕಲ್ಲ ಬದಲಾಗಿ ನಿಯಂತ್ರಿಸಲು ಅಲ್ಲಾಹನು ನಮಗೆ ಆದೇಶಿಸಿದ್ದಾನೆ.

ಅಲ್ಲಾಹನ ಪ್ರೀತಿ ಸಂಪಾದಿಸಲಿಕ್ಕಿರುವ ಮಾರ್ಗ ಲೋಕದ ಮೇಲಿನ ಪ್ರೀತಿಯನ್ನು ತ್ಯಜಿಸುವುದು ಎಂದು ಪ್ರವಾದಿಯವರು ಕಲಿಸಿರುವುದರ ಅರ್ಥವೇನೆಂದರೆ, ಅಲ್ಲಾಹನ ಪ್ರೀತಿ ಸಂಪಾದಿಸಬೇಕಿದ್ದರೆ ನೀವು ಭೌತಿಕ ಸುಖಲೋಲುಪತೆಗಳಿಗಿಂತ ಹೆಚ್ಚಾಗಿ ಅಲ್ಲಾಹನನ್ನು ಪ್ರೀತಿಸಬೇಕು. ಸುಖಾಡಂಬರಗಳ ಬಗ್ಗೆ ಅತಿಯಾದ ಆಸಕ್ತಿ ಮತ್ತು ದೇವನ ಪ್ರೀತಿ ಜೊತೆಯಾಗಿರಲು ಸಾಧ್ಯವಿಲ್ಲ, ಸುಖಾಡಂಬರದ ಆಸೆಯನ್ನು ದೇವನ ಇಷ್ಟಕ್ಕೆ ಅಧೀನ ಗೊಳಿಸಿದರೆ ಅಲ್ಲಾಹನ ಪ್ರೀತಿಯು ಸಿಗುತ್ತದೆ. ಸುಖದಿಂದಿರಬಾರದು, ಅಥವಾ ಭೌತಿಕ ವಸ್ತುಗಳನ್ನು ಹೊಂದಿರಬಾರದು ಎಂದು ಅಲ್ಲಾಹನು ಮನುಷ್ಯರೊಂದಿಗೆ ಆದೇಶಿಸಿಲ್ಲ, ಅಲ್ಲಾಹನು ನೀಡಿರುವ ಅನುಗ್ರಹಗಳನ್ನು ಅವನ ವಿಧಿನಿಷೇಧಗಳನ್ನು ಪಾಲಿಸಿಕೊಂಡು ಅನುಭವಿಸಬೇಕು ಎಂದು ಹೇಳಲಾಗಿದೆ. ದಾಂಪತ್ಯ ಜೀವನ, ಹಣ ಸಂಪಾದನೆ ಮುಂತಾದ ಕೆಲಸಗಳು ಅಲ್ಲಾಹನು ಅನುಮತಿಸಿದ ಮತ್ತು ಪ್ರೋತ್ಸಾಹಿಸಿದ ವಿಷಯಗಳಾಗಿವೆ. ಆದುದರಿಂದ ಇಂತಹ ಕೆಲಸಗಳಲ್ಲಿ ನಿರತರಾಗಿರುವುದು ಪ್ರವಾದಿಯವರು ಹೇಳಿರುವ 'ಝುಹ್‌ದ್'(ವಿರಕ್ತಿ)ಗೆ ವಿರುದ್ಧವಾಗುವುದಿಲ್ಲ. ಸೂಫಿವರ್ಯರೆಂದು ಪರಿಗಣಿಸಲ್ಪಟ್ಟ ಕೆಲವು ಹಳೆಯ ಕಾಲದ ಬುದ್ಧಿಜೀವಿಗಳು ಕುಟುಂಬ ಜೀವನ ನಡೆಸಿದ್ದಾರೆ ಮತ್ತು ಕಠಿಣವಾಗಿ ದುಡಿದು ಹಣವನ್ನೂ ಸಂಪಾದಿಸಿದ್ದಾರೆ. ಅಲ್ಲಾಹನು ನಿಷಿದ್ಧಗೊಳಿಸಿರುವ ವಿಷಯಗಳ ಬಗ್ಗೆ ವಿರಕ್ತಿ, ಅತಿಯಾದ ಸುಖಾಡಂಬರಗಳಿಂದ ಮುಕ್ತನಾಗಿರುವುದು, ಅಲ್ಲಾಹನು ತನಗೆ ನೀಡಿರುವ ಅನುಗ್ರಹಗಳ ಬಗ್ಗೆ ಸಂತೃಪ್ತನಾಗಿರುವುದು ನಿಜವಾದ 'ಝುಹ್‌ದ್' ಆಗಿದೆ. ಅಲ್ಲಾಹನ ಸ್ನೇಹ ಮತ್ತು ಪ್ರೀತಿಯು ಬಹಳ ಮಹತ್ವವುಳ್ಳದ್ದು, ಅತ್ಯಮೂಲ್ಯವಾದದ್ದು ಎಂದು ಪರಿಗಣಿಸುವವರಿಂದ ಮಾತ್ರ ಈ ರೀತಿಯ ಜೀವನವನ್ನು ಸಾಗಿಸಲು ಸಾಧ್ಯವಾಗುತ್ತದೆ. ಅಲ್ಲಾಹನ ಪ್ರೀತಿ ಮತ್ತು ಸ್ನೇಹವನ್ನು ತನ್ನ ಜೀವನದ ಉದ್ದೇಶವಾಗಿರಿಸುವ ವ್ಯಕ್ತಿಗಳನ್ನು ಅಲ್ಲಾಹನು ಪ್ರೀತಿಸದೆ ಇರಲಾರನು.

ಜನರ ಪ್ರೀತಿ ಸಂಪಾದಿಸಬೇಕಾದರೆ ಅವರ ಬಳಿ ಇರುವ ಸಂಪತ್ತು ಮತ್ತು ಸ್ಥಾನಮಾನದ ಬಗೆಗಿನ ಒಲವನ್ನು ತ್ಯಜಿಸಿ 'ಝುಹ್‌ದ್' ಪಾಲಿಸಬೇಕೆಂದು ಪ್ರವಾದಿಯವರು(ಸ) ಉಪದೇಶಿಸಿ

ರುವರು. ಈ ಮೇಲಿನ 'ಝುಹ್‌ದ್' ನಿಜವಾದ ವಿರಕ್ತಿಯೇ ಆಗಿದೆ. ಪ್ರತಿಯೊಬ್ಬ ವ್ಯಕ್ತಿ ತನಗೆ ಅಗತ್ಯವಾದ ವಸ್ತುಗಳನ್ನು ಪರಿಶ್ರಮ ಪಟ್ಟು ಸಂಪಾದಿಸಬೇಕು ಮತ್ತದನ್ನು ಅನುಭವಿಸಬೇಕು. ಈ ಪ್ರಯತ್ನ ಮತ್ತು ಗುರಿಯ ಉದ್ದೇಶ ಅನ್ಯರ ಕೈಯಲ್ಲಿರುವ ವಸ್ತುಗಳಾಗಿರಬಾರದು. ಇತರರ ಕೈಯಲ್ಲಿರುವಂತಹದ್ದು ಅಥವಾ ಅದಕ್ಕಿಂತ ಉತ್ತಮವಾದುದು, ಹೆಚ್ಚಿನ ಪ್ರಮಾಣದಲ್ಲಿ, ಹೆಚ್ಚು ಬೆಲೆಯುಳ್ಳವುಗಳು ನನಗೆ ಸಿಗಬೇಕು ಎಂಬ ಚಿಂತೆಯು ಮನುಷ್ಯನಲ್ಲಿ ಮತ್ಸರ, ಅಸೂಯೆ, ಹಗೆತನ, ದ್ವೇಷಗಳನ್ನು ಬೆಳೆಸುತ್ತದೆ. ಇತರರ ಹೊನ್ನು, ಹೆಣ್ಣು ಮತ್ತು ಮಣ್ಣಿನ ಬಗ್ಗೆ ಇರುವ ದುರಾಸೆಯು ಜಗತ್ತಿನ ಇತಿಹಾಸದಲ್ಲಿ ನಡೆದ ಎಲ್ಲ ರೀತಿಯ ರಕ್ತಪಾತ ಮತ್ತು ಕೆಡುಕುಗಳ ಮೂಲ ಕಾರಣವಾಗಿದೆ.

'ಜನರ ಕೈಗಳಲ್ಲಿರುವುದರ ಬಗೆಗಿನ ಒಲವನ್ನು ತ್ಯಜಿಸುವುದು' ಎಂದರೆ ಬೇರೆಯವರ ಕೈಗಳಲ್ಲಿರುವುದನ್ನು ಕೇಳಿ ತೆಗೆದುಕೊಳ್ಳಬಾರದು ಎಂದು ಮಾತ್ರ ಇದರ ಅರ್ಥವಲ್ಲ. ಬೇರೆಯವರ ಬಳಿ ಇರುವ ಸೌಲಭ್ಯಗಳೆಲ್ಲವೂ ತನಗೂ ಸಿಗಬೇಕೆಂದು ಬಯಸದೆ ಇರುವುದು, ಬೇರೆಯವರ ಕೈಯಲ್ಲಿರುವ ವಸ್ತುಗಳ ಬಗ್ಗೆ ಆಸಕ್ತಿ ವಹಿಸದೆ ಇರುವುದು ಎಂಬ ಅರ್ಥಗಳೂ ಇದರಲ್ಲಿ ಸೇರಿವೆ. ಬಂಡವಾಳಶಾಹಿ ಸಂಸ್ಕೃತಿಗೆ ವಿರೋಧವಾಗಿರುವ ಒಂದು ವಚನವೆಂದೂ ಇದನ್ನು ಪರಿಗಣಿಸಬಹುದು. ಅಗತ್ಯವಿದ್ದರೂ ಇಲ್ಲದಿದ್ದರೂ ಇತರರು ಉಪಯೋಗಿಸುವಂತಹವುಗಳು ಮಾತ್ರವಲ್ಲ ಅದಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದು ನನಗೆ ಸಿಗಬೇಕೆಂಬ ಭ್ರಮೆಯು ಬಂಡವಾಳಶಾಹಿ ಸಂಸ್ಕೃತಿಯನ್ನು ಬೆಳೆಸುತ್ತದೆ. ಕೆಲವು ಗ್ರಾಹಕ ವಸ್ತುಗಳ ಉತ್ಪಾದಕರು ''ನಿಮ್ಮ ನೆರೆಮನೆಯವರು ಅಸೂಯೆ ಪಡಲು ಹೆಚ್ಚು ಸೂಕ್ತವಾದದ್ದು'' ಎಂಬ ಘೋಷಣೆಯೊಂದಿಗೆ ಅವರ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ತನಗೇನು ಬೇಕು, ಬೇಡ ಎಂಬುದನ್ನು ಇತರರ ಕೈಯಲ್ಲಿ ಏನಿದೆ ಎಂಬುದನ್ನು ನೋಡಿ ತೀರ್ಮಾನಿಸುವ ಸಮಾಜದಲ್ಲಿ ಈ ರೀತಿಯ ಜಾಹೀರಾತುಗಳು ಭಯಾನಕವಾದ ಪರಿಣಾಮವನ್ನುಂಟು ಮಾಡುತ್ತದೆ.

ಇತರರ ಕೈಯಲ್ಲಿರುವ ಯಾವುದಕ್ಕೂ ಆಶೆ ಪಡದೆ, ಅವರವರ ಅಗತ್ಯಗಳನ್ನು ಸ್ವಯಂ ತೀರ್ಮಾನಿಸಲು, ಸ್ವತಃ ಪರಿಶ್ರಮ ಪಟ್ಟು ಅದನ್ನು ಪೂರ್ತಿಗೊಳಿಸುವ ಮೂಲಕ ಅದರಲ್ಲಿ ಸಂತೋಷವನ್ನು ಕಾಣುವ ವ್ಯಕ್ತಿಗಳಿಗೆ ಶತ್ರುಗಳಿರುವುದಿಲ್ಲ. ನನ್ನ ಆಸೆಗಳಿಗೆ ಅಡ್ಡ ಬಾರದವನು, ನನ್ನ ಕೈಯಲ್ಲಿರುವುದನ್ನು ಆಕಾಂಕ್ಷಿಸದವನು, ನನ್ನ ಕಷ್ಟದಲ್ಲಿ ಸಹಾಯ ಮಾಡುವ ವ್ಯಕ್ತಿ ನೀವಾಗಿದ್ದರೆ ನಿಮ್ಮನ್ನು ಪ್ರೀತಿಸುವ ಬದಲಾಗಿ ಬೇರೇನನ್ನು ತಾನೆ ಮಾಡಲು ಸಾಧ್ಯ?



# 7. ಈಮಾನಿನ ಅರ್ಧಾಂಶ

عَنْ أَبِي مَالِك الحارث بن عاصم الْأَشْعَرِيِّ رَضِيَ اللهُ عَنْهُ قَالَ قَالَ رَسُولُ اللَّهِ ﷺ
الطُّهُورُ شَطْرُ الْإِيمَانِ وَالْحَمْدُ لِلَّهِ تَمْلَأُ الْمِيزَانَ وَسُبْحَانَ اللَّهِ وَالْحَمْدُ لِلَّهِ
تَمْلَآنِ أَوْ تَمْلَأُ مَا بَيْنَ السَّمَاوَاتِ وَالْأَرْضِ وَالصَّلَاةُ نُورٌ وَالصَّدَقَةُ
بُرْهَانٌ وَالصَّبْرُ ضِيَاءٌ وَالْقُرْآنُ حُجَّةٌ لَكَ أَوْ عَلَيْكَ كُلُّ النَّاسِ
يَغْدُو فَبَايِعٌ نَفْسَهُ فَمُعْتِقُهَا أَوْ مُوبِقُهَا (مسلم)

ಅಬೂ ಮಾಲಿಕ್ ಅಲ್‌ಹಾರಿಸ್ ಬಿನ್ ಆಸಿಮ್ ಆಶ್‌ಅರಿ(ರ) ಉಲ್ಲೇಖಿಸುತ್ತಾರೆ. ಪ್ರವಾದಿ ಮುಹಮ್ಮದ್(ಸ) ಈ ರೀತಿ ಹೇಳಿರುವರು: ''ಶುಚಿತ್ವವು ಈಮಾನಿನ ಅರ್ಧಾಂಶವಾಗಿದೆ. 'ಅಲ್ ಹಮ್ದುಲಿಲ್ಲಾಹ್' ತೂಕದ ತಟ್ಟೆಯನ್ನು ತುಂಬುವುದು. 'ಸುಬ್ಹಾನಲ್ಲಾಹ್ ವಲ್‌ಹಮ್ದುಲಿಲ್ಲಾಹ್' ಕೂಡಾ ತುಂಬುವುದು ಅಥವಾ ಆಕಾಶ ಭೂಮಿಗಳ ನಡುವಿನ ಅಂತರವನ್ನು ತುಂಬುವುದು. ನಮಾಝ್ ಪ್ರಕಾಶವಾಗಿರುತ್ತದೆ. ದಾನವು ಆಧಾರವಾಗಿದೆ, ಸಹನೆಯು ಬೆಳಕಾಗಿದೆ. ಕುರ್‌ಆನ್‌ನ ಪರವಾದ ಅಥವಾ ವಿರುದ್ಧವಾದ ಸಾಕ್ಷಿಯಾಗುವುದು, ಪ್ರತಿಯೊಬ್ಬ ಮನುಷ್ಯನೂ ಪರಿಶ್ರಮ ಪಡುತ್ತಿರುವನು. ಹೀಗೆ ಅವನು ಸ್ವತಃ ದೂರಲ್ಪಡುತ್ತಾನೆ. ಒಂದೋ ಅವನದನ್ನು ವಿಮೋಚಿಸುವನು ಅಥವಾ ನಾಶಗೊಳಿಸುವನು.'' (ಮುಸ್ಲಿಮ್)

ಈ ಹದೀಸ್‌ನಲ್ಲಿ ಸತ್ಯವಿಶ್ವಾಸ ಮತ್ತು ಅದಕ್ಕೆ ಸಂಬಂಧಪಟ್ಟ ಕರ್ಮಗಳ ಒಳಾರ್ಥಗಳನ್ನು ಅಲಂಕಾರಿಕವಾಗಿ ವರ್ಣಿಸಲಾಗಿದೆ.

ಶುಚಿತ್ವವು ಈಮಾನಿನ ಅರ್ಧಾಂಶವಾಗಿದೆ. ಇಸ್ಲಾಮ್ ಶುಚಿತ್ವದ ಧರ್ಮವಾಗಿದೆ. ಇದು ಮನುಷ್ಯನನ್ನು ಬಾಹ್ಯ ಮಾಲಿನ್ಯಗಳಿಂದ ಮತ್ತು ಕೆಡುಕುಗಳಿಂದ, ಆಂತರಿಕವಾದ ದುರ್ವಿಚಾರಗಳು, ದುರ್ವಿಕಾರಗಳಿಂದ ಒಂದೇ ರೀತಿಯಲ್ಲಿ ಶುದ್ಧೀಕರಿಸುತ್ತದೆ. ಈ ಎರಡು ರೀತಿಯ ಮಾಲಿನ್ಯಗಳಿಂದ ಶುದ್ಧೀಕರಿಸಲ್ಪಟ್ಟ ವ್ಯಕ್ತಿ ಈಮಾನಿನ ಅರ್ಧಾಂಶವನ್ನು ಗಳಿಸಿದಂತಾಗುತ್ತದೆ. ಶರೀರ ಮತ್ತು ಮನಸ್ಸನ್ನು ಶುದ್ಧೀಕರಿಸದ ವ್ಯಕ್ತಿ ಎಷ್ಟು ಆರಾಧನೆ ಮತ್ತು ದೇವಸ್ಮರಣೆಯಲ್ಲಿ ನಿರತನಾಗಿದ್ದರೂ ಅವನ ಈಮಾನ್ ಪೂರ್ಣಗೊಳ್ಳುವುದಿಲ್ಲ,

ಅವನಿಗೆ ಅರ್ಧ ಈಮಾನ್ ಮಾತ್ರ ಇರುತ್ತದೆ. ಪವಿತ್ರ ಕುರ್‌ಆನಿನ ಅನೇಕ ವಚನಗಳು ಮತ್ತು ಪ್ರವಾದಿ ವಚನಗಳು ಶುಚಿತ್ವಕ್ಕೆ ಇಸ್ಲಾಮ್ ನೀಡಿರುವ ಮಹತ್ವವನ್ನು ತಿಳಿಸುತ್ತದೆ. ಪ್ರವಾದಿಯವರಿಗೆ(ಸ) ಆರಂಭಕಾಲದಲ್ಲಿ ಅವತೀರ್ಣವಾದ ಕುರ್‌ಆನಿನ ಸೂಕ್ತಗಳಲ್ಲಿ ವಸ್ತುಗಳನ್ನು ಶುಚಿಯಾಗಿರಿಸಿಕೊಳ್ಳಲಿಕ್ಕೆ ಆದೇಶಿಸಿರುವುದನ್ನು ಕಾಣಬಹುದು. ಶುಚಿತ್ವವನ್ನು ಪಾಲಿಸುವುದನ್ನು ಅಲ್ಲಾಹನು ಇಷ್ಟ ಪಡುತ್ತಾನೆ ಎಂದು ಹೇಳಲಾಗಿದೆ. ಪ್ರವಾದಿ(ಸ) ಹೇಳಿರುವರು: ''ಇಸ್ಲಾಮ್ ಶುಚಿತ್ವವುಳ್ಳದ್ದಾಗಿದೆ. ಆದುದರಿಂದ ನೀವು ಶುಚಿತ್ವವನ್ನು ಪಾಲಿಸಬೇಕು.'' ಇನ್ನೊಂದು ಸಂದರ್ಭದಲ್ಲಿ ಅವರು ಈ ರೀತಿ ಹೇಳಿರುವರು: ''ಅಲ್ಲಾಹನು ಸುಂದರನಾಗಿದ್ದಾನೆ. ಸೌಂದರ್ಯವನ್ನು ಅವನು ಇಷ್ಟ ಪಡುತ್ತಾನೆ. ಶುದ್ಧಿಯುಳ್ಳವನಾಗಿದ್ದಾನೆ. ಶುಚಿತ್ವವನ್ನು ಅವನು ಇಷ್ಟಪಡುತ್ತಾನೆ.'' ಆದುದರಿಂದ ನಾವು ನಮ್ಮ ಮನೆ ಮತ್ತು ಪರಿಸರವನ್ನು ಶುಚಿಯಾಗಿಟ್ಟುಕೊಳ್ಳಬೇಕು.

'ಅಲ್‌ಹಮ್ದುಲಿಲ್ಲಾಹ್' ತೂಕದ ತಟ್ಟೆಯನ್ನು ತುಂಬುವುದು ಎಂಬುದಕ್ಕೆ ಎರಡು ಅರ್ಥಗಳಿವೆ. ಒಂದು ಮನುಷ್ಯನು ಹೇಳುವ 'ಅಲ್‌ಹಮ್ದುಲಿಲ್ಲಾಹ್' ಎಂಬ ಸ್ತುತಿಯನ್ನು ಒಂದು ವಸ್ತುವಾಗಿ ಪರಿಗಣಿಸಿದರೆ ಅದು ಪರಲೋಕದಲ್ಲಿ ಆ ವ್ಯಕ್ತಿಯ ಪುಣ್ಯಗಳ ತಟ್ಟೆಯನ್ನು ತುಂಬಬಲ್ಲದು. ಎರಡನೆಯದಾಗಿ ಮನುಷ್ಯನು ಅಲ್ಲಾಹನನ್ನು ಸ್ತುತಿಸುತ್ತಿರುವುದರಿಂದ ಪರಲೋಕದಲ್ಲಿ ವಿಚಾರಣೆಯ ವೇಳೆ ಅವನ ಕರ್ಮಗಳನ್ನು ತೂಗುವ ತಟ್ಟೆಯಲ್ಲಿ ಸತ್ಕರ್ಮದ ತಟ್ಟೆಯನ್ನು ತುಂಬಲು ಇದು ಪ್ರಯೋಜನಕಾರಿಯಾಗಬಲ್ಲದು.

'ಸುಬ್ಹಾನಲ್ಲಾಹ್ ಅಲ್‌ಹಮ್ದುಲಿಲ್ಲಾಹ್' ಆಕಾಶಭೂಮಿಗಳ ನಡುವಿನ ಅಂತರವನ್ನು ತುಂಬುತ್ತದೆ ಎಂಬ ವಾಕ್ಯವನ್ನು ಮೂರು ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಒಂದನೆಯದಾಗಿ ಈ ಮೊದಲು ಹೇಳಿದಂತೆ ಅದನ್ನು ಒಂದು ವಸ್ತುವಾಗಿ ಪರಿಗಣಿಸಿದರೆ ಅದು ಪ್ರಪಂಚವನ್ನೇ ತುಂಬುವಷ್ಟು ವಿಶಾಲವಾದುದಾಗಿದೆ. ಎರಡನೆಯದಾಗಿ ಹಮ್ದ್ ಮತ್ತು ತಸ್ಬೀಹ್‌ಗಳನ್ನು ನಿರಂತರ ಹೇಳುತ್ತಿರುವ ಮನುಷ್ಯನಿಗೆ ಸಿಗಲಿರುವ ಪ್ರತಿಫಲವು ಆಕಾಶ ಭೂಮಿಗಳ ಮಧ್ಯೆ ಇರುವ ಸ್ಥಳವನ್ನು ಸಂಪೂರ್ಣ ತುಂಬಿಸಲು ಸಾಧ್ಯವಿರುವಷ್ಟು ದೊಡ್ಡದಾಗಿದೆ. ಮೂರನೆಯ ದಾಗಿ ಆಕಾಶಭೂಮಿಗಳ ಮಧ್ಯೆ ತುಂಬಿರುವುದು ಅಲ್ಲಾಹನ ಸ್ತುತಿ-ಸ್ತೋತ್ರಗಳಾಗಿವೆ. ಯಾವ ಅರ್ಥದಲ್ಲಿ ತೆಗೆದುಕೊಂಡರೂ ಸ್ತುತಿ ಮತ್ತು ಸ್ತೋತ್ರಗಳ ಅವರ್ಣನೀಯವಾದ ಪುಣ್ಯ ಮತ್ತು ಮಹತ್ವವನ್ನು ಈ ವಚನಗಳು ಮನದಟ್ಟು ಮಾಡಿಸುತ್ತದೆ. ಅಲ್ಲಾಹನನ್ನು ಸ್ತುತಿಸುವುದಕ್ಕೆ 'ಹಮ್ದ್' ಎನ್ನುತ್ತಾರೆ. ಅವನು ಎಲ್ಲಾ ರೀತಿಯ ನ್ಯೂನತೆ ಮತ್ತು ಕೊರತೆಗಳಿಂದ ಸಂಪೂರ್ಣ ಮುಕ್ತನಾಗಿರುವನು ಎಂಬುದನ್ನು ಹೇಳುವುದು 'ತಸ್ಬೀಹ್' ಆಗಿದೆ. ಹಮ್ದ್‌ನ ಸುಪರಿಚಿತ ವಾಕ್ಯ 'ಅಲ್‌ಹಮ್ದುಲಿಲ್ಲಾಹ್' (ಸರ್ವಸ್ತುತಿಗಳು ಅಲ್ಲಾಹನಿಗಾಗಿದೆ) ತಸ್ಬೀಹ್‌ನ ಸುಪರಿಚಿತ ವಚನ 'ಸುಬ್ಹಾನಲ್ಲಾಹ್' (ಅಲ್ಲಾಹನು ಅತ್ಯಂತ ಪರಿಶುದ್ಧನು) ಎಂಬುದಾಗಿದೆ. ಅಲ್ಲಾಹನನ್ನು ಸ್ತುತಿಸುವ, ಅವನ ಪರಿಶುದ್ಧತೆಯನ್ನು ಕೊಂಡಾಡುವ ಯಾವುದೇ ವಚನಗಳ ಮೂಲಕ ಹಮ್ದ್ ಮತ್ತು ತಸ್ಬೀಹ್ ಹೇಳಬಹುದಾಗಿದೆ.

ನಮಾಝ್- ಅದು ಕಡ್ಡಾಯವಾಗಿದ್ದರೂ, ಐಚ್ಛಿಕವಾಗಿದ್ದರೂ ಪ್ರಕಾಶವಾಗಿದೆ. ಮನುಷ್ಯನನ್ನು ಒಳಿತಿನಲ್ಲಿ ನಡೆಸುವ ಪ್ರಕಾಶ. ಆ ಪ್ರಕಾಶವು ಸತ್ಯವಿಶ್ವಾಸಿಯ ಹೃದಯದಲ್ಲಿ ಹುಟ್ಟುತ್ತದೆ. ''ನಮಾಝ್ ಎಲ್ಲ ದುಷ್ಕೃತ್ಯ ಮತ್ತು ಅಶ್ಲೀಲತೆಗಳಿಂದ ದೂರವಿರಿಸುತ್ತದೆ.'' ಎಂದು ಪವಿತ್ರ ಕುರ್‌ಆನ್ ಪ್ರಸ್ತಾಪಿಸಿರುತ್ತದೆ. ಅದನ್ನೇ ಇಲ್ಲಿಯೂ ಉದ್ದೇಶಿಸಲಾಗಿದೆ. ನಮಾಝ್ ಮನುಷ್ಯನನ್ನು ಕೆಡುಕುಗಳಿಂದ ತಡೆದು ಒಳಿತಿನಲ್ಲಿ ಮುನ್ನಡೆಸಬೇಕಿದ್ದರೆ ಅದನ್ನು ಬಹಳ ಏಕಾಗ್ರತೆಯೊಂದಿಗೆ, ಅದರ ಎಲ್ಲಾ ಕಡ್ಡಾಯ ಮತ್ತು ಐಚ್ಛಿಕ ನಿಯಮಗಳನ್ನು ಸರಿಯಾಗಿ ಪಾಲಿಸುತ್ತಾ ನಿರ್ವಹಿಸಬೇಕು. ಈ ರೀತಿ ನಿರ್ವಹಿಸಿದ ನಮಾಝ್ ಕೇವಲ ಈ ಲೋಕದಲ್ಲಿ ಮಾತ್ರ ಪ್ರಕಾಶವಾಗಿ ಉಳಿಯುವುದಿಲ್ಲ, ಅಂತ್ಯದಿನದ ಅಂಧಕಾರದಲ್ಲಿಯೂ ಅದು ನಮ್ಮ ಮುಂದೆ ಪ್ರಕಾಶವನ್ನು ಬೀರುತ್ತಿರುವುದು.

ಮನುಷ್ಯನು ತನ್ನ ಪ್ರಾಣದ ಬಳಿಕ ಅತಿ ಹೆಚ್ಚಾಗಿ ಪ್ರೀತಿಸುವುದು ಸಂಪತ್ತನ್ನಾಗಿದೆ. ಓರ್ವ ವ್ಯಕ್ತಿ ಭೌತಿಕವಾದ ಯಾವುದೇ ಪ್ರತಿಫಲವನ್ನು ಅಪೇಕ್ಷಿಸದೆ, ಕೃತಜ್ಞತೆಯ ಒಂದು ಮಾತನ್ನೂ ನಿರೀಕ್ಷಿಸದೆ, ತನ್ನ ಹಣವನ್ನು ಝಕಾತ್ ಮತ್ತು ದಾನವಾಗಿ ಬಡವರಿಗೆ ನೀಡುತ್ತಾನೆ ಎಂದರೆ ಅದು ಆ ವ್ಯಕ್ತಿಯು ಅಲ್ಲಾಹ್ ಮತ್ತು ಅಂತಿಮ ನಿರ್ಣಾಯಕ ದಿನದ ಮೇಲೆ ನಿಜವಾಗಿಯೂ ವಿಶ್ವಾಸವಿರಿಸಿದ್ದಾನೆ ಎಂಬುದಕ್ಕೆ ಸ್ಪಷ್ಟ ಆಧಾರವಾಗಿದೆ. ಸತ್ಯನಿಷೇಧಿಗಳಿಗೆ ಮತ್ತು ಕಪಟ ವಿಶ್ವಾಸಿಗಳಿಗೆ ಎಂದೂ ಈ ರೀತಿಯಲ್ಲಿ ಝಕಾತ್ ಮತ್ತು ದಾನವನ್ನು ನೀಡಲಿಕ್ಕೆ ಸಾಧ್ಯವಾಗುವುದಿಲ್ಲ, ಅವರಿಗೆ ವ್ಯವಹಾರ ನಡೆಸಲು ಮಾತ್ರ ಸಾಧ್ಯವಾಗುತ್ತದೆ. ಹಣವನ್ನು ಇತರರಿಗೆ ನೀಡಿ ಲೋಕದ ಜನರಿಂದ ಗೌರವ ಪಡೆಯುವುದನ್ನು ಮತ್ತು ತಮ್ಮ ಕಾರ್ಯ ಸಾಧಿಸುವುದನ್ನು 'ದಾನ' ಎಂದು ಈ ವ್ಯಕ್ತಿಗಳು ಕರೆಯುತ್ತಾರೆ.

ಸಂಕಷ್ಟಗಳು, ಕಠಿಣ ಪರಿಸ್ಥಿತಿಗಳು ಎದುರಾದಾಗ ತನ್ನ ಸಾಧಾರಣ ನಿಲುವುಗಳಿಂದ ವಿಭಿನ್ನವಾದ ವರ್ತನೆಯನ್ನು ತೋರದೆ ದೃಢ ಮನಸ್ಕನಾಗಿರುವುದಕ್ಕೆ 'ಸಬ್ರ್' (ಸಹನೆ, ತಾಳ್ಮೆ) ಎಂದು ಕರೆಯಲಾಗುತ್ತದೆ. ಅಲ್ಲಾಹನ ವಿಧಿ-ನಿಷೇಧಗಳನ್ನು ಪಾಲಿಸುವಾಗ ಎದುರಿಸಬೇಕಾಗಿ ಬರುವ ಸಂಕಷ್ಟ ಮತ್ತು ಕಠಿಣ ಪರಿಸ್ಥಿತಿಗಳನ್ನು ಅಚಂಚಲವಾಗಿ ಎದುರಿಸಿ ಮುಂದಕ್ಕೆ ಸಾಗುವುದಕ್ಕೆ ಸಾಧ್ಯವಾಗುವ ಮನಃಸ್ಥಿತಿಯನ್ನು ಇಲ್ಲಿ ಉದ್ದೇಶಿಸಲಾಗಿದೆ. ಈ ಸಹನೆಯೇ ಸತ್ಯ ಮಾರ್ಗದ ಬೆಳಕು. ಸಹನೆ ಎಂಬ ಬೆಳಕು ನಂದಿ ಹೋಗುವುದರೊಂದಿಗೆ ವ್ಯಕ್ತಿ ಅಂಧಕಾರದಲ್ಲಿ ಮುಳುಗುತ್ತಾನೆ. ಆಗ ಸನ್ಮಾರ್ಗವೂ ದುರ್ಮಾರ್ಗವೂ ಒಂದೇ ರೀತಿ ಕಾಣಿಸುವುದು. ಆಗ ಕಣ್ಣುಗಳ ಬದಲಾಗಿ ಕಾಲುಗಳು ಅವನನ್ನು ಮುನ್ನಡೆಸುತ್ತದೆ. ಕಾಲು ಎಲ್ಲಿಗೆ ಕೊಂಡೊಯ್ಯುತ್ತದೋ ಅಲ್ಲಿಗವನು ಹೋಗುತ್ತಾನೆ.

ಪವಿತ್ರ ಕುರ್‌ಆನ್ ಸತ್ಯ, ಧರ್ಮ, ನ್ಯಾಯದ ಮಾನದಂಡವಾಗಿದೆ. ಕುರ್‌ಆನಿನ ಆದೇಶಗಳನ್ನು ಅನುಸರಿಸಿ ಮನುಷ್ಯನು ಜೀವಿಸಬೇಕು. ಕುರ್‌ಆನಿನ ಆದೇಶಗಳ ಪ್ರಕಾರ ಜೀವಿಸಿದರೆ, ಅದರ ಯುಕ್ತಿ ಮತ್ತು ನ್ಯಾಯವು ನಿಮಗೆ ಅರ್ಥವಾಗಿರದಿದ್ದರೂ ಪರಲೋಕದಲ್ಲಿ

ಅದು ನಿಮ್ಮ ಪರವಾದ ಸಾಕ್ಷಿಯಾಗುವುದು. ವಿಚಾರಣೆಯ ವೇಳೆ 'ಅಲ್ಲಾಹನೇ, ಈ ದಾಸನು ನನ್ನ ಮೂಲಕ ಅವತೀರ್ಣವಾದ ವಿಧಿ-ನಿಷೇಧಗಳನ್ನು ಪಾಲಿಸಿರುವನು' ಎಂದು ಅದು ಸಾಕ್ಷ್ಯ ನೀಡುವುದು. ಆದುದರಿಂದ ಕುರ್‌ಆನನ್ನು ಪ್ರಾಮಾಣಿಕವಾಗಿ ಗೌರವಿಸಿದರೆ ಮತ್ತು ಅನುಸರಿಸಿದರೆ ಒಂದು ವೇಳೆ ನಿಮ್ಮಿಂದ ತಪ್ಪು ಸಂಭವಿಸಿದರೂ ಕುರ್‌ಆನ್ ನಿಮ್ಮನ್ನು ರಕ್ಷಿಸುವುದು. ಕುರ್‌ಆನಿಗೆ ಅಗೌರವವನ್ನು ತೋರಿದರೆ, ಅದರ ಆದೇಶಗಳನ್ನು ನಿರ್ಲಕ್ಷಿಸಿ ತನ್ನ ಇಚ್ಛೆಯಂತೆ ವರ್ತಿಸಿದರೆ ಕುರ್‌ಆನ್ ನಮ್ಮ ವಿರುದ್ಧ ಸಾಕ್ಷಿ ನಿಲ್ಲುವುದು. ವಿಚಾರಣೆಯ ವೇಳೆ. 'ದೇವನೇ ಈ ದಾಸನ ಮುಂದೆ ನಾನಿದ್ದೆ, ಆದರೆ ಇವನು ನನ್ನನ್ನು ನಿಷೇಧಿಸಿದನು. ನಿನ್ನ ವಚನಗಳನ್ನು ಗೌರವಿಸಲು ವಿಧಿ-ನಿಷೇಧಗಳನ್ನು ಕಲಿಯಲು ಮತ್ತು ಅದನ್ನು ಅನುಸರಿಸಿ ಜೀವಿಸಲು ತಯಾರಾಗಲಿಲ್ಲ, ಅವನು ಧಿಕ್ಕಾರಿಯಾಗಿ ತನ್ನಿಷ್ಟದಂತೆ ಜೀವಿಸಿದ. ಆದುದರಿಂದ ಅವನ ಪಾಪಗಳಿಗೆ ಯಾವುದೇ ಕ್ಷಮೆಯಿಲ್ಲ, ಅವನು ಕಠಿಣವಾದ ಶಿಕ್ಷೆಗೆ ಅರ್ಹನಾಗಿದ್ದಾನೆ' ಎಂದು ಅದು ಹೇಳುವುದು. ದೇವನ ದಾಸನು ಕುರ್‌ಆನನ್ನು ಕಲಿತು, ಜೀವನದಲ್ಲಿ ಅದನ್ನು ಅಳವಡಿಸದೆ ಹೋದರೆ, ಅದನ್ನು ತನಗೆ ಅನುಕೂಲಕರವಾದ ಸಾಕ್ಷಿಯಾಗಿಸಲು ಪ್ರಯತ್ನಿಸದಿದ್ದರೆ, ಅದು ಪರಲೋಕದಲ್ಲಿ ತನಗೆ ವಿರುದ್ಧವಾದ ಸಾಕ್ಷಿಯಾಗಿ ಪ್ರತ್ಯಕ್ಷಗೊಳ್ಳುವುದು ಎಂಬ ಎಚ್ಚರಿಕೆಯೂ ಈ ವಚನದಲ್ಲಿದೆ.

ಪ್ರತಿಯೊಬ್ಬ ಮನುಷ್ಯನೂ ಒಂದಲ್ಲ ಒಂದು ರೀತಿಯಲ್ಲಿ ಪರಿಶ್ರಮ ಪಡುತ್ತಿರುತ್ತಾನೆ. ತನ್ನ ಸ್ವಂತ ಅಭಿಲಾಶೆ ಇಲ್ಲವೇ ಆದರ್ಶಗಳನ್ನು ಪೂರ್ತಿಗೊಳಿಸಲಿಕ್ಕಾಗಿ ಎಲ್ಲರೂ ಪ್ರಯತ್ನಿಸುತ್ತಿರುತ್ತಾರೆ. ಈ ರೀತಿ ಎಲ್ಲರಿಗೂ ತಮ್ಮ ಅಭಿಲಾಶೆ ಮತ್ತು ಆದರ್ಶಗಳು ಸತ್ಯ, ನೀತಿ, ಧರ್ಮಕ್ಕಾಗಿದ್ದರೆ ಈ ವ್ಯವಹಾರವು ಲಾಭದಾಯಕವಾಗಿರುವುದು. ಈ ಲಾಭವು ಶಾಶ್ವತವಾದ ನರಕ ಶಿಕ್ಷೆಯಿಂದ ರಕ್ಷಣೆ ಮತ್ತು ಅನಂತವಾದ ಸ್ವರ್ಗ ಜೀವನದ ರೂಪದಲ್ಲಿರುವುದು, ಅಭಿಲಾಶೆ ಮತ್ತು ಆದರ್ಶಗಳು ಸುಳ್ಳು ಮತ್ತು ಅಧರ್ಮವಾಗಿದ್ದರೆ, ಈ ವ್ಯಾಪಾರವು ಎಂದೆಂದಿಗೂ ಪರಿಹರಿಸಲು ಸಾಧ್ಯವಾಗದ ಮಹಾ ನಷ್ಟವಾಗಿರುವುದು. ಪರಲೋಕದಲ್ಲಿ ಸ್ವರ್ಗವು ಲಭಿಸದಿರುವ ನಷ್ಟ ಹಾಗೂ ಶಾಶ್ವತವಾದ ನರಕ ಶಿಕ್ಷೆಯು ಅದರ ಪ್ರತಿಫಲವಾಗಿರುವುದು. ಆದುದರಿಂದ ನೀವು ನಿಮ್ಮ ಜೀವನವನ್ನು ಯಾವ ಉದ್ದೇಶಕ್ಕಾಗಿ ಮಾರಿಕೊಂಡಿರುವಿರೆಂದು ಸರಿಯಾಗಿ ಆಲೋಚಿಸಿ ನೋಡಿಕೊಳ್ಳಿ, ಅದನ್ನು ಅಲ್ಲಾಹನ ಸಂಪ್ರೀತಿ, ಅವನ ವಿಧೇಯತೆ ಮತ್ತು ಅವನ ಅನುಸರಣೆಗಾಗಿ ಮಾಡಿಕೊಂಡಿರುವಿರಾದರೆ ನೀವು ದುಃಖಿತರಾಗಬೇಕಾಗಿಲ್ಲ, ಭಯಪಡಬೇಕಾಗಿಲ್ಲ, ನೀವು ನಿಮ್ಮನ್ನು ಸ್ವೇಚ್ಛೆಗಳಿಗೆ, ಪೈಶಾಚಿಕ ವ್ಯಾಮೋಹಗಳಿಗೆ ಮಾಡಿಕೊಂಡಿರುವಿರಾದರೆ ಪರಲೋಕದಲ್ಲಿ ಮಹಾನಷ್ಟವು ನಿಮ್ಮನ್ನು ಕಾಯುತ್ತಿರುವುದು.



# 8. ಈಮಾನ್ ಮತ್ತು ನೆರೆಹೊರೆ

عَنْ أَبِي هُرَيْرَةَ رَضِيَ اللّٰهُ عَنْهُ قَالَ: قَالَ رَسُولُ اللَّهِ ﷺ وَاللَّهِ لَا يُؤْمِنُ وَاللَّهِ لَا يُؤْمِنُ وَاللَّهِ لَا يُؤْمِنُ. قِيلَ مَنْ يَا رَسُولَ اللَّهِ ﷺ ؟ قَالَ الَّذِي لَا يَأْمَنُ جَارُهُ بَوَائِقَهُ (متفق عليه)

ಪ್ರವಾದಿ ಮುಹಮ್ಮದ್‌ರು(ಸ) ಹೇಳಿರುವುದಾಗಿ ಹ. ಅಬೂ ಹುರೈರ(ರ) ಉಲ್ಲೇಖಿಸುತ್ತಾರೆ.

''ಅಲ್ಲಾಹನಾಣೆ ಅವನಲ್ಲಿ ಧರ್ಮವಿಶ್ವಾಸವಿಲ್ಲ, ಅಲ್ಲಾಹನಾಣೆ ಅವನಲ್ಲಿ ಧರ್ಮ ವಿಶ್ವಾಸವಿಲ್ಲ, ಅಲ್ಲಾಹನಾಣೆ ಅವನಲ್ಲಿ ಧರ್ಮವಿಶ್ವಾಸವಿಲ್ಲ.''

ಇದನ್ನು ಕೇಳಿ ಅನುಯಾಯಿಗಳ ಪೈಕಿ ಕೆಲವರು ಪ್ರಶ್ನಿಸಿದರು.

''ಅಲ್ಲಾಹನ ಸಂದೇಶವಾಹಕರೇ ಯಾರಲ್ಲಿ?''

ಪ್ರವಾದಿ(ಸ) ಹೇಳಿದರು: 'ಯಾವ ವ್ಯಕ್ತಿಯ ಕಿರುಕುಳಗಳಿಂದ ಅವನ ನೆರೆಕರೆಯವರು ಸುರಕ್ಷಿತರಲ್ಲವೋ ಅವನಲ್ಲಿ ಧರ್ಮವಿಶ್ವಾಸವಿಲ್ಲ.'' (ಮುತ್ತಫಕುನ್ ಅಲೈಹಿ)

وعنه مَنْ كَانَ يُؤْمِنُ بِاللَّهِ وَالْيَوْمِ الْآخِرِ فَلْيَقُلْ خَيْرًا أَوْ لِيَصْمُتْ ، (متفق عليه)

مَنْ كَانَ يُؤْمِنُ بِاللَّهِ وَالْيَوْمِ الْآخِرِ فَلْيُكْرِمْ جَارَهُ وَمَنْ كَانَ يُؤْمِنُ بِاللَّهِ وَالْيَوْمِ الْآخِرِ فَلْيُكْرِمْ ضَيْفَهُ (متفق عليه)

''ಅಲ್ಲಾಹನ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿರಿಸುವವನು ಒಳ್ಳೆಯದನ್ನು ಮಾತನಾಡಲಿ. ಇಲ್ಲವಾದರೆ ಮೌನವಾಗಿರಲಿ. ಅಲ್ಲಾಹನಲ್ಲಿ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿರಿಸುವವನು ತನ್ನ ನೆರೆಯವನನ್ನು ಗೌರವಿಸಲಿ. ಅಲ್ಲಾಹನಲ್ಲಿ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿರಿಸುವವನು ತನ್ನ ಅತಿಥಿಗಳನ್ನು ಗೌರವಿಸಲಿ.'' (ಮುತ್ತಫಕುನ್ ಅಲೈಹಿ)

ಪರಸ್ಪರ ಸಹಕಾರದಿಂದ ಕೂಡಿದ ಸೌಹಾರ್ದಯುತವಾದ ಜೀವನಕ್ಕೆ ಇಸ್ಲಾಮ್ ನೀಡುವ ಪ್ರಾಧಾನ್ಯತೆಯನ್ನು ಬಹಳ ಶಕ್ತಿಯುತವಾಗಿ ಈ ವಚನವು ಪ್ರಸ್ತುತ ಪಡಿಸುತ್ತದೆ.

ನೆರೆಹೊರೆಯವರು ಪರಸ್ಪರ ಸೌಹಾರ್ದ ಮತ್ತು ಸಹಕಾರ ಮನೋಭಾವದಿಂದ ವರ್ತಿಸಿದರೆ ಸಮಾಜದಲ್ಲಿ ಸೌಹಾರ್ದ ಮತ್ತು ಸಹಕಾರವು ಉಂಟಾಗುವುದು. ನೆರೆಹೊರೆಯವರೊಂದಿಗೆ ಕೋಪ, ದ್ವೇಷದಿಂದ ಇರುವುದೆ ಎಂದರೆ, ನಿತ್ಯ ಜೀವನದಲ್ಲಿ ಭೇಟಿಯಾಗುವ, ಪರಸ್ಪರ ಹತ್ತಿರ ಕೂಡಿ ಜೀವಿಸುವ ಜನರ ಮಧ್ಯೆ ಇರುವ ದ್ವೇಷ ಮತ್ತು ಕೋಪದ ಭಾವನೆ ಎಂದರ್ಥ. ಈ ರೀತಿಯ ಜನರಿಂದ ತುಂಬಿದ ಸಮಾಜದಲ್ಲಿ ಎಂದೂ ಶಾಂತಿ ಮತ್ತು ಸೌಹಾರ್ದವನ್ನು ಸ್ಥಾಪಿಸಲು ಸಾಧ್ಯವಿಲ್ಲ. ಈ ರೀತಿಯ ಜನರಿರುವ ಸಮಾಜವು ಮುಂದುವರಿದು ಅಭಿವೃದ್ಧಿಹೊಂದಲು ಸಾಧ್ಯವಿಲ್ಲ. ಸಮಾಜದಲ್ಲಿ ಸಮಾಧಾನ ಮತ್ತು ಅಭಿವೃದ್ಧಿ ಉಂಟಾಗಬೇಕಾದರೆ ಸೌಹಾರ್ದಯುತ ಮತ್ತು ಪರಸ್ಪರ ಸಹಕಾರ ಮನೋಭಾವವಿರುವ ನೆರೆಕರೆ ಇರಬೇಕು.

ಬಹಳ ಮಹತ್ವಪೂರ್ಣವಾದ ವಿಷಯಗಳ ಬಗ್ಗೆ ಕೇಳುಗರಲ್ಲೂ ಜಿಜ್ಞಾಸೆಯನ್ನು ಮೂಡಿಸಲು ಹೇಳಿದ್ದನ್ನು ಪುನರಾವರ್ತಿಸುವುದು ಪ್ರವಾದಿಯವರ ಶಿಕ್ಷಣ ತರಬೇತಿಯ ಶೈಲಿಯಾಗಿತ್ತು. ನಾನು ಹೇಳುತ್ತಿರುವ ವಿಷಯಗಳನ್ನು ಅನುಯಾಯಿಗಳು ಬಹಳ ಗೌರವಪೂರ್ವಕವಾಗಿ ಸ್ವೀಕರಿಸಬೇಕು ಎಂಬುದು ಇದರ ಉದ್ದೇಶವಾಗಿತ್ತು. ಅವನು ಧರ್ಮವಿಶ್ವಾಸಿಯಲ್ಲ ಎಂದು ಪ್ರವಾದಿಯವರು ಮೂರು ಬಾರಿ ಪುನರಾವರ್ತಿಸಿ ಹೇಳಿದಾಗ ಸ್ವಾಭಾವಿಕವಾಗಿ ಅನುಯಾಯಿಗಳಿಗೆ ಕುತೂಹಲ ಉಂಟಾಯಿತು. ಪ್ರವಾದಿಯವರು ಹೇಳುತ್ತಿರುವ ವ್ಯಕ್ತಿ ಯಾರಾಗಿರಬಹುದು? ನಮಾಝ್ ಮಾಡದವನೇ, ಉಪವಾಸ ಆಚರಿಸದವನೇ, ಹಜ್ಜ್ ನೆರವೇರಿಸದವನೇ ಅಥವಾ ದೇವಭಯವಿಲ್ಲದವನೇ, ದೇವನನ್ನು ಪ್ರೀತಿಸದವನೇ? ಇವುಗಳೆಲ್ಲವೂ ಮನುಷ್ಯನಿಗೆ ದೇವನೊಂದಿಗಿರುವ ಬಾಧ್ಯತೆಗಳಾಗಿವೆ. ಆದರೆ ಪ್ರವಾದಿಯವರು(ಸ) ಹೇಳಿರುವುದು ಈ ಪೈಕಿ ಯಾವ ವಿಚಾರಗಳ ಬಗ್ಗೆಯೂ ಅಲ್ಲ, ನೆರೆಮನೆಯವನ ವಿಶ್ವಾಸಕ್ಕೆ ಪಾತ್ರನಾಗಬೇಕು ಎಂದಾಗಿದೆ. ನೆರೆಹೊರೆಯವರೊಂದಿಗಿನ ಸಂಬಂಧ ಹಾಗೂ ಅಲ್ಲಾಹ್ ಮತ್ತು ಅವನ ಧರ್ಮದೊಂದಿಗಿನ ವಿಶ್ವಾಸದ ಮಧ್ಯೆ ಏನು ಸಂಬಂಧ? ಅದೊಂದು ಸಾಮಾಜಿಕ ಕೆಲಸವಲ್ಲವೇ ಎಂದು ನೀವು ಆಲೋಚಿಸಬಹುದು. ಈ ರೀತಿಯ ಚಿಂತನೆಗಳಿಗೆ ಪೂರ್ಣ ವಿರಾಮ ಹಾಕಲಿಕ್ಕೆಂದೇ ಪ್ರವಾದಿಯವರು ಅದನ್ನು ಮೂರು ಬಾರಿ ಪುನರಾವರ್ತಿಸಿದರು. ಇಸ್ಲಾಮ್ ನಿರ್ದೇಶಿಸಿರುವ ಧರ್ಮ ವಿಶ್ವಾಸವು ಭಕ್ತಿ, ದೇವನ ಬಗೆಗಿನ ವಿಶ್ವಾಸ ಮತ್ತು ನಿಶ್ಚಿತ ಆರಾಧನಾ ಕರ್ಮಗಳನ್ನು ಪಾಲಿಸುವುದಕ್ಕೆ ಸೀಮಿತವಲ್ಲ. ಅದು ಸಂಪೂರ್ಣ ಜೀವನವನ್ನು ನಿಯಂತ್ರಿಸುವ ಶಕ್ತಿಯ ಕೇಂದ್ರವಾಗಿದೆ. ಜನರು ವ್ಯಕ್ತಿಗತವಾಗಿ ವಿಶ್ವಾಸಿಗಳೂ, ಭಕ್ತರೂ ಆಗಿರಬೇಕು. ಆದರೆ ಸಾಮೂಹಿಕ ಜೀವನದಲ್ಲಿ ಅವಿಶ್ವಾಸಿಯೂ, ಧಿಕ್ಕಾರಿಯೂ ಆಗಿರಬಹುದು. ಎಂಬ ಕಲ್ಪನೆಯೇ ಇಸ್ಲಾಮಿಗೆ ವಿರುದ್ಧವಾಗಿದೆ. ವಿಶ್ವಾಸವಿರುವ ವ್ಯಕ್ತಿಗಳಿಂದ ವಿಶ್ವಾಸಿಗಳ ಸಮೂಹ, ಒಳ್ಳೆಯ ವ್ಯಕ್ತಿಗಳಿಂದ ಒಳ್ಳೆಯ ಸಮಾಜ ಇದು ಇಸ್ಲಾಮಿನ ಗುರಿಯಾಗಿದೆ. ಆದುದರಿಂದ ಮೊತ್ತ ಮೊದಲನೆಯದಾಗಿ ಇಸ್ಲಾಮ್ ಕುಟುಂಬ ಸಂಬಂಧವನ್ನು ಸರಿಪಡಿಸುತ್ತದೆ. ಇದರ ಜೊತೆಗೆ ನೆರೆಹೊರೆಯವರೊಂದಿಗಿನ ಸಂಬಂಧವನ್ನು ಸರಿಪಡಿಸುತ್ತದೆ.

ಸಾಮೂಹಿಕ ಸಂಬಂಧದ ಪ್ರಥಮ ಭಾಗವಾದ ನೆರೆಹೊರೆಯವರ ಜತೆಗಿನ ಸಂಬಂಧದಲ್ಲಿ ಅಲ್ಲಾಹನ ಆಜ್ಞೆಗಳನ್ನು ಅನುಸರಿಸದ ವ್ಯಕ್ತಿ ದೇವಭಕ್ತನಾಗಿದ್ದರೂ, ಹೆಚ್ಚು ಆರಾಧನೆಗಳನ್ನು ಮಾಡುವವನಾದರೂ ನಿಜವಾದ ಸತ್ಯವಿಶ್ವಾಸಿಯಾಗುವುದಿಲ್ಲ ಎಂದು ಪ್ರವಾದಿ ಮುಹಮ್ಮದ್ (ಸ) ಕಲಿಸಿರುತ್ತಾರೆ.

ನೆರೆಹೊರೆಯವರೊಂದಿಗೆ ಸೌಹಾರ್ದದೊಂದಿಗೆ ವರ್ತಿಸಬೇಕೆಂದು ಆದೇಶಿಸಿರುವ ಪ್ರವಾದಿ ವಚನವು ಇದೊಂದೇ ಅಲ್ಲ. ಪವಿತ್ರ ಕುರ್‌ಆನಿನ ನಾಲ್ಕನೇ ಅಧ್ಯಾಯದ ಮೂವತ್ತಾರನೇ ವಚನದಲ್ಲಿ ಅಲ್ಲಾಹನ ಆರಾಧನೆ ಮಾಡಬೇಕು. ಬಹುದೇವಾರಾಧನೆ ಮಾಡಬಾರದು ಎಂದು ಆದೇಶಿಸಿರುವುದರ ಜೊತೆಗೆ ನೆರೆಹೊರೆಯವರೊಂದಿಗೂ ಸಹಜೀವಿಗಳೊಂದಿಗೂ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಆದೇಶಿಸಲಾಗಿದೆ. ಆಯಿಶಾ(ರ) ವರದಿ ಮಾಡಿರುವ ಬುಖಾರಿ ಮತ್ತು ಮುಸ್ಲಿಮ್‌ಗಳಲ್ಲಿ ಉಲ್ಲೇಖಿತವಾಗಿರುವ ಪ್ರವಾದಿವಚನದಲ್ಲಿ ಈ ರೀತಿ ಹೇಳಲಾಗಿದೆ. ''ಜಿಬ್ರೀಲ್(ಅ) ನನ್ನೊಂದಿಗೆ ನೆರೆಕರೆಯವರ ಕುರಿತು ಪದೇ ಪದೇ ಆದೇಶಿಸುತ್ತಿದ್ದರು. ಇನ್ನು ವಾರೀಸು ಸೊತ್ತಿನಲ್ಲಿಯೂ ಅವರಿಗೆ ಪಾಲನ್ನು ನೀಡಬೇಕೆಂಬ ಆದೇಶ ನೀಡಲಾಗುತ್ತದೋ ಎಂದು ನಾನು ಭಾವಿಸಿದೆ.''

ಮುಸ್ಲಿಮ್‌ನಲ್ಲಿ ಉಲ್ಲೇಖಿತವಿರುವ ಪ್ರವಾದಿವಚನದಲ್ಲಿ ಈ ರೀತಿ ಇದೆ. ''ಯಾರ ಉಪಟಳದಿಂದ ಅವನ ನೆರೆಹೊರೆಯವನು ನಿರ್ಭೀತನಾಗಿರುವುದಿಲ್ಲವೋ ಅವನು ಸ್ವರ್ಗವನ್ನು ಪ್ರವೇಶಿಸಲಾರನು.''

ಬುಖಾರಿ ಮತ್ತು ಮುಸ್ಲಿಮ್‌ಗಳಲ್ಲಿ ಉದ್ಧರಿಸಲಾಗಿರುವ ಇನ್ನೊಂದು ಪ್ರವಾದಿ ವಚನ ದಲ್ಲಿ ಪ್ರವಾದಿ(ಸ) ಈ ರೀತಿ ಹೇಳಿರುವರು: 'ಯಾರಾದರೂ ಅಲ್ಲಾಹ್ ಮತ್ತು ಅಂತಿಮ ದಿನದ ಮೇಲೆ ವಿಶ್ವಾಸವಿರಿಸುತ್ತಾನೆ ಎಂದಾದರೆ, ಅವನು ತನ್ನ ನೆರೆಯವನನ್ನು ಗೌರವಿಸಲಿ.' ನೆರೆ ಹೊರೆಯವನನ್ನು ಆದರಿಸದ, ಸಹಾಯ ಮಾಡದ ವ್ಯಕ್ತಿಯ ದೇವವಿಶ್ವಾಸ ಮತ್ತು ಪರಲೋಕ ವಿಶ್ವಾಸವು ನಿಷ್ಫಲಗೊಳ್ಳುವುದು ಎಂದರ್ಥ.

ತಬ್ರಾನಿಯಲ್ಲಿ ಉದ್ಧರಿಸಲಾಗಿರುವ ಇನ್ನೊಂದು ಹದೀಸ್‌ನಲ್ಲಿ ನೆರೆಹೊರೆಯವರ ಹಕ್ಕುಗಳು ಈ ರೀತಿ ಇದೆ: ರೋಗಿಯಾದರೆ ಸಂದರ್ಶಿಸಬೇಕು, ಅಗತ್ಯವಾದ ಸಹಾಯವನ್ನು ಒದಗಿಸಬೇಕು, ಮರಣ ಹೊಂದಿದರೆ ಮಯ್ಯಿತ್ ಸಂಸ್ಕಾರದಲ್ಲಿ ಪಾಲ್ಗೊಳ್ಳ ಬೇಕು. ಸಾಲದ ಅಗತ್ಯವಿದ್ದರೆ ನಿಮ್ಮಿಂದ ಕೊಡಲು ಸಾಧ್ಯವಿದ್ದರೆ ಕೊಡಬೇಕು. ಅವರ ತಪ್ಪುಗಳನ್ನು ಕ್ಷಮಿಸಬೇಕು. ಅವರಲ್ಲಿ ಸಂತೋಷದ ಸಂದರ್ಭವೇನಾದರೂ ಬಂದರೆ ಶುಭಾಶಯಗಳೊಂದಿಗೆ ಅವರ ಸಂತೋಷದಲ್ಲಿ ಪಾಲ್ಗೊಳ್ಳಬೇಕು. ಅಪಘಾತವೇನಾದರೂ ಸಂಭವಿಸಿದರೆ, ಅವರ ದುಃಖದಲ್ಲಿ ಪಾಲ್ಗೊಳ್ಳಬೇಕು. ನಮ್ಮ ಮನೆಯ ಗೋಡೆಯನ್ನು ನೆರೆಮನೆಯವರಿಗೆ ಗಾಳಿ, ಬೆಳಕು ಬಾರದ ರೀತಿಯಲ್ಲಿ ಎತ್ತರಿಸಿ ಕಟ್ಟಬಾರದು. ನಮ್ಮ ಮನೆಯಲ್ಲಿ ತಯಾರಿಸಿದ ಆಹಾರದ ಪರಿಮಳದಿಂದ ನೆರೆಮನೆಯವರಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ಇಲ್ಲದಿದ್ದರೆ ತಯಾರಿಸಿದ

ಆಹಾರದ ಒಂದಂಶವನ್ನು ಅವರಿಗೂ ನೀಡಬೇಕು. ನೆರೆಹೊರೆಯವರೊಂದಿಗಿನ ವ್ಯವಹಾರದ ಬಗ್ಗೆ ಎಷ್ಟು ವಿವರವಾಗಿ ಸೂಕ್ಷ್ಮವಾಗಿ ಅಲ್ಲಾಹನ ಪ್ರವಾದಿಯವರು ಕಲಿಸಿಕೊಟ್ಟಿರುವರು ಎಂಬುದನ್ನು ಆಲೋಚಿಸಿ ನೋಡಿರಿ. ಮನೆಯಲ್ಲಿ ಏನಾದರೂ ವಿಶೇಷವಾದ ಆಹಾರ ತಯಾರಿಸಿದರೆ ಅದರಲ್ಲಿ ಒಂದು ಪಾಲನ್ನು ನೆರೆಮನೆಯವರಿಗೆ ನೀಡಬೇಕು. ಹಾಗೆ ಮಾಡುವುದು ಸಾಧ್ಯವಿಲ್ಲ ಎಂದಾದರೆ ಅದರ ಪರಿಮಳ ನೆರೆಮನೆಗೆ ಹೋಗದಂತೆ ನೋಡಿಕೊಳ್ಳಬೇಕು ಏಕೆಂದರೆ ಆ ಪರಿಮಳದಿಂದ ನೆರೆಮನೆಯವನು ಅಥವಾ ಅವನ ಮಕ್ಕಳು ಆಸೆ ಪಡಬಹುದು. ಅದು ಆ ವ್ಯಕ್ತಿಗೆ ಮಾಡುವ ಅನ್ಯಾಯವೆನಿಸುತ್ತದೆ. ಅದನ್ನು ಅವನು ತನ್ನ ಮನೆಯಲ್ಲಿಯೂ ತಯಾರಿಸಲು ನಿರ್ಬಂಧಿತರಾಗಬಹುದು. ಅವರು ಹಾಗೆ ಮಾಡಲು ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿರಿರುವುದಾದರೆ ಆ ಒಂದು ಪರಿಮಳದಿಂದ ನೆರೆಮನೆಯ ವ್ಯಕ್ತಿ ಮತ್ತು ಅವನ ಮಕ್ಕಳು ಅಸೂಯೆ ಪಡುವಂತೆ ಆಗಬಹುದು. ಅದು ಮುಂದುವರಿದು ಕೋಪ, ಶತ್ರುಭಾವನೆಗೂ ಕಾರಣವಾಗಬಹುದು. 'ಕನ್‌ಝುಲ್ ಉಮ್ಮಾಲ್' ಎಂಬ ಗ್ರಂಥದಲ್ಲಿ ಈ ರೀತಿ ಬಂದಿರುತ್ತದೆ. 'ನೀವು ಹಣ್ಣುಗಳನ್ನು ಖರೀದಿಸಿ ತರುತ್ತೀರಾದರೆ ಅದರಲ್ಲಿ ಒಂದು ಪಾಲನ್ನು ನೆರೆಮನೆಯವರಿಗೆ ನೀಡಬೇಕು. ಹಾಗೆ ಮಾಡಲು ಸಾಧ್ಯವಿಲ್ಲವೆಂದಾದರೆ (ನೆರೆಮನೆಯವರು ವಿಶೇಷವಾಗಿ ಅವರ ಮಕ್ಕಳು) ಅದನ್ನು ಕಾಣದ ರೀತಿಯಲ್ಲಿ ಅಡಗಿಸಿಕೊಂಡು ಹೋಗಬೇಕು. ನಿಮ್ಮ ಮಕ್ಕಳು ಹಣ್ಣುಗಳನ್ನು ಹಿಡಿದು ಮನೆಯ ಹೊರಗೆ ಹೋಗದಂತೆ ನೋಡಿಕೊಳ್ಳಬೇಕು. ಏಕೆಂದರೆ ಇದು ಅವರ ಮನಸ್ಸು ಬೇಸರ ಪಡಲು ಕಾರಣವಾಗಬಹುದು.' ನಿಮ್ಮ ಮನೆಯಲ್ಲಿ ಒಳ್ಳೆಯ ಸಾರನ್ನು ಮಾಡಿದರೆ, ಅದಕ್ಕೆ ಸ್ವಲ್ಪ ನೀರನ್ನು ಸೇರಿಸಿ ಹೆಚ್ಚು ಮಾಡಿ, ಅದರ ಒಂದು ಪಾಲನ್ನು ನೆರೆಮನೆಯವರಿಗೂ ನೀಡಬೇಕೆಂದು ತಬ್ರಾನಿಯಲ್ಲಿ ಉಲ್ಲೇಖಿಸಲ್ಪಟ್ಟ ಪ್ರವಾದಿ ವಚನದಲ್ಲಿ ನೋಡಬಹುದು.

ಇಸ್ಲಾಮ್ ನಿರ್ದೇಶಿಸಿರುವ ನೆರೆಹೊರೆಯ ಶಿಷ್ಟಚಾರಗಳೆಲ್ಲವೂ ಕೇವಲ ಮುಸ್ಲಿಮ್ ನೆರೆಹೊರೆಯವರಿಗೆ ಮಾತ್ರ ಸೀಮಿತವೆಂದು ಕೆಲವರು ಭಾವಿಸುತ್ತಾರೆ. ಇದು ದೊಡ್ಡ ತಪ್ಪು ಕಲ್ಪನೆಯಾಗಿದೆ. ನೆರೆಮನೆಯವನು ಯಾವ ಧರ್ಮೀಯನಾಗಿದ್ದರೂ ಮುಸ್ಲಿಮರು ಅವರೊಂದಿಗೆ ನೆರೆಹೊರೆಯವರೊಂದಿಗಿನ ಎಲ್ಲಾ ಶಿಷ್ಟಚಾರಗಳನ್ನು ಪಾಲಿಸಬೇಕು. ನೆರೆಮನೆಯವನು ಮುಸ್ಲಿಮನಾಗಿದ್ದರೆ, ನೆರೆಮನೆಯವನು ಎಂಬುದರ ಜೊತೆಗೆ ಇನ್ನೂ ಕೆಲವು ಹಕ್ಕುಗಳಿವೆ ಎಂಬುದು ಮಾತ್ರ ವ್ಯತ್ಯಾಸ, ಜಿಬ್ರೀಲ್(ಅ) ಹೇಳಿರುವುದಾಗಿ ಪ್ರವಾದಿ ಮುಹಮ್ಮದ್(ಸ) ಹೇಳಿರುವ ಒಂದು ವಚನದಲ್ಲಿ ಈ ರೀತಿ ವಿವರಿಸಿರುವುದಾಗಿ ಮುಹ್‌ದಸ್ ಬಝ್ಝಾರ್‌ಗಳಲ್ಲಿ ಉಲ್ಲೇಖಿಸಲಾಗಿದೆ. ನೆರೆಕರೆ ಮೂರು ರೀತಿಯಲ್ಲಿದೆ. ಒಂದನೆಯ ನೆರೆಕರೆಗೆ ಒಂದು ಹಕ್ಕು ಮಾತ್ರ ಇದೆ. ಎರಡನೆಯ ನೆರೆಕರೆಗೆ ಎರಡು ಹಕ್ಕುಗಳಿವೆ. ಮೂರನೆಯ ನೆರೆಕರೆಗೆ ಮೂರು ಹಕ್ಕುಗಳಿವೆ. ಒಂದನೆಯದು ಬಹುದೇವವಿಶ್ವಾಸಿಯ ನೆರೆಮನೆ. ನೆರೆಮನೆಯವನು ಎಂಬ ಬಾಧ್ಯತೆ ಮಾತ್ರ ಅವರೊಂದಿಗೆ ಇರುತ್ತದೆ. ಎರಡನೆಯ ನೆರೆಕರೆಯವರೊಂದಿಗೆ ಎರಡು

ಬಾಧ್ಯತೆಗಳಿವೆ. ಅವರೊಂದಿಗೆ ನೆರೆಕರೆಯವರು ಎಂಬ ಬಾಧ್ಯತೆಯ ಜೊತೆಗೆ ಮುಸ್ಲಿಮರು ಎಂಬ ಹಕ್ಕು ಕೂಡಾ ಇದೆ. ಮೂರನೆಯ ನೆರೆಕರೆಯವರು ಮುಸ್ಲಿಮರೂ, ಸಂಬಂಧಿಕರೂ ಆದ ನೆರೆಕರೆಯವರು. ಅವರೊಂದಿಗೆ ಸಂಬಂಧಿಕರು, ಮುಸ್ಲಿಮರು ಮತ್ತು ನೆರೆಕರೆಯವರು ಎಂಬ ಮೂರು ರೀತಿಯ ಬಾಧ್ಯತೆಗಳಿವೆ.

ಧರ್ಮ, ಪುಣ್ಯ, ಸತ್ಕರ್ಮ ಎಂಬಿತ್ಯಾದಿ ಅರ್ಥಗಳಲ್ಲೆಲ್ಲಾ ಬಳಸಲ್ಪಡುವ 'ಖೈರ್' ಎಂಬ ಪದವನ್ನು ಎರಡನೆಯ ಹದೀಸಿನಲ್ಲಿ 'ಒಳ್ಳೆಯ' ಎಂದು ಅರ್ಥೈಸಲಾಗಿದೆ. ಅಂದರೆ ಒಳ್ಳೆಯದನ್ನು ಮಾತನಾಡಬೇಕು ಎಂಬುದರ ಉದ್ದೇಶ ಒಳ್ಳೆಯ ಭಾಷೆಯಲ್ಲಿ ಮಾತನಾಡಬೇಕು ಎಂದಲ್ಲ, ಕೇಳಲು ಇಂಪಾದುದು ಮತ್ತು ತಾತ್ಕಾಲಿಕ ಪ್ರಯೋಜನವನ್ನು ನೀಡುವಂತಹದ್ದನ್ನು ಹೇಳುವುದಲ್ಲ. ಮಾತು ಸತ್ಯವಾಗಿರಬೇಕು. ಧರ್ಮ ಮತ್ತು ನೀತಿಗೆ ಅನುಗುಣವಾಗಿರಬೇಕು. ಕೇಳುವವನಿಗೂ ಹೇಳುವವನಿಗೂ ಪ್ರಯೋಜನಕಾರಿಯಾಗಿರಬೇಕು ಎಂದಾಗಿದೆ. ಈ ಹದೀಸನ್ನು ವಿವರಿಸುತ್ತಾ ಇಮಾಮ್ ಶಾಫಿಈ(ರ) ಹೇಳುತ್ತಾರೆ- ''ಮಾತನಾಡಲು ಇಚ್ಛಿಸಿದರೆ ಮೊದಲು ಆಲೋಚಿಸಬೇಕು. ಬಳಿಕ ಆ ಮಾತನ್ನು ಹೇಳಿದರೆ ಏನೂ ಕೆಡುಕು ಉಂಟಾಗಲಾರದು ಎಂದು ದೃಢವಾದಾಗ ಮಾತನಾಡಬೇಕು. ಹಾಗೆ ದೃಢಪಡಲಿಲ್ಲ ಅಥವಾ ಆ ವಿಷಯದಲ್ಲಿ ಸಂಶಯವಿರುವುದಾದರೆ ಸುಮ್ಮನಿರಬೇಕು.''

ಅನಾವಶ್ಯಕವಾಗಿ ಮಾತನಾಡಬಾರದು ಎಂಬುದು ಎಷ್ಟು ಪ್ರಧಾನವೋ ಅಗತ್ಯವಿದ್ದರೆ ಮಾತನಾಡುವುದೂ ಅಷ್ಟೇ ಅಗತ್ಯವಾಗಿದೆ. ಅಬೂ ಖಾಸಿಮುಲ್ ಖುರೈಷಿ ಹೇಳುತ್ತಾರೆ 'ಮಾತನಾಡ ಬೇಕಾದಲ್ಲಿ ಮಾತನಾಡುವುದು ಶ್ರೇಷ್ಠರ ಸ್ವಭಾವವಾಗಿರುವಂತೆ, ಮೌನ ಪಾಲಿಸ ಬೇಕಾದಲ್ಲಿ ಮೌನವಾಗಿರುವುದು ಮಹಾತ್ಮರ ಗುಣವಾಗಿದೆ. ಸತ್ಯ ಹೇಳದಿರುವವನು ಮಹಾ ವಂಚಕ ಎಂದು ಅಬೂ ಅಲೀ ಹೇಳಿರುತ್ತಾರೆ.

ಅನಗತ್ಯ ಮಾತುಕತೆಯು ವ್ಯಕ್ತಿ, ಸಮೂಹ ಮತ್ತು ದೇಶಕ್ಕೆ ಹಾನಿಯನ್ನುಂಟು ಮಾಡಬಲ್ಲದು. ಪ್ರತಿಯೊಬ್ಬರೂ ಆತ್ಮಾವಲೋಕನವನ್ನು ಮಾಡಿಕೊಂಡರೆ, ಅನಗತ್ಯವಾದ ಮಾತುಗಳಿಂದ ಎಷ್ಟು ಕೆಡುಕುಗಳು ಸಂಭವಿಸುತ್ತವೆ ಎಂಬುದನ್ನು ಉದಾಹರಿಸಲು ಸಾಧ್ಯವಾಗಬಹುದು. ಒಮ್ಮೆ ಓರ್ವ ವ್ಯಕ್ತಿ ಆತ್ಮಜ್ಞಾನಿಯೊಂದಿಗೆ ಪ್ರಶ್ನಿಸಿದರು- ''ನೀವು ಯಾವಾಗಲೂ ಮೌನವಾಗಿರುವುದೇಕೆ?'' ಆ ವ್ಯಕ್ತಿ ಅದಕ್ಕೆ ಈ ರೀತಿ ಉತ್ತರಿಸಿದರು. ''ಏಕೆಂದರೆ ಮೌನವನ್ನು ಪಾಲಿಸಿದ ಕಾರಣದಿಂದಾಗಿ ನನಗೆಂದೂ ದುಃಖಿಸಬೇಕಾದ ಅಗತ್ಯ ಬರಲಿಲ್ಲ, ಆದರೆ ಮಾತನಾಡಿದ ಕಾರಣ ಅನೇಕ ವೇಳೆ ನನಗೆ ದುಃಖ ಪಡಬೇಕಾಗಿ ಬಂದಿದೆ.'' ಖಡ್ಗದಿಂದ ಗಾಯವಾಗುವಂತೆಯೇ ನಾಲಗೆಯಿಂದಲೂ ಗಾಯವಾಗುತ್ತದೆ ಆದರೆ ನಾಲಗೆಯಿಂದುಂಟಾದ ಗಾಯವು ಒಣಗಲು ಹೆಚ್ಚು ಸಮಯ ತೆಗೆದುಕೊಳ್ಳುತ್ತದೆ ಎಂಬ ಮಾತು ಜನಪ್ರಿಯವಾಗಿದೆ. ಅಲೀ(ರ) ಹೇಳಿರುತ್ತಾರೆ: ಕಾಲು ಜಾರಿ ಬಿದ್ದು ಯಾರೂ ಸಾಯುವುದಿಲ್ಲ, ನಾಲಗೆ ಜಾರಿಬಿದ್ದು ಯುವಕನೂ ಮರಣ ಹೊಂದಬಹುದು.''

ಒಂದು ಪ್ರವಾದಿವಚನದಲ್ಲಿ ಈ ರೀತಿ ಬಂದಿದೆ. ''ಆರೋಗ್ಯವನ್ನು ಹತ್ತು ಭಾಗಗಳಾಗಿ ವಿಂಗಡಿಸಿದರೆ ಆದರಲ್ಲಿ ಒಂಭತ್ತು ಪಾಲು ಮೌನವಾಗಿದೆ. ದೇವಸ್ತುತಿಯನ್ನು ಹೊರತುಪಡಿಸಿ.'' ಸಂಕ್ಷಿಪ್ತವಾಗಿ ನಾಲಗೆಯ ನಿಯಂತ್ರಣವು ಸತ್ಯವಿಶ್ವಾಸಿಗಳ ಅನಿವಾರ್ಯ ಅವಶ್ಯಕತೆಯಾಗಿದೆ. ವಿಶ್ವಾಸಿ ಮಿತಭಾಷಿಯಾಗಿರಬೇಕು. ವಾಚಾಳಿಯಾಗಿರಬಾರದು. ಅಗತ್ಯವಿದ್ದಾಗ, ಅಗತ್ಯವಿದ್ದಷ್ಟು ಮಾತ್ರ ಮಾತನಾಡಬೇಕು. ಮಾತನಾಡುವ ಅಗತ್ಯವಿಲ್ಲದೆಡೆ ಮೌನ ಪಾಲಿಸಬೇಕು. ಮಾತು ಒಂದು ಅನುಗ್ರಹ ಮತ್ತು ಸಂಪತ್ತಾಗಿದೆ. ಸಂಪತ್ತನ್ನು ಅಗತ್ಯವಿಲ್ಲದೆಡೆ ಖರ್ಚು ಮಾಡುವುದು ನಿಷಿದ್ಧ ಮತ್ತು ದುಂದುವೆಚ್ಚವಲ್ಲವೇ? ಅನಗತ್ಯವಾಗಿ ಮಾತನಾಡುವುದೂ ಇದೇ ರೀತಿಯಾಗಿದೆ.

ಸತ್ಯವಿಶ್ವಾಸದ ಇನ್ನೊಂದು ಬೇಡಿಕೆ ನೆರೆಕರೆಯವರನ್ನು ಗೌರವಿಸುವುದಾಗಿದೆ, ಗೌರವಿಸುವುದು ಎಂಬ ಪದವು ಗಮನಾರ್ಹವಾಗಿದೆ. ಕೇವಲ ಸಹಾಯ, ಸಹಕಾರ, ಸೌಹಾರ್ದಕ್ಕಿಂತಲೂ ಮಿಗಿಲಾಗಿ ಗೌರವಯುತ ವ್ಯವಹಾರ ನಿಲ್ಲುತ್ತದೆ. ಪ್ರತಿಯೊಬ್ಬರೂ ತಮ್ಮ ನೆರೆಕರೆಯವರನ್ನು ತಮಗಿಂತ ಮೇಲಿನವರೆಂದು ಪರಿಗಣಿಸಬೇಕೆಂಬುದು ಇದರ ಅರ್ಥ. ಈ ರೀತಿಯ ಮನಃಸ್ಥಿತಿಯಿಂದ ಸೃಷ್ಟಿಗಳ ಮಧ್ಯೆ ಐಕ್ಯ, ಸಹಕಾರ ಹೆಚ್ಚು ದೃಢ ಮತ್ತು ಬಲಿಷ್ಠವಾಗಿರುತ್ತದೆ. ನೆರೆಕರೆಯಲ್ಲಿ ಧನಿಕರೂ ಬಡವರೂ ಇರಬಹುದು. ಹಲವು ಮತ ಧರ್ಮದವರೂ ಜಾತಿಯವರೂ ಇರಬಹುದು. ನೆರೆಮನೆಯರು ಎಂಬ ನೆಲೆಯಲ್ಲಿ ಗೌರವಾದರಕ್ಕೆ ಮತ್ತು ಪರಿಗಣನೆಗೆ ಎಲ್ಲರೂ ಒಂದೇ ರೀತಿಯಲ್ಲಿ ಅರ್ಹರಾಗಿರುತ್ತಾರೆ. ನೆರೆಕರೆಯವರೊಂದಿಗಿನ ಬಾಧ್ಯತೆ ಎಷ್ಟರ ಮಟ್ಟಿಗೆ ಗೌರವಾರ್ಹವೆಂದು ಸಾಬೀತು ಪಡಿಸುವ ಇನ್ನೊಂದು ಪ್ರವಾದಿ ವಚನವು ಹೀಗಿದೆ.'' ನೆರೆಮನೆಯವನು ಹಸಿದು ಮಲಗಿರುವಾಗ ಹೊಟ್ಟೆತುಂಬಾ ಉಣ್ಣುವವನು ನಮ್ಮವನಲ್ಲ.'' ನೆರೆಮನೆಯವರ ಹಸಿವನ್ನು ಪರಿಗಣಿಸದೆ ಸ್ವಂತ ಹಸಿವಿನ ಬಗ್ಗೆ ಮಾತ್ರ ಚಿಂತಿಸುವ ವ್ಯಕ್ತಿ ಮುಸ್ಲಿಮನಲ್ಲ ಎಂದು ಪ್ರವಾದಿ ಮುಹಮ್ಮದ್‌ರು(ಸ) ಕಲಿಸಿದ್ದಾರೆ. ಆದುದರಿಂದ ನೆರೆಹೊರೆಯವರೊಂದಿಗೆ ಗೌರವಯುತವಾದ ವರ್ತನೆ ಸತ್ಯವಿಶ್ವಾಸದ ಅನಿವಾರ್ಯ ಬೇಡಿಕೆಯಾಗಿದೆ.

ಹದೀಸಿನ ಬೆಳಕಿನಲ್ಲಿ ಚಿಂತನೆ ನಡೆಸಿದಾಗ, ನೆರೆಹೊರೆಯವರನ್ನು ಆದರಿಸುವುದನ್ನು ಇಸ್ಲಾಮೀ ಶರೀಅತ್ ಮುಸ್ಲಿಮರಿಗೆ ಕಡ್ಡಾಯಗೊಳಿಸಿದೆ. ಆದುದರಿಂದ ಒಬ್ಬರ ನೆರೆಹೊರೆಯವರು ಯಾರೆಲ್ಲ ಎಂದು ವಿದ್ವಾಂಸರು ಚರ್ಚೆ ಮಾಡಿದ್ದಾರೆ. ಒಂದು ಊರಿನಲ್ಲಿ ಒಟ್ಟಾಗಿ ಜೀವಿಸುವವರೆಲ್ಲರೂ ನೆರೆಹೊರೆಯವರಾಗಿರುತ್ತಾರೆ. ಅಂದರೆ ಒಂದು ಮನೆಯ ಸುತ್ತಮುತ್ತಲಿರುವ ನಲವತ್ತು ಮನೆಯವರು ಅವರ ಹತ್ತಿರದ ನೆರೆಹೊರೆಯವರು. ಹತ್ತಿರವಿರುವ ಮತ್ತು ದೂರವಿರುವ ನೆರೆಹೊರೆಯವರನ್ನು ಪರಿಗಣಿಸಬೇಕೆಂದು ಪವಿತ್ರ ಕುರ್‌ಆನ್ ನಿರ್ದೇಶಿಸುತ್ತದೆ. ಒಂದು ಸ್ಥಳದಲ್ಲಿ ಒಟ್ಟಿಗೆ ಕೆಲಸ ಮಾಡುವವರು, ಹಾಸ್ಟೆಲ್‌ನಲ್ಲಿ ಜೊತೆಯಾಗಿರುವವರು ಕೂಡಾ ನೆರೆಹೊರೆಯವರಾಗಬಹುದು.

ಹಿಂದಿನ ಕಾಲದಲ್ಲಿ ಗ್ರಾಮಗಳಲ್ಲಿ ಮಾತ್ರವಲ್ಲ ಪಟ್ಟಣಗಳಲ್ಲೂ ಇಂದಿನಂತೆ ಹೋಟೇಲು, ಲಾಡ್ಜ್‌ಗಳು ಇರುತ್ತಿರಲಿಲ್ಲ, ಪ್ರಯಾಣಿಕರಿಗೆ ವಿಶ್ರಾಂತಿ ಪಡೆಯಲು, ಆಹಾರ ಸೇವಿಸಲು ಇದ್ದ ಏಕೈಕ ವ್ಯವಸ್ಥೆ ಊರ ಜನರ ಅತಿಥಿ ಸತ್ಕಾರ ಮಾತ್ರವಾಗಿತ್ತು. ಅತಿಥಿಗಳನ್ನು ಆದರದಿಂದ ಸತ್ಕರಿಸುವ ಪರಿಪಾಠವಿಲ್ಲದೇ ಇರುತ್ತಿದ್ದರೆ ಹಿಂದಿನ ಕಾಲದಲ್ಲಿ ಯಾರಿಗೂ ದೂರದ ಪ್ರಯಾಣವನ್ನು ಕೈಗೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸನ್ನಿವೇಶದಲ್ಲಿ ಈ ಮೇಲಿನ ಉಪದೇಶ ಬಹಳ ಪ್ರಸಕ್ತವಾಗಿತ್ತು. ಇಂದಿನ ಯಾತ್ರಿಕರಿಗೆ ಸಂಬಂಧಿಸಿ ಇದು ಅಷ್ಟು ಪ್ರಸಕ್ತವಲ್ಲ, ಆದರೂ ಅಸ್ಸಹಾಯಕರಾದ, ಇತರರ ಮೇಲೆ ಅವಲಂಬಿತರಾಗಿ ಒಂದು ಊರಿಗೆ ತಲುಪುವ ಪ್ರಯಾಣಿಕರನ್ನು ರಕ್ಷಿಸುವುದು ಆ ಊರಿನ ಸತ್ಯವಿಶ್ವಾಸಿಗಳ ವೈಯಕ್ತಿಕ ಮತ್ತು ಸಾಮೂಹಿಕ ಹೊಣೆಗಾರಿಕೆಯಾಗಿದೆ ಎಂಬುದನ್ನು ಈ ಹದೀಸ್ ಕಲಿಸುತ್ತದೆ. ಈ ಅರ್ಥದಲ್ಲಿ ಇದು ಹಿಂದೆಯೂ ಇಂದೂ ಮುಂದೆಯೂ ಪ್ರಸಕ್ತವಾಗಿರುತ್ತದೆ. ಪ್ರಕೃತಿ ವಿಕೋಪ, ಕೋಮುಗಲಭೆ, ವರ್ಗ ಸಂಘರ್ಷ, ದೇಶಗಳ ನಡುವಿನ ಯುದ್ಧ ಮುಂತಾದ ಕಾರಣದಿಂದ ನಿರಾಶ್ರಿತರಾಗುವವರನ್ನು ಅತಿಥಿಗಳೆಂದು ಸ್ವೀಕರಿಸಿ ಸಹಾಯ ಸಂರಕ್ಷಣೆಯನ್ನು ನೀಡಬೇಕಾದುದು ಸತ್ಯವಿಶ್ವಾಸಿಗಳ ಕರ್ತವ್ಯವಾಗಿರುತ್ತದೆ.



# 9. ಸುನ್ನತ್ ಮತ್ತು ಬಿದ್‌ಅತ್

عَنْ أُمِّ الْمُؤْمِنِينَ أُمِّ عَبْدِ اللهِ عائشَةَ رَضِيَ اللهُ عَنْهَا قَالَتْ قَالَ رَسُولُ اللهِ ﷺ
مَنْ أَحْدَثَ فِي أَمْرِنَا هَذَا مَا لَيْسَ مِنْهُ فَهُوَ رَدٌّ. (متفق عليه)

ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳಿರುವರು ಎಂದು ಸತ್ಯವಿಶ್ವಾಸಿಗಳ ಮಾತೆ ಉಮ್ಮು ಅಬ್ದುಲ್ಲ ಆಯಿಶಾ(ರ) ಉಲ್ಲೇಖಿಸುತ್ತಾರೆ: ''ನಮ್ಮ ಈ ಧರ್ಮದಲ್ಲಿ ಅದಕ್ಕೆ ಸಂಬಂಧ ಪಡದ ಯಾವುದನ್ನಾದರೂ ಯಾರಾದರೂ ಹೊಸತಾಗಿ ಸೇರಿಸಿದರೆ ಅದು ತಿರಸ್ಕರಿಸಲ್ಪಡಬೇಕು.'' (ಮುತ್ತಫಕುನ್ ಅಲೈಹಿ)

ಮುಸ್ಲಿಮರೆಲ್ಲರೂ ಅರಿತಿರಬೇಕಾದ ಪ್ರಾಥಮಿಕ ವಿಷಯಗಳನ್ನು ಪ್ರವಾದಿಯವರು(ಸ) ಈ ವಚನದ ಮೂಲಕ ಕಲಿಸಿರುವರು. ಧರ್ಮವು ಅಲ್ಲಾಹನದ್ದಾಗಿದೆ. ಅವನು ಅದನ್ನು ಅಂತಿಮ ಪ್ರವಾದಿಯವರ ಮೂಲಕ ಸಂಪೂರ್ಣವಾಗಿ ಮನುಷ್ಯರಿಗೆ ತಲುಪಿಸಿರುವನು. ಅಲ್ಲಾಹನು ಹೇಳುತ್ತಾನೆ; ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ. ನನ್ನ ಕೊಡುಗೆಯನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ ಮತ್ತು ಇಸ್ಲಾಮನ್ನು ನಿಮ್ಮ ಧರ್ಮವೆಂಬ ನೆಲೆಯಲ್ಲಿ ಅಂಗೀಕರಿಸಿದ್ದೇನೆ. (ಪವಿತ್ರ ಕುರ್‌ಆನ್, 5:3) ಇಸ್ಲಾಮ್ ಧರ್ಮವು ಸಂಪೂರ್ಣವಾಗಿದೆ. ಅದಕ್ಕಿನ್ನು ಏನನ್ನಾದರೂ ಸೇರಿಸಲು ಅಥವಾ ಅದರಿಂದ ತೆಗೆದು ಹಾಕಲು ಏನೂ ಇಲ್ಲ, ಹಾಗೆ ಮಾಡಲಿಕ್ಕೆ ಯಾರಿಗೂ ಅಧಿಕಾರವಿಲ್ಲ, ಅದರಲ್ಲಿ ಸೇರಿಲ್ಲದ್ದನ್ನು ಯಾರಾದರೂ ಅದಕ್ಕೆ ಸೇರಿಸಿದರೆ ಅಥವಾ ಅದರಲ್ಲಿರುವುದರ ಪೈಕಿ ಏನನ್ನಾದರೂ ಕಡಿತಗೊಳಿಸಿದರೆ ಅದು ಸ್ವೀಕಾರಾರ್ಹವಲ್ಲ. ಇಲ್ಲಿ ಹೊಸತಾಗಿ ಆವಿಷ್ಕರಿಸುವುದು ಎಂದು ಹೇಳಲಾಗಿರುವುದು ಇಸ್ಲಾಮಿನ ನಿಯಮ ನಿಬಂಧನೆಗಳ ಕುರಿತಾಗಿದೆ. 'ಧರ್ಮದಲ್ಲಿ ಇಲ್ಲದೆ ಇರುವುದು' ಎಂದು ಹೇಳಿರುವುದರ ಅರ್ಥವೇನೆಂದರೆ ಧರ್ಮದ ಮೂಲ ತತ್ವಗಳಿಗೆ, ಅಲ್ಲಾಹನು ನೀಡಿರುವ ನಿಯಮ ವ್ಯವಸ್ಥೆಗಳಿಗೆ ವಿರುದ್ಧವಾಗಿರುವವುಗಳು. ಈ ರೀತಿಯಲ್ಲಿ ಆವಿಷ್ಕರಿಸಲ್ಪಡುವ ನೂತನ ವಿಶ್ವಾಸ ಮತ್ತು ಆಚಾರಗಳಿಗೆ 'ಬಿದ್‌ಅತ್' ಎನ್ನಲಾಗುತ್ತದೆ. ಬಿದ್‌ಅತ್‌ಗೆ ಒಂದು ಉದಾಹರಣೆಯೇನೆಂದರೆ, ಸೃಷ್ಟಿಗಳ ಪ್ರಾರ್ಥನೆಯನ್ನು ಆಲಿಸುವ ಶಕ್ತಿ

ಮತ್ತು ಅರ್ಹತೆ ಇರುವುದು ಅಲ್ಲಾಹನಿಗೆ ಮಾತ್ರ ಎಂಬುದು ಇಸ್ಲಾಮ್ ಧರ್ಮದ ಮೂಲ ತತ್ವವಾಗಿದೆ. ಪ್ರವಾದಿಗಳು ಮತ್ತು ಸಹಾಬಿಗಳು ಅಲ್ಲಾಹನ ಹೊರತು ಬೇರೆ ಯಾರನ್ನೂ ಕರೆದು ಪ್ರಾರ್ಥಿಸಿರಲಿಲ್ಲ, ಪ್ರವಾದಿಗಳು ಮತ್ತು ಔಲಿಯಾಗಳು ಅಲ್ಲಾಹನ ಸಾಮೀಪ್ಯ ಗಳಿಸಿದವರಾದ ಕಾರಣ ಅವರೊಂದಿಗೆ ಕರೆದು ಪ್ರಾರ್ಥಿಸಿದರೆ ಒಳ್ಳೆಯದೆಂಬ ಒಂದು ವಾದವು ನಂತರದ ಕಾಲದಲ್ಲಿ ಆರಂಭವಾಗಿ ಪ್ರಚಾರವನ್ನು ಪಡೆಯಿತು. ಇದು 'ಇಸ್ತಿಗಾಸ' ಎಂದು ಕರೆಯಲ್ಪಡುತ್ತದೆ. ಇದು ಇಸ್ಲಾಮ್ ಧರ್ಮದ ಮೂಲ ತತ್ವಗಳಿಗೆ ವಿರುದ್ಧವಾಗಿರುವುದರ ಜೊತೆಗೆ ಬಹುದೇವಾರಾಧನೆಯ ಪರವಾಗಿರುವ ಆಚಾರವಾದ ಕಾರಣ ತಿರಸ್ಕರಿಸಲ್ಪಡಬೇಕಾದ ಬಿದ್‌ಅತ್ ಆಗಿದೆ.

ಬಿದ್‌ಅತ್ ಎಂದರೆ ಪ್ರವಾದಿಚರ್ಯೆ ಮತ್ತಿತರ ಶರಈ ಪ್ರಮಾಣಗಳ ಬೆಂಬಲವಿಲ್ಲದೆ, ದೇವನ ಸಂಪ್ರೀತಿಗೆ ಕಾರಣವಾಗಬಹುದು, ಇಸ್ಲಾಮ್ ಧರ್ಮದ ಭಾಗವಾಗಿದೆ ಎಂದು ಆರೋಪಿಸಿಕೊಂಡು ಸ್ವಂತವಾಗಿ ಆವಿಷ್ಕರಿಸುವ ಕರ್ಮ, ಮಾತು ಮತ್ತು ವಿಶ್ವಾಸಗಳಾಗಿವೆ. ಪ್ರವಾದಿಚರ್ಯೆ ಮತ್ತು ಧಾರ್ಮಿಕ ನಿಯಮಗಳ ವಿಷಯದಲ್ಲಿ ಕಾಲಕ್ರಮೇಣ ಅಭಿವೃದ್ಧಿಯ ಕಾರಣದಿಂದ ಆವಿಷ್ಕರಿಸಲ್ಪಟ್ಟ ಹೊಸ ಸಂಪ್ರದಾಯಗಳು ಬಿದ್‌ಅತ್‌ನಲ್ಲಿ ಒಳಪಡುವುದಿಲ್ಲ ಎಂಬುದನ್ನು ಈ ವಿವರಣೆ ಸ್ವತಃ ಸ್ಪಷ್ಟ ಪಡಿಸುತ್ತದೆ. ಮದ್ಯಪಾನವನ್ನು ಇಸ್ಲಾಮ್ ಕಟುವಾಗಿ ನಿಷೇಧಿಸಿದೆ. ಅದು ಬುದ್ಧಿ ಭ್ರಮೆಗೊಳಿಸುತ್ತದೆ ಮತ್ತು ಮನುಷ್ಯನನ್ನು ದುಷ್ಕೃತ್ಯಗಳಿಗೆ ಪ್ರೇರೇಪಿಸುತ್ತದೆ. ಮಾದಕ ವಸ್ತುಗಳನ್ನು ಪವಿತ್ರ ಕುರ್‌ಆನ್ ನಿಷೇಧಿಸಿರುವುದು ಕಂಡು ಬರುವುದಿಲ್ಲ, ಆದರೆ ಮಾದಕ ವಸ್ತುಗಳ ಸೇವನೆಯು ಮದ್ಯಪಾನಕ್ಕಿಂತಲೂ ಹೆಚ್ಚಿನ ವಿಪತ್ತನ್ನುಂಟು ಮಾಡುತ್ತದೆ. ಆದುದರಿಂದ ಕಾಲಕ್ರಮೇಣ ಮಾದಕ ವಸ್ತುಗಳು ಪ್ರಚಾರಕ್ಕೆ ಬಂದಾಗ ವಿದ್ವಾಂಸರು ಅದು ಕೂಡಾ ಮದ್ಯಪಾನದಂತೆ ನಿಷಿದ್ಧವಾಗಿದೆ ಎಂದು ನಿರ್ಣಯಿಸಿದರು. ಆ ವಿಧಿಯು ಧರ್ಮಸಮ್ಮತವಾಗಿದೆ. ಈ ರೀತಿಯಲ್ಲಿ ಶರಈ ವಿಷಯಗಳಿಗೆ ಸಂಬಂಧಪಟ್ಟು ಆವಿಷ್ಕರಿಸಲ್ಪಡುವ ಹೊಸ ವಿಷಯಗಳು ಅದರ ಮಹತ್ವ ಮತ್ತು ಪ್ರಸಕ್ತತೆಯನ್ನು ಅನುಸರಿಸಿ ಕಡ್ಡಾಯ, ಸ್ವೀಕಾರಾರ್ಹ ಮತ್ತು ಅನುಮತಿಸಲ್ಪಟ್ಟ ವಿಷಯಗಳೆನಿಸುತ್ತವೆ.

ಇನ್ನೊಂದು ಉದಾಹರಣೆ, ಇಂದಿನ ಕಾಲದಲ್ಲಿರುವಂತೆ ಪ್ರವಾದಿ ಮುಹಮ್ಮದ್‌ರ(ಸ) ಕಾಲದಲ್ಲಿ ಶಾಲೆಗಳಾಗಲಿ, ಕಾಲೇಜುಗಳು, ಯೂನಿವರ್ಸಿಟಿಗಳಾಗಲಿ ಇರಲಿಲ್ಲ, ಆದರೆ ಶಿಕ್ಷಣ ಗಳಿಸುವುದನ್ನು ಇಸ್ಲಾಮ್ ಕಡ್ಡಾಯಗೊಳಿಸಿದೆ. ಈ ಆದೇಶದ ಸಮಯೋಚಿತ ಪ್ರಾಯೋಗಿಕ ರೂಪವೆಂಬನೆಲೆಯಲ್ಲಿ ಇಂತಹಸಂಸ್ಥೆಗಳನ್ನು ರಚಿಸಿ ನಡೆಸಬೇಕಾದುದು ಇಂದಿನ ಸಮುದಾಯದ ಕಡ್ಡಾಯ ಕರ್ತವ್ಯವಾಗಿದೆ. ಆದರೆ ಪ್ರವಾದಿ ಚರ್ಯೆಯ ಆಧಾರವಿಲ್ಲದೆ ಪ್ರತ್ಯೇಕ ಸ್ಥಳ ಮತ್ತು ಸಂದರ್ಭಗಳಲ್ಲಿ ಹೊಸ ರೀತಿಯ ಆರಾಧನಾ ವಿಧಾನಗಳನ್ನು ಅನುಸರಿಸುವುದು ಬಿದ್‌ಅತ್ ಆಗಿದೆ. ಉದಾಹರಣೆಗೆ ಗೋರಿಗಳನ್ನು ಎತ್ತರವಾಗಿ ಕಟ್ಟಿ ಆರಾಧನಾಲಯಗಳನ್ನಾಗಿಸುವುದು. ವಾರ್ಷಿಕ ಹರಕೆಗಳನ್ನು ಸಲ್ಲಿಸುವುದು ಇತ್ಯಾದಿ. ಧರ್ಮದ ಮೂಲ ತತ್ವಗಳಿಗೆ ಬದ್ಧವಾದ ಹೊಸ

ಸಂಪ್ರದಾಯಗಳು ಅನುಮತಿಸಲ್ಪಟ್ಟ ಪ್ರವಾದಿ ಚರ್ಯೆಗಳಾಗಿವೆ. ಪ್ರವಾದಿಗಳ ಕಾಲಾನಂತರ ಕುರ್‌ಆನನ್ನು ಮುಸ್‌ಹಫ್‌ನ ರೂಪದಲ್ಲಿ ಕ್ರೋಢೀಕರಿಸಲಾಯಿತು. ಸಹಾಬಿಗಳ ಕಾಲಾನಂತರ ತಾಬಈಗಳು ಹದೀಸನ್ನು ಗ್ರಂಥ ರೂಪದಲ್ಲಿ ಕ್ರೋಢೀಕರಿಸಿದರು.

ಹೆಚ್ಚಿನ ಜನರಿಗೆ ಸುನ್ನತ್ ಮತ್ತು ಬಿದ್‌ಅತ್‌ಗಳ ಕುರಿತು ಸಾಮಾನ್ಯ ಜ್ಞಾನವಿರುವುದಿಲ್ಲ. ಯಾವ ವಿದ್ವಾಂಸರನ್ನು ಅವಲಂಬಿಸಿರುತ್ತಾರೋ ಅವರು ಹೇಳುವ ವಿಷಯಗಳೇ ಅನೇಕರಿಗೆ ಸುನ್ನತ್. ವಿರೋಧಿಸುವ ವಿಷಯಗಳು ಬಿದ್‌ಅತ್. ಆದುದರಿಂದ ಸುನ್ನತನ್ನು ಹೆಚ್ಚು ಗೌರವಿಸಿ ಪಾಲಿಸುವವರು ಜನಸಾಮಾನ್ಯರ ದೃಷ್ಟಿಯಲ್ಲಿ ಮುಬ್ತದೀಗಳು ಅಂದರೆ ನವೀನಾಚಾರಿಗಳು.

ಹೊಸ ಆಚರಣೆಗಳ ಮಹತ್ವ ಮತ್ತು ಸುನ್ನತ್‌ಗಳ ಮಧ್ಯೆ ಇರುವ ಅಂತರದ ಬಗ್ಗೆ ಎಲ್ಲರೂ ಸರಿಯಾಗಿ ತಿಳಿದು ಕೊಂಡಿರಬೇಕು. ಏಕೆಂದರೆ ಎಲ್ಲಾ ವಿಭಾಗಕ್ಕೆ ಸೇರಿದವರೂ ಶುಕ್ರವಾರದ ಜುಮಾ ಖುತ್ಬಾ(ಪ್ರವಚನ)ದಲ್ಲಿ ಪೀಠಿಕೆ ಎಂಬಂತೆ ಈ ಮೇಲೆ ಪ್ರಸ್ತಾಪಿಸ ಲಾಗಿರುವ ಹದೀಸ್ ಮತ್ತು ಅದರ ವಿವರಣೆಯನ್ನೂ, ಮಹತ್ವವನ್ನೂ ಮೇಲಿಂದ ಮೇಲೆ ಉಪದೇಶಿಸುತ್ತಿರುತ್ತಾರೆ. ಬಿದ್‌ಅತನ್ನು ನಿಷೇಧಿಸುವುದಕ್ಕೆ ತಾಕೀತು ಮಾಡಲಾಗಿರುವ ಈ ಹದೀಸನ್ನು ಓದಿ ಮುಂದುವರಿಸುವ ಖುತ್ಬಾಗಳಲ್ಲೇ ಹಲವು ವೇಳೆ ಬಿದ್‌ಅತ್‌ಗಳು ನುಸುಳಿ ಕೊಳ್ಳುವುದಿದೆ, ಇದೊಂದು ವಿಚಿತ್ರ ವೈರುಧ್ಯವಾಗಿದೆ. ಖುತ್ಬಾದ ಭಾಷೆಯ ಕುರಿತ ಚರ್ಚೆ ಇದಕ್ಕೆ ಉದಾಹರಣೆಯಾಗಿದೆ. ಪ್ರವಾದಿ ಮುಹಮ್ಮದ್‌ರು(ಸ) ಅರಬಿ ಭಾಷೆಯಲ್ಲಿ ಖುತ್ಬಾ ನಡೆಸಿದ್ದರು. ಕಾರಣವೇನೆಂದರೆ ಪ್ರವಾದಿಯವರು ಅರೇಬಿಯಾದವರಾಗಿದ್ದರು. ಖುತ್ಬಾ ಅರಬಿಯಲ್ಲಿಯೇ ಮಾಡಬೇಕೆಂದು ಪ್ರವಾದಿಯವರು ಎಂದೂ ಆದೇಶಿಸಿರಲಿಲ್ಲ. ಅರಬಿ ಯಲ್ಲದ ಬೇರೆ ಭಾಷೆಯಲ್ಲಿ ಮಾಡಬಾರದೆಂದೂ ಹೇಳಿರಲಿಲ್ಲ. ಮರೆತು ಹೋದ ಕಾರಣ ಹೇಳದಿದ್ದುದಲ್ಲ. ಒಂದು ಸಭೆಯಲ್ಲಿ ಅಲ್ಲಿಯ ಸಭಿಕರು ಅರ್ಥ ಮಾಡಿಕೊಳ್ಳುವ ಭಾಷೆಯಲ್ಲಿ ಪ್ರವಚನ ನೀಡಬೇಕು ಎಂಬುದು ಪ್ರವಾದಿಗಳು ಬಂದು ಕಲಿಸಬೇಕಾದ ವಿಷಯವಾಗಿರದ ಕಾರಣ ಮತ್ತು ಅದನ್ನು ಹಾಗೆ ಕಲಿಸದಿದ್ದರೂ ಸಾಮಾನ್ಯ ವ್ಯಕ್ತಿಗಳಿಗೆ ಅದನ್ನು ಅರ್ಥ ಮಾಡಿ ಕೊಳ್ಳಲು ಸಾಧ್ಯವಿದೆ ಎಂಬ ಕಾರಣದಿಂದ ಅದನ್ನು ಪ್ರತ್ಯೇಕವಾಗಿ ಹೇಳಲಿಲ್ಲ.

ಆದರೂ ಪ್ರವಾದಿಯವರ(ಸ) ಭಾಷೆಯಲ್ಲಿಯೇ ಖುತ್ಬಾ ನಡೆಸುವುದು ಉತ್ಕೃಷ್ಟವಾಗಿದೆ ಎಂದು ಒಬ್ಬ ಅರಬೇತರ ವ್ಯಕ್ತಿ ಭಾವಿಸುವುದಾದರೆ ಅದನ್ನು ಆಕ್ಷೇಪಿಸಬೇಕಾಗಿಲ್ಲ. ಅವರಿಗೆ ಹಾಗೆ ಮಾಡಲು ಸೂಕ್ತ ಆಧಾರವಿದೆ. ಸಭಿಕರಿಗೆ ಅರ್ಥವಾಗುವ ರೀತಿಯಲ್ಲಿ ಅವರ ಮಾತೃಭಾಷೆಯಲ್ಲಿ ಮಿಂಬರ್‌ನ ಮೇಲೇರಿ ನಾಲ್ಕು ಮಾತುಗಳನ್ನು ಆಡಲು ಸಾಧ್ಯವಿಲ್ಲದವರು ಅರಬಿ ಪ್ರವಚನ ಪುಸ್ತಕವನ್ನು ಓದಲಿ. ಯಾವುದೋ ಕಾಲದಲ್ಲಿ ಯಾರೋ ಬರೆದ ಪ್ರಾಸಬದ್ಧವಾದ ಕಠಿಣ ಭಾಷೆಯ ಸಾಹಿತ್ಯವಿರುವ ಪುಸ್ತಕವನ್ನು ನೋಡಿ ಪ್ರವಾದಿಯವರು ಇದನ್ನೇ ಓದುತ್ತಿದ್ದರೇ ಎಂದು ಪ್ರಶ್ನಿಸಿ ಅವರನ್ನು ಬೇಸರಕ್ಕೆ ಒಳಪಡಿಸದಿರಿ. ಅಂತಹ ವ್ಯಕ್ತಿ ಯಾವ ಭಾಷೆಯಲ್ಲಿ ಪ್ರವಚನ ನೀಡಿದರೂ ಒಂದೇ ಅಲ್ಲವೇ?

ಆದರೆ ಖುತ್ಬಾ ಅರಬಿ ಭಾಷೆಯಲ್ಲಿ ಮಾಡಿದರೆ ಮಾತ್ರ ಸಿಂಧುವಾಗುತ್ತದೆ ಎಂದು ಹಠ ಹಿಡಿಯುವಂತಿಲ್ಲ, ಖುತ್ಬಾ ಎಂದರೆ ಪ್ರವಚನವಾಗಿದೆ. ಇದನ್ನು ದಿಕ್ರ್ ಎಂದು ಪರಿಗಣಿಸಿದರೂ ಇಮಾಮರು ಮಿಂಬರಿನ ಮೇಲೆ ಹತ್ತಿ ಸಭಿಕರನ್ನು ಉದ್ದೇಶಿಸಿ ಧ್ವನಿವರ್ಧಕದಲ್ಲಿ ಜೋರಾಗಿ ಹೇಳುವ ದಿಕ್ರ್ ಕೇವಲ ಸ್ಮರಣೆಯಲ್ಲ, ಅದೊಂದು ಉಪದೇಶವಾಗಿರುತ್ತದೆ. ಪವಿತ್ರ ಕುರ್‌ಆನ್ ಅರಬಿ ಭಾಷೆಯಲ್ಲಿರುವುದು ಅದು ಅರಬಿ ಭಾಷೆಯ ಪ್ರವಾದಿಗೆ, ಅರಬರ ಮಧ್ಯೆ ಅವತೀರ್ಣಗೊಂಡ ಕಾರಣದಿಂದಾಗಿರುತ್ತದೆ. (ಹಾಗಲ್ಲದೆ ಅರಬಿ ಭಾಷೆಯಲ್ಲಿಯೇ ಕುರ್‌ಆನಿನ ದಿಕ್ರ್ ಆಗಬೇಕು ಎಂಬ ಹಠದಿಂದಲ್ಲ) ಇದನ್ನು ಪವಿತ್ರ ಕುರ್‌ಆನಿನ ಫುಸ್ಸಿಲತ್ ಸೂರಃದ 44ನೇ ವಚನದಲ್ಲಿ ಪ್ರಸ್ತಾಪಿಸಲಾಗಿದೆ. ಅಲ್ಲಾಹನ ಪ್ರವಾದಿಗಳೆಂದರೆ ನಮ್ಮ ಖತೀಬರುಗಳಿಗಿಂತ ಎಷ್ಟೋ ಪಾಲು ಉನ್ನತರಲ್ಲವೇ? ಅವರ ಕುರಿತು ಅಲ್ಲಾಹನು ಹೇಳಿರುವನು. ''ನಾವು ನಮ್ಮ ಸಂದೇಶವನ್ನು ಸಾರಲಿಕ್ಕಾಗಿ ರವಾನಿಸಿದ ಪ್ರವಾದಿಗಳ ಪೈಕಿ ಪ್ರತಿಯೊಬ್ಬರೂ ತನ್ನ ಜನಾಂಗದವರಿಗೆ ಚೆನ್ನಾಗಿ ವಿವರಿಸಿ ಕೊಡಲಿಕ್ಕಾಗಿ ಅವರ ಭಾಷೆ ಯಲ್ಲಿಯೇ ಸಂದೇಶ ಕೊಟ್ಟಿರುತ್ತಾನೆ. (ಇಬ್ರಾಹೀಮ್:4) ಪ್ರವಾದಿಗಳನ್ನು ನಿಯೋಗಿಸುವಾಗ ಅಲ್ಲಾಹನು ಆ ಪ್ರದೇಶದ ಜನರ ಭಾಷೆಯನ್ನು ಗಂಭೀರವಾಗಿ ಪರಿಗಣಿಸಿರುವುದಾಗಿಯೂ ಆ ಪರಿಗಣಿಸುವಿಕೆ ಸಂದೇಶ ಪ್ರಚಾರಕ್ಕೆ ಅಗತ್ಯವಾದ ಯುಕ್ತಿ (ಹಿಕ್ಮತ್) ಮತ್ತು ಒಳಿತನ್ನು (ಮಸ್ಲಿಹತ್) ಒಳಗೊಂಡಿತ್ತೆಂದೂ ಈ ಕುರ್‌ಆನ್ ವಚನವು ಸ್ಪಷ್ಟಪಡಿಸುತ್ತದೆ. ಆ ಪ್ರವಾದಿಗಳ ಅನುಯಾಯಿಗಳೆನಿಸಿಕೊಂಡಿರುವ ಪುರೋಹಿತರು ಹೇಳುತ್ತಾರೆ- ''ಅವರೊಂದಿಗೆ ಆದೇಶಿಸಿರುವ ಶುಕ್ರವಾರದ ಪ್ರವಚನಗಳಲ್ಲಿ ಈ ಉದ್ದೇಶ, ಯುಕ್ತಿ ಮತ್ತು ಒಳಿತುಗಳನ್ನು ಅಳವಡಿಸಿಕೊಂಡರೆ ಆ ಖುತ್ಬಾವೇ ಅಸಿಂಧುವೆನಿಸುತ್ತದೆ.'' ಅಲ್ಲಾಹ್ ಮತ್ತು ಅವನ ಪ್ರವಾದಿಯವರನ್ನು ಮರೆತು ಆವಿಷ್ಕರಿಸಲ್ಪಟ್ಟಿರುವ ಈ ರೀತಿಯ ನಿಯಮಗಳು ಕಿತ್ತೆಸೆಯಬೇಕಾದ ಬಿದ್‌ಅತ್‌ಗಳ ಸಾಲಿಗೆ ಸೇರಿದೆ.

ಈ ಹದೀಸ್ ವಚನ ಇಸ್ಲಾಮಿನ ಬಹಳ ಪ್ರಮುಖವಾದ ಮೂಲ ನಿಯಮಗಳ ಪೈಕಿ ಒಂದಾಗಿದೆ. ಈ ನಿಯಮವನ್ನು ಅದು ಬಯಸುವ ಗೌರವದೊಂದಿಗೆ ಅರ್ಥೈಸಿಕೊಳ್ಳದವರಿಗೆ ಸುನ್ನತ್ ಮತ್ತು ಬಿದ್‌ಅತ್‌ಗಳನ್ನು ಬೇರ್ಪಡಿಸಿ ತಿಳಿಯುವುದು ಕಷ್ಟಸಾಧ್ಯವಾಗಿದೆ. ಈ ಕಾರಣದಿಂದಾಗಿ ಅವರು ತಮ್ಮ ಪುರೋಹಿತರಿಂದ ದಾರಿಗೆಡಿಸಲ್ಪಡುತ್ತಿದ್ದಾರೆ ಮತ್ತು ಶೋಷಣೆಗೆ ಒಳಗಾಗುತ್ತಿದ್ದಾರೆ. ''ಕರ್ಮಗಳು ಉದ್ದೇಶವನ್ನು ಅವಲಂಬಿಸಿರುತ್ತದೆ'' ಎಂಬ ಪ್ರವಾದಿವಚನವು ಎಲ್ಲಾ ಕರ್ಮಗಳ ಆಂತರಿಕ ಮಾನದಂಡವಾಗಿದ್ದರೆ, ಈ ಪ್ರವಾದಿ ವಚನವು ಕರ್ಮಗಳ ಬಾಹ್ಯ ಮಾನದಂಡವಾಗಿದೆ.''



# 10. ತಕ್ವಾ ಮತ್ತು ಸ್ವಭಾವ

عَنْ معادبن جبل رَضِيَ اللهُ عَنْهُ عن رَسُولِ اللَّهِ ﷺ قال اتَّقِ اللهَ حَيْثُ مَا كُنْتَ وَأَتْبِعِ السَّيِّئَةَ الْحَسَنَةَ تَمْحُهَا وَخَالِقِ النَّاسَ بِخُلُقٍ حَسَنٍ . (ترمذي)

ಹ.ಮುಆದ್ ಬಿನ್ ಜಬಲ್(ರ) ವರದಿ ಮಾಡಿರುತ್ತಾರೆ. ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳಿರುವರು: ''ನೀವೆಲ್ಲಿದ್ದರೂ ಅಲ್ಲಾಹನನ್ನು ಭಯಪಡಿರಿ. ಕೆಡುಕಿನ ಬಳಿಕ ಒಳಿತನ್ನು ಮಾಡಿ ಆ ಮೂಲಕ ಕೆಡುಕನ್ನು ಅಳಿಸಿರಿ. ಜನರೊಂದಿಗೆ ಸೌಜನ್ಯದಿಂದ ವರ್ತಿಸಿರಿ.''

(ತಿರ್ಮಿದಿ)

''ನೀವೆಲ್ಲಿದ್ದರೂ ಅಲ್ಲಾಹನನ್ನು ಭಯಪಡಿರಿ'' ಎಂಬುದು ಪ್ರವಾದಿ ವಚನದ ಪ್ರಥಮ ಭಾಗವಾಗಿದೆ. ತಕ್ವಾ ಎಂಬುದು ಇಸ್ಲಾಮ್ ಧರ್ಮದ ಬಹಳ ಮುಖ್ಯವಾದ ಪಾರಿಭಾಷಿಕ ಪದವಾಗಿದೆ. ಜಾಗರೂಕತೆ ವಹಿಸುವುದು, ಭಯಪಡುವುದು, ಭಕ್ತಿಯನ್ನು ಪಾಲಿಸುವುದು ಎಂಬಿತ್ಯಾದಿ ಅರ್ಥಗಳು ಈ ಪದಕ್ಕಿವೆ. ತಕ್ವಾ ಎಂಬುದು ಪಾರಿಭಾಷಿಕವಾಗಿ ಈ ಎಲ್ಲಾ ಭಾಷಾರ್ಥಗಳನ್ನು ಒಳಗೊಂಡಿದೆ. ಅಲ್ಲಾಹನು ವಿಧಿಸಿರುವುದನ್ನು ಪಾಲಿಸುವುದು ಮತ್ತು ನಿಷೇಧಿಸಿದವುಗಳಿಂದ ದೂರ ನಿಲ್ಲುವುದು ಎಂಬುದಾಗಿ ವಿದ್ವಾಂಸರು ಇದಕ್ಕೆ ವಿವರಣೆಯನ್ನು ನೀಡಿದ್ದಾರೆ. ಸಹಾಬಿಯಾಗಿದ್ದ ಇಬ್ನ್ ಮಸ್‌ವೂದ್(ರ) 'ತಕ್‌ವಲ್ಲಾಹಿ'ಯನ್ನು ವಿವರಿಸಿರುವುದು ಹೀಗೆ. ಅವನು ಅನುಸರಿಸಲ್ಪಡಬೇಕು, ಧಿಕ್ಕರಿಸಲ್ಪಡಬಾರದು. ಅವನು ಸ್ಮರಿಸಲ್ಪಡಬೇಕು, ಅವನನ್ನು ಮರೆತು ಬಿಡಬಾರದು, ಕೃತಜ್ಞತೆ ತೋರಬೇಕು, ಕೃತಘ್ನತೆ ತೋರಬಾರದು, ''ಇತ್ತಕಿಲ್ಲಾಹ್'' ಎಂಬುದರ ಭಾಷಾರ್ಥ 'ಅಲ್ಲಾಹನ ವಿಷಯದಲ್ಲಿ ಜಾಗೃತನಾಗಿರುವುದು. ಅಲ್ಲಾಹನನ್ನು ಭಯಪಡುವುದು' ಎಂದೂ ಆಗುತ್ತದೆ.

ಇಸ್ಲಾಮಿನ ಆಡಳಿತವು ಜನರಿಗೆ ನೀಡಬೇಕಾದ ಬಹಳ ಪ್ರಮುಖವಾದ ಉಪದೇಶವು 'ಇತ್ತಕಿಲ್ಲಾಹ್' ಆಗಿದೆ. ಆದುದರಿಂದಲೇ ಶುಕ್ರವಾರದ ದಿನ ಜುಮಾ ಖುತ್ಬಾಗಳಲ್ಲಿ 'ಊಸೀಕುಂ ವನಫ್‌ಸೀಬಿತಕ್‌ವಲ್ಲಾಹ್' ಅರ್ಥಾತ್ ಅಲ್ಲಾಹನನ್ನು ಭಯಪಡಬೇಕೆಂದು ನಾನು ನನ್ನೊಂದಿಗೂ ನಿಮ್ಮೊಂದಿಗೂ ಉಪದೇಶಿಸುತ್ತಿದ್ದೇನೆ.'' ಎಂದು ಕಡ್ಡಾಯವಾಗಿ ಹೇಳಲಾಗುತ್ತದೆ. ಏಕೆಂದರೆ ಅಲ್ಲಾಹನ ಭಯಭಕ್ತಿ ಇಸ್ಲಾಮಿನ ಮೂಲಾಧಾರವಾಗಿದೆ. ದೇವಭಯವುಳ್ಳ

ವ್ಯಕ್ತಿ ಮನುಷ್ಯರೊಂದಿಗಿನ ಕರ್ತವ್ಯಗಳನ್ನು ಪೂರ್ತೀಕರಿಸುತ್ತಾನೆ. ಅವನ ಕೆಲಸಗಳು ಸರಿಯಾಗಿರುತ್ತವೆ. ಸ್ವಭಾವವು ಚೆನ್ನಾಗಿರುತ್ತದೆ. ತಕ್ವಾ ಎಂಬುದು ಮಸೀದಿಗೆ ಹೋಗುವಾಗ, ನಮಾಝ್ ನಿರ್ವಹಿಸುತ್ತಿರುವಾಗ ಮಾತ್ರ ಇರಬೇಕಾದ ಗುಣವಲ್ಲ, ನೀವು ಎಲ್ಲಿ ಇದ್ದರೂ ಕೆಲಸ ಮಾಡುತ್ತಿದ್ದರೂ, ವ್ಯಾಪಾರ ನಡೆಸುತ್ತಿದ್ದರೂ, ಮನೋರಂಜನೆಯಲ್ಲಿ ನಿರತರಾಗಿರುವಾಗಲೂ, ದುಃಖತಪ್ತರಾಗಿರುವಾಗಲೂ, ಸಂತೋಷದಿಂದಿರುವಾಗಲೂ, ಮನೆಯಲ್ಲಿದ್ದರೂ, ಊರಿನಲ್ಲಿದ್ದರೂ, ಪರದೇಶದಲ್ಲಿದ್ದರೂ, ಎಲ್ಲಾಸಂದರ್ಭಗಳಲ್ಲೂ ದೇವನ ನೆನಪು ಮನಸ್ಸಿನಲ್ಲಿರಬೇಕು. ಆ ನೆನಪು ಕೇವಲ ನಿಷ್ಕ್ರಿಯವಾದ ಒಂದು ಸಂಕಲ್ಪದ ರೂಪದಲ್ಲಿದ್ದರೆ ಸಾಲದು. ನಿಮ್ಮೆಲ್ಲ ಕೆಲಸ ಕಾರ್ಯಗಳನ್ನು ಉತ್ತಮ ರೀತಿಯಲ್ಲಿ ಪರಿವರ್ತಿಸಲು ಸಾಧ್ಯವಾಗುವ ಸಕ್ರಿಯವಾದ ಶಕ್ತಿ ಅದಕ್ಕಿರಬೇಕು. ಅಲ್ಲಾಹನ ಆದೇಶಗಳನ್ನು ಆಚರಣೆಗೆ ತರಲು ಮತ್ತು ನಿಷೇಧಿಸಿದವುಗಳಿಂದ ದೂರ ಉಳಿಯಲು ಪ್ರೇರಕವಾಗುವ ಶಕ್ತಿ ಎಂದು ತಕ್ವಲ್ಲಾಹಿಯನ್ನು ವಿವರಿಸುವುದು ಅದೇ ಕಾರಣದಿಂದಾಗಿರುತ್ತದೆ.

ಮನುಷ್ಯನಿಂದ ಸಹಜವಾಗಿ ತಪ್ಪುಗಳು ಸಂಭವಿಸುತ್ತವೆ. ದೇವಭಯವುಳ್ಳ ಜನರೂ ಇದರಿಂದ ಮುಕ್ತರಲ್ಲ, ನಾನು ಮಾಡುತ್ತಿರುವ ಕೆಲಸ ತಪ್ಪು ಎಂದು ಗೊತ್ತಾದ ಕೂಡಲೇ ಅದನ್ನು ನಿಲ್ಲಿಸಿಬಿಡಬೇಕು. ಪಶ್ಚಾತ್ತಾಪ ಪಡಬೇಕು. ನಿಲ್ಲಿಸಲು ಅಸಾಧ್ಯವಾದರೆ ಪಶ್ಚಾತ್ತಾಪ ಪಡುವುದರ ಜೊತೆಗೆ ಒಳಿತುಗಳನ್ನು ಮಾಡಬೇಕು. ಆ ಒಳಿತುಗಳು ಕೆಡುಕುಗಳನ್ನು ಅಳಿಸಿ ಹಾಕುತ್ತದೆ. ಕುರ್‌ಆನ್ ಹೇಳುತ್ತದೆ. 'ಪುಣ್ಯ ಕಾರ್ಯಗಳು ಪಾಪಕಾರ್ಯಗಳನ್ನು ದೂರೀಕರಿಸುತ್ತದೆ. ಇದು ಅಲ್ಲಾಹನನ್ನು ಸ್ಮರಿಸುವವರಿಗೊಂದು ಸ್ಮರಣೆಯಾಗಿರುತ್ತದೆ.'

(ಪವಿತ್ರ ಕುರ್‌ಆನ್, ಹೂದ್:114)

ಹದೀಸಿನಲ್ಲಿ ಹೇಳಲಾದ ಕೆಡುಕುಗಳನ್ನು ಅಳಿಸಿ ಹಾಕುವ ಹಸನಾತ್ (ಒಳಿತು) ಎಂಬುದರ ಉದ್ದೇಶ ತೌಬಾ (ಪಶ್ಚಾತ್ತಾಪ) ಆಗಿದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಹಸನಾತ್ ಎಂದರೆ ತೌಬಾವು ಒಳಗೊಂಡ ಸತ್ಕರ್ಮಗಳು ಎಂಬುದು ಹೆಚ್ಚು ಸರಿಯಾದ ಅಭಿಪ್ರಾಯವಾಗಿದೆ. ಸೂರಃ ಅಲ್‌ಫುರ್ಕಾನ್‌ನ 70ನೇ ವಚನವು ಈ ಅಭಿಪ್ರಾಯವನ್ನು ಹೆಚ್ಚು ಬಲ ಪಡಿಸುತ್ತದೆ.

ಪಶ್ಚಾತ್ತಾಪ ಪಟ್ಟು ಸತ್ಯವಿಶ್ವಾಸವನ್ನು ಸತ್ಕರ್ಮಗಳನ್ನು ಮಾಡಲಾರಂಭಿಸಿದವರ ಹೊರತು. ಇಂತಹವರ ಕೆಡುಕುಗಳನ್ನು ಅಲ್ಲಾಹನು ಒಳಿತುಗಳಾಗಿ ಪರಿವರ್ತಿಸುವನು.

(ಪವಿತ್ರ ಕುರ್‌ಆನ್, 25:70)

'ಜನರೊಂದಿಗೆ ಸೌಜನ್ಯದಿಂದ ವರ್ತಿಸುವುದು' ಎಂಬುದು ಕೂಡಾ ತಪ್ಪು ಕೆಲಸಗಳನ್ನು ಮಾಡಿದ ಕೂಡಲೇ ಪಶ್ಚಾತ್ತಾಪ ಪಡುವುದು, ಸತ್ಕರ್ಮಗಳನ್ನು ಮಾಡಲಾರಂಭಿಸುವುದು ಎಂಬಂತೆಯೇ ತಕ್ವಾದ ವಿವರಣೆಯಾಗಿದೆ ಮತ್ತು ದೇವಭಯವುಳ್ಳವನ ಲಕ್ಷಣವಾಗಿದೆ. ತಕ್ವಾ ಎಂದರೆ ನಮಾಝ್‌ನಲ್ಲಿ, ದಿಕ್ರ್‌ಗಳಲ್ಲಿ, ದೇವಸ್ತುತಿಯಲ್ಲಿ ನಿರತರಾಗಿರುವುದು ಮಾತ್ರವಲ್ಲ

ಎಂಬುದನ್ನು ನೆನಪಿಸುವುದಕ್ಕಾಗಿ ಇದನ್ನು ಪ್ರತ್ಯೇಕವಾಗಿ ಪ್ರಸ್ತಾಪಿಸಲಾಗಿದೆ. ಏಕಕಾಲದಲ್ಲಿ ಅಲ್ಲಾಹನೊಂದಿಗೆ ಪಾಲಿಸಬೇಕಾದ ನೀತಿ ಮತ್ತು ಅಲ್ಲಾಹನ ದಾಸರೊಂದಿಗೆ ಪಾಲಿಸಬೇಕಾದ ನೀತಿಯನ್ನು ಪಾಲಿಸುವುದನ್ನು ತಕ್ವಾ ಎನ್ನಲಾಗುತ್ತದೆ. ಅಲ್ಲಾಹನ ದಾಸರನ್ನು ದ್ವೇಷಿಸುವುದು ಎಂದರೆ ಅಲ್ಲಾಹನನ್ನು ದ್ವೇಷಿಸಿದಂತೆ. ಅಲ್ಲಾಹನನ್ನು ಪ್ರೀತಿಸುವವರು ಜನರನ್ನೂ ಪ್ರೀತಿಸಬೇಕು. ದೇವನ ದಾಸರನ್ನು ವಂಚಿಸುವವರಿಗೆ ದೇವನನ್ನು ಪ್ರೀತಿಸಲು ಎಂದಿಗೂ ಸಾಧ್ಯವಿಲ್ಲ. ಇಮಾಮ್ ಅಹ್ಮದ್ ಉದ್ಧರಿಸಿರುವ ಪ್ರವಾದಿ ವಚನವೊಂದು ಅದನ್ನು ಈ ರೀತಿ ಹೇಳುತ್ತದೆ. ''ಸದ್ಗುಣಗಳಲ್ಲಿ ಅತ್ಯಂತ ಶ್ರೇಷ್ಠವಾದುದು ನಿಮ್ಮೊಂದಿಗೆ ಜಗಳವಾಡಿದವರೊಂದಿಗೆ ನೀವು ಸಂಬಂಧ ಸ್ಥಾಪಿಸುವುದು. ನಿಮಗೆ ತಡೆದವರಿಗೆ ನೀವು ನೀಡುವುದು. ನಿಮ್ಮನ್ನು ಹಿಂಸಿಸಿದವರೊಂದಿಗೆ ನೀವು ಸೌಮ್ಯವಾಗಿ ವರ್ತಿಸುವುದು ಎಂದಾಗಿದೆ''

ತಿರ್ಮಿದಿಯಲ್ಲಿ ವರದಿಯಾಗಿರುವ ಪ್ರವಾದಿ ವಚನದಲ್ಲಿ ಹೀಗಿದೆ. ''ದೇವದಾಸರ ಒಳಿತು ಕೆಡುಕುಗಳನ್ನು ತೂಗುವ ತಟ್ಟೆಯಲ್ಲಿ ಸಚ್ಚಾರಿತ್ರ್ಯದಷ್ಟು ತೂಕವುಳ್ಳ ಬೇರೆ ಯಾವ ಒಳಿತೂ ಇರುವುದಿಲ್ಲ. ಸಚ್ಚಾರಿತ್ರ್ಯವಂತ ವ್ಯಕ್ತಿಗೆ ನಮಾಝ್ ನಿರ್ವಹಿಸುವ, ಉಪವಾಸ ಆಚರಿಸುವ ವ್ಯಕ್ತಿಗೆ ಸಿಗುವ ಪ್ರತಿಫಲವೇ ಸಿಗುವುದು.'' ಅಬೂ ದಾವೂದ್ ವರದಿ ಮಾಡಿರುವ ಒಂದು ಪ್ರವಾದಿ ವಚನದಲ್ಲಿ ''ಸ್ವಭಾವವನ್ನು ಉತ್ತಮ ಪಡಿಸಿದವನಿಗೆ ನಾನು ಸ್ವರ್ಗದಲ್ಲಿ ಒಂದು ಭವನ ಸಿಗುವ ಭರವಸೆ ನೀಡುತ್ತೇನೆ'' ಎಂದು ಪ್ರವಾದಿಯವರು(ಸ) ಹೇಳಿರುವರು.



# 11. ಪ್ರವಾದಿ ಪ್ರೇಮದ ವಾಸ್ತವಿಕತೆ

عَنْ أبي مِرْدَاسِ الاَسْلَمِي رَضِيَ اللهُ عَنْهُ قال كُنَّا عِنْدَ النَّبِيِّ ﷺ فَدَعَا بِطَهُورٍ فَغَمَسَ يَدَهُ فَتَوَضَّأَ فَتَتَبَّعْنَاهُ اي مَاءَ الْوُضُوءِ فَحَسَوْنَاهُ فَقَالَ النَّبِيُّ ﷺ مَاحَمَلَكُمْ عَلَى مَافَعَلْتُمْ بِهِ؟ قُلْنَا حُبُّ رَسُولِ اللهِ ﷺ فَقَالَ إِنْ اَحْبَبْتُمْ أن يُحِبَّكُمْ اللهُ وَرَسُولُهُ فَأَدُّوا إِذَائْتُمِنْتُمْ وَاصْدُقُوا إِذَا حَدَّثْتُمْ وَأَحْسِنُوا جِوارَ مَنْ جَاوَرَكُمْ (طبراني)

ಅಬೂ ಮಿರ್ದಾಸ್ ಅಲ್ ಅಸ್ಲಮಿಯವರು ಹೇಳುತ್ತಾರೆ: ಒಂದು ದಿನ ನಾವು ಪ್ರವಾದಿ ಮುಹಮ್ಮದ್‌ರ(ಸ) ಬಳಿ ಇದ್ದಾಗ ಅವರು ಸ್ವಲ್ಪ ಶುದ್ಧ ನೀರನ್ನು ತರಿಸಿದರು. ಆದರಲ್ಲಿ ಕೈ ಹಾಕಿ ವುಝೂ ಮಾಡಿದರು. ಬಳಿಕ ಆ ವುಝೂವಿನ ನೀರನ್ನು ನಾವು ಸ್ವಲ್ಪ ಸ್ವಲ್ಪ ಕುಡಿದೆವು. ಇದನ್ನು ನೋಡಿ ಪ್ರವಾದಿ ಮುಹಮ್ಮದ್‌ರು(ಸ) ''ನಿಮ್ಮನ್ನು ಈ ರೀತಿ ಮಾಡುವಂತೆ ಪ್ರೇರೇಪಿಸಿದ ವಿಷಯವೇನು?'' ಎಂದು ಪ್ರಶ್ನಿಸಿದರು. ''ಅಲ್ಲಾಹನ ಪ್ರವಾದಿಯವರೊಂದಿಗಿನ ಪ್ರೀತಿ'' ಎಂದು ನಾವು ಉತ್ತರಿಸಿದೆವು. ಆಗ ಅವರು ''ಅಲ್ಲಾಹನನ್ನು ಮತ್ತವನ ಪ್ರವಾದಿಯನ್ನು ಪ್ರೀತಿಸಬೇಕೆಂದು ನೀವು ಬಯಸುವುದಾದರೆ ನಿಮಗೆ ನೀಡಲಾಗಿರುವ ಹೊಣೆಗಾರಿಕೆಗಳನ್ನು ಸರಿಯಾಗಿ ನಿರ್ವಹಿಸಬೇಕು. ಮಾತನಾಡುವಾಗ ಸತ್ಯವನ್ನೇ ಹೇಳಬೇಕು. ನೆರೆಕರೆಯವರೊಂದಿಗೆ ಉತ್ತಮ ರೀತಿಯಲ್ಲಿ ವ್ಯವಹರಿಸಬೇಕು ಎಂದು ಹೇಳಿದರು.'' (ತಬ್ರಾನಿ)

عَنْ أَنَسٍ قَالَ قَالَ رَسُولُ اللهِ ﷺ لَا يُؤْمِنُ أَحَدُكُمْ حَتَّى أَكُونَ أَحَبَّ إِلَيْهِ مِنْ وَالِدِهِ وَوَلَدِهِ وَالنَّاسِ أَجْمَعِينَ. (مشكوة كتاب الايمان)

ಹ. ಅನಸ್(ರ) ವರದಿ ಮಾಡಿರುತ್ತಾರೆ: ಪ್ರವಾದಿ(ಸ) ಹೇಳಿದರು– ನಿಮ್ಮ ಪೈಕಿ ಅವನ ತಂದೆ–ತಾಯಿಗಳು, ಅವನ ಸಂತಾನ ಮತ್ತು ಎಲ್ಲ ಮನುಷ್ಯರಿಗಿಂತಲೂ ನಾನು ಅವನಿಗೆ ಪ್ರಿಯವಾಗುವ ತನಕ ಯಾರೂ ಸತ್ಯವಿಶ್ವಾಸಿಯಾಗಲಾರ. (ಮಿಷ್ಕಾತ್)

عَنْ أَنَسٍ قَالَ قَالَ لِي رَسُولُ اللَّهِ ﷺ يَا بُنَيَّ إِنْ قَدَرْتَ أَنْ تُصْبِحَ وَتُمْسِيَ
وَلَيْسَ فِي قَلْبِكَ غِشٌّ لِأَحَدٍ فَافْعَلْ ثُمَّ قَالَ يَا بُنَيَّ وَذَلِكَ مِنْ سُنَّتِي
وَمَنْ أَحَبَّ سُنَّتِي فَقَدْ أَحَبَّنِي وَمَنْ أَحَبَّنِي كَانَ مَعِي فِي الْجَنَّةِ. (ترمذي)

ಹ.ಅನಸ್(ರ) ವರದಿ ಮಾಡುತ್ತಾರೆ: ಪ್ರವಾದಿ(ಸ) ನಮ್ಮೊಂದಿಗೆ ಹೀಗೆಂದರು- ನನ್ನ ಪ್ರಿಯ ಪುತ್ರಾ! ನಿನಗೆ ನಿನ್ನ ಮನಸ್ಸಿನಲ್ಲಿ ಯಾರ ವಿರುದ್ಧವೂ ಅಹಿತ ಭಾವನೆಯಿಲ್ಲದಂತಹ ಅವಸ್ಥೆಯಲ್ಲಿ ಜೀವನ ಸಾಗಿಸಲು ಸಾಧ್ಯವಾದರೆ ಹಾಗೆಯೇ ಜೀವಿಸು. ಅನಂತರ ಹೇಳಿದರು- ಪ್ರಿಯ ಪುತ್ರಾ, ನನ್ನ ಕ್ರಮವೂ ಇದುವೇ ಆಗಿದೆ. ನನ್ನ ಮನಸ್ಸಿನಲ್ಲಿ ಯಾರ ವಿರುದ್ಧವೂ ಯಾವುದೇ ಮಾಲಿನ್ಯವಿಲ್ಲ. ಯಾರು ನನ್ನ ಚರ್ಯೆ(ಕ್ರಮ)ಯನ್ನು ಪ್ರೀತಿಸಿದನೋ ಅವನು ನನ್ನನ್ನು ಪ್ರೀತಿಸಿದನು. ಯಾರು ನನ್ನನ್ನು ಪ್ರೀತಿಸಿದನೋ ಅವನು ನನ್ನೊಂದಿಗೆ ಸ್ವರ್ಗದಲ್ಲಿರುವನು.
(ತಿರ್ಮಿದಿ)

عن عبد الله بن عَمْرو قال قال رسول الله ﷺ لاَ يُؤْمِنُ أَحَدُكُمْ حَتَّى
يَكُونَ هَوَاهُ تَبَعًا لِمَا جِئْتُ بِهِ. (مشكوة: شرح السنة)

ಅಬ್ದುಲ್ಲಾ ಬಿನ್ ಅಮ್ರ್(ರ) ವರದಿ ಮಾಡಿರುತ್ತಾರೆ. ಪ್ರವಾದಿ(ಸ) ಹೇಳಿದರು- ಒಬ್ಬ ವ್ಯಕ್ತಿಯ ಇಚ್ಛೆ ಮತ್ತು ಅವನ ಮಾನಸಿಕ ಒಲವುಗಳು ಎಷ್ಟರ ವರೆಗೆ ನಾನು ತಂದಿರುವ ಧರ್ಮ ಶಾಸ್ತ್ರಕ್ಕೆ ಅನುಗುಣವಾಗಿರುವುದಿಲ್ಲವೋ ಅಷ್ಟರ ವರೆಗೆ ಅವನು ವಿಶ್ವಾಸಿಯಾಗಲಾರ. (ಮಿಷ್ಕಾತ್)

ಪ್ರವಾದಿ ಪ್ರೇಮದ ವಾಸ್ತವಿಕತೆಯೇನೆಂದರೆ ಪ್ರವಾದಿಯವರ ಮೂಲಕ ಅವತೀರ್ಣವಾದ ಆದರ್ಶಮಯ ಗುಣ ಸ್ವಭಾವಗಳ ಬಗ್ಗೆ ಇರುವ ಪ್ರೀತಿ ಮತ್ತು ವಿಶ್ವಾಸವಾಗಿದೆ. ವ್ಯಕ್ತಿಪೂಜೆಯಲ್ಲ.

ಅಂತಿಮ ಪ್ರವಾದಿಯ ಆಗಮನಕ್ಕಿಂತ ಮೊದಲು ಮನುಷ್ಯರು ಅಂಧಕಾರದಲ್ಲಿದ್ದರು. ಪ್ರವಾದಿಯವರು ಮನುಷ್ಯರನ್ನು ಅಂಧಕಾರದಿಂದ ಬೆಳಕಿನೆಡೆಗೆ ಕರೆತಂದರು. ಶೈತಾನನ ದುಷ್ಪ್ರೇರಣೆಯಿಂದ ನರಕದೆಡೆಗೆ ಅಟ್ಟಿಸಲ್ಪಡುತ್ತಿದ್ದ ಮನುಷ್ಯರನ್ನು ಪ್ರವಾದಿಯವರು ವಿಮೋಚಿಸಿ ಸ್ವರ್ಗದ ಮಾರ್ಗದಲ್ಲಿ ಮುನ್ನಡೆಸಿದರು. ಅವರ ಆಗಮನವಾಗದಿರುತ್ತಿದ್ದರೆ ಮನುಷ್ಯರೆಲ್ಲವೂ ಕಾರ್ಗತ್ತಲಲ್ಲಿ ಸಾಗಿ ನರಕದಲ್ಲಿ ಬಿದ್ದುಬಿಡುತ್ತಿದ್ದರು. ಇದು ಪ್ರವಾದಿಯವರ ವಿಶೇಷತೆಯಾಗಿದೆ. ಮನುಷ್ಯರನ್ನು ಕಾರ್ಗತ್ತಲಿನಿಂದ, ನರಕದಿಂದ ರಕ್ಷಿಸಿದ ಪ್ರವಾದಿಯವರು(ಸ) ನಿಶ್ಚಯವಾಗಿಯೂ ಬೇರೆಲ್ಲ ಮನುಷ್ಯರಿಗಿಂತ ಹೆಚ್ಚು ಪ್ರೀತಿಸಲ್ಪಡಲು ಅರ್ಹರಾಗಿರುತ್ತಾರೆ. ಆ ಪ್ರೀತಿ, ಪ್ರೇಮ, ಗೌರವ ಪ್ರವಾದಿಯವರ ರೂಪದೊಂದಿಗಲ್ಲ; ಅವರ ಚರ್ಯೆಯೊಂದಿಗಾಗಿದೆ.

ಆದುದರಿಂದಲೇ ವ್ಯಕ್ತಿ ತನ್ನ ಪ್ರೀತಿ ಪಾತ್ರ ವ್ಯಕ್ತಿಗೆ ತೋರಿಸುವ ಪ್ರೀತಿಯ ಅಭಿವ್ಯಕ್ತಿಯ ರೂಪಗಳಿಗೆ ಪ್ರವಾದಿ ಪ್ರೇಮದಲ್ಲಿ ಹೆಚ್ಚಿನ ಮಹತ್ವವಿಲ್ಲ. ನಮಗೆ ಪ್ರೀತಿ ಪಾತ್ರರಾದ ವ್ಯಕ್ತಿಯ ಗುಣ ಸ್ವಭಾವಗಳನ್ನು ನಾವು ಅಳವಡಿಸಿಕೊಂಡಾಗ ಆ ಪ್ರೀತಿಯು ಸಾರ್ಥಕವೆನಿಸುತ್ತದೆ. ಪ್ರವಾದಿಯವರೊಂದಿಗೆ ನನಗೆ ಬಹಳ ಪ್ರೀತಿಯಿದೆ ಎಂದು ಹೇಳುತ್ತಿರುವುದು, ಪ್ರವಾದಿಯವರ(ಸ) ಕುರಿತು ಇರುವ, ಇಲ್ಲದಿರುವ ಸ್ತುತಿ ವಚನಗಳನ್ನು ಹೇಳುತ್ತಾ, ಅವರ ಹೆಸರಿನಲ್ಲಿ ಸಭೆಗಳನ್ನು ಏರ್ಪಡಿಸುತ್ತಾ ಹೊಟ್ಟೆ ತುಂಬಾ ತಿನ್ನುವುದು ಪ್ರವಾದಿ ಪ್ರೇಮವಲ್ಲ. ಪ್ರವಾದಿಯವರು ಕಲಿಸಿರುವ ಜೀವನ ವಿಧಾನವನ್ನು, ಗುರಿಯನ್ನು, ಸ್ವಭಾವ ಚರ್ಯೆಗಳನ್ನು ಪ್ರೀತಿಸುವುದು ಮತ್ತು ಕೃತಜ್ಞತಾ ಭಾವದೊಂದಿಗೆ ಜೀವನದಲ್ಲಿ ಅದನ್ನು ಅಳವಡಿಸುವುದು ಪ್ರವಾದಿ ಪ್ರೇಮವಾಗಿದೆ.

ಪ್ರವಾದಿಯವರ(ಸ) ಶಿಕ್ಷಣ, ಆದರ್ಶಗಳಲ್ಲಿ ಅಭಿರುಚಿ ಇಲ್ಲದವರು, ಅದನ್ನು ಪಾಲಿಸಲು ತಯಾರಿಲ್ಲದವರು, ಪ್ರವಾದಿ ಪ್ರೇಮದ ಕುರಿತು ಹೇಳುತ್ತಲಿದ್ದರೆ ಅದರಿಂದೇನೂ ಪ್ರಯೋಜನವಿಲ್ಲ. ಪ್ರವಾದಿಯವರ ಹೆಸರಿನಲ್ಲಿ ಮೌಲೂದ್ ಪಠಿಸಿದರೆ, ಸಭೆಗಳನ್ನು ಏರ್ಪಡಿಸಿದರೆ ಅಲ್ಲಾಹ್ ಮತ್ತು ಅವನ ಪ್ರವಾದಿಯವರನ್ನು ಪ್ರೀತಿಸಿದಂತೆ ಆಗುವುದಿಲ್ಲ. ಪ್ರವಾದಿಯವರೊಂದಿಗಿನ ಪ್ರೇಮವು ನಿಜವಾಗಬೇಕಿದ್ದರೆ, ಅಲ್ಲಾಹನ ಮತ್ತು ಅವನ ರಸೂಲರ ಪ್ರೀತಿಯು ಸಿಗಬೇಕೆಂದಿದ್ದರೆ, ಪ್ರವಾದಿಯವರು ಯಾವ ಉದ್ದೇಶಕ್ಕಾಗಿ ಆಗತರಾಗಿದ್ದರೋ ಆ ಉದ್ದೇಶವನ್ನು ಜೀವನದಲ್ಲಿ ಅಳವಡಿಸಿ ತೋರಿಸಬೇಕು.

ಹದೀಸಿನ ಕೊನೆಯ ಭಾಗದಲ್ಲಿ ಪ್ರವಾದಿಯವರ ಆಗಮನದ ಉದ್ದೇಶವನ್ನು ಮೂರು ಭಾಗಗಳಲ್ಲಿ ಪ್ರಸ್ತುತ ಪಡಿಸಲಾಗಿದೆ. ಒಂದನೆಯದಾಗಿ ಮನುಷ್ಯನು ತನಗೆ ನೀಡಲಾಗಿರುವ ಹೊಣೆಗಾರಿಕೆಗಳನ್ನು ನಿರ್ವಹಿಸಬೇಕು. ದೇವನ ದಾಸ, ದೇಶದ ಪ್ರಜೆ, ಕುಟುಂಬದ ಒಂದು ಭಾಗ ಎಂಬಿತ್ಯಾದಿ ಎಲ್ಲ ಅವಸ್ಥೆಯಲ್ಲೂ ಮನುಷ್ಯನಿಗೆ ಅನೇಕ ಹೊಣೆಗಾರಿಕೆಗಳಿರುತ್ತವೆ. ಇದು ಮಾತ್ರವಲ್ಲದೆ ಅನೇಕ ಸಂದರ್ಭಗಳಲ್ಲಿ ಸಹಜೀವಿಗಳು ಅವನ ಮೇಲೆ ಅನೇಕ ಬೇರೆ ಜವಾಬ್ದಾರಿಗಳನ್ನು ಹೊರಿಸಬಹುದು. ಇವೆಲ್ಲವುಗಳನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸುತ್ತಿರಬೇಕು. ಮನುಷ್ಯನ ಇಹ ಮತ್ತು ಪರಲೋಕದ ವಿಜಯಕ್ಕೆ ಇದು ಅನಿವಾರ್ಯವಾಗಿದೆ.

ಎರಡನೆಯದಾಗಿ ಮಾತನಾಡುವಾಗ ಸತ್ಯವನ್ನೇ ಹೇಳಬೇಕು. ಇದರ ಮಹತ್ವದ ಕುರಿತು ಹೆಚ್ಚಿಗೆ ಏನೂ ಹೇಳಬೇಕಾಗಿಲ್ಲವಷ್ಟೇ? ಸತ್ಯವು ಬೆಳಕಾಗಿದೆ. ಸತ್ಯದಿಂದ ಮನುಷ್ಯನಿಗೆ ಜ್ಞಾನ ಮತ್ತು ಉತ್ತಮ ಸಂಸ್ಕಾರ ಸಿಗುತ್ತದೆ. ಸುಳ್ಳು ಅವನನ್ನು ಅಜ್ಞಾನದೆಡೆಗೂ ಅಧಃಪತನದೆಡೆಗೂ ಕೊಂಡೊಯ್ಯುತ್ತದೆ.

ಮೂರನೆಯದಾಗಿ ನೆರೆಕರೆಯವರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕು. ಇದು ಮನುಷ್ಯರ ಐಕ್ಯ, ಸಹಕಾರ, ಪ್ರೀತಿ ಇವೆಲ್ಲವುಗಳ ಮೂಲಾಧಾರವಾಗಿದೆ. ನೆರೆಕರೆಯವರೆಂದರೆ ನಮ್ಮ ಮನೆಯ ಸಮೀಪ ಇರುವವರು ಮಾತ್ರವಲ್ಲ, ದೈನಂದಿನ ಜೀವನದಲ್ಲಿ ನಮ್ಮೊಂದಿಗೆ

ವ್ಯವಹರಿಸುವ ಎಲ್ಲರೊಂದಿಗೂ ಉತ್ತಮ ರೀತಿಯಲ್ಲಿ ವರ್ತಿಸಬೇಕು. ಅದು ಮನುಷ್ಯರ ಮಧ್ಯೆ, ವಿವಿಧ ಜನಾಂಗಗಳ ಮಧ್ಯೆ, ದೇಶಗಳ ಮಧ್ಯೆ, ಸ್ನೇಹ ಸಂಬಂಧವನ್ನುಂಟು ಮಾಡಿ ಜಗತ್ತನ್ನು ಐಕ್ಯತೆಯೆಡೆಗೆ ಕೊಂಡೊಯ್ಯುತ್ತದೆ.

ಈ ಉದ್ದೇಶಕ್ಕಾಗಿಯೇ ಪ್ರವಾದಿಯವರ ಆಗಮನವಾಗಿದೆ. ಈ ಉದ್ದೇಶಗಳ ಪ್ರಾಯೋಗಿಕ ರೂಪವನ್ನು ಅವರು ತಮ್ಮ ಜೀವನದಲ್ಲಿ ಅಳವಡಿಸಿ ತೋರಿಸಿಕೊಟ್ಟಿದ್ದಾರೆ. ನೀವು ನಿಮ್ಮ ಸ್ವಂತ ಮಕ್ಕಳಿಗಿಂತ, ಹೆತ್ತವರಿಗಿಂತ, ಸಂಪತ್ತಿಗಿಂತ ಪ್ರವಾದಿಯವರನ್ನು ಪ್ರೀತಿಸಬೇಕು ಎಂದು ಹೇಳಿರುವುದರ ಉದ್ದೇಶವೇನೆಂದರೆ, ನೀವು ಇವೆಲ್ಲವುಗಳಿಗಿಂತ ಹೆಚ್ಚಿನ ಮಹತ್ವವನ್ನು ಪ್ರವಾದಿಯವರು(ಸ) ತಂದಿರುವ ಜೀವನದ ಉದ್ದೇಶ ಮತ್ತು ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದಕ್ಕೆ ನೀಡಬೇಕು. ಅಲ್ಲದೆ ಅಬ್ದುಲ್ಲಾರ ಪುತ್ರ ಮುಹಮ್ಮದ್‌ರನ್ನು ನೀವು ಪೂಜಿಸಬೇಕು ಅಥವಾ ಆರಾಧಿಸಬೇಕು ಎಂದಲ್ಲ, ಈ ರೀತಿಯ ಪ್ರವಾದಿ ಪ್ರೇಮದಿಂದ ನಿಮಗೆ ಅಲ್ಲಾಹ್ ಮತ್ತು ಅವನ ಪ್ರವಾದಿಯ ಪ್ರೀತಿ ಸಿಗಲು ಸಾಧ್ಯವಿಲ್ಲ. ಪ್ರವಾದಿಯವರು ಕಲಿಸಿರುವ ಜೀವನ ಕ್ರಮವನ್ನು, ಧಾರ್ಮಿಕ ಸದಾಚಾರ ನಿಯಮಗಳನ್ನು ಒಪ್ಪಿಕೊಂಡು ಅದನ್ನು ಅನುಸರಿಸಬೇಕು. ಇದು ನಿಜವಾದ ಪ್ರವಾದಿ ಪ್ರೇಮವಾಗಿದೆ. ಈ ರೀತಿಯ ಪ್ರವಾದಿ ಪ್ರೇಮಕ್ಕೆ ಪ್ರತಿಯಾಗಿ ಅಲ್ಲಾಹ್ ಮತ್ತು ಅವನ ಪ್ರವಾದಿಯ ಪ್ರೀತಿಯು ನಮಗೆ ಲಭ್ಯವಾಗುವುದು.

ಅಖಿಲ ಪ್ರಪಂಚಕ್ಕೆ ಅನುಗ್ರಹವಾಗಿ ಅಂತಿಮ ಪ್ರವಾದಿ ಮುಹಮ್ಮದ್(ಸ)ರ ಆಗಮನವಾಗಿದೆ. ಆದುದರಿಂದಲೇ ಸಕಲ ಜಗತ್ತಿನ ಪ್ರೇಮ ಮತ್ತು ಗೌರವಕ್ಕೆ ಅವರು ಅರ್ಹರಾಗಿದ್ದಾರೆ. ಆದುದರಿಂದ ಮುಹಮ್ಮದ್‌ರನ್ನು(ಸ) ಅರ್ಥ ಮಾಡಿಕೊಳ್ಳದವರಿಗೆ, ಅವರ ಮೇಲೆ ವಿಶ್ವಾಸವಿಡದವರಿಗೆ ಅವರನ್ನು ಪ್ರೀತಿಸಲು ಸಾಧ್ಯವಿಲ್ಲ. ಪ್ರವಾದಿಯವರನ್ನು ಪ್ರೀತಿಸದವರಿಗೆ ಸತ್ಯವಿಶ್ವಾಸಿಯಾಗಲು ಸಾಧ್ಯವಿಲ್ಲ. ಪ್ರವಾದಿ ಪ್ರೇಮ ಮತ್ತು ಇಸ್ಲಾಮ್ ಧರ್ಮದ ವಿಶ್ವಾಸದ ಮಧ್ಯೆ ಅವಿನಾವಭಾವ ಸಂಬಂಧವಿದೆ. ಪ್ರವಾದಿ ಪ್ರೇಮಕ್ಕೆ ಇಷ್ಟು ಮಹತ್ವವೇಕೆ? ಈ ಪ್ರೇಮದ ಬೇಡಿಕೆಗಳೇನು? ಈ ಎಲ್ಲಾ ವಿಷಯಗಳನ್ನು ಈ ಮೇಲಿನ ಹದೀಸ್ ವಚನದಲ್ಲಿ ವಿವರಿಸಲಾಗಿದೆ.

ಒಬ್ಬ ಸತ್ಯವಿಶ್ವಾಸಿಗೆ ಈ ಜಗತ್ತಿನಲ್ಲಿ ಅತಿ ಹೆಚ್ಚು ಪ್ರೀತಿ ಪಾತ್ರ ವ್ಯಕ್ತಿ ಪ್ರವಾದಿ ಮುಹಮ್ಮದ್(ಸ) ಆಗಿರಬೇಕುಎಂದು ಎರಡನೆಯ ಹದೀಸಿನಲ್ಲಿ ಹೇಳಲಾಗಿದೆ. ವ್ಯಕ್ತಿಗೆ ಪ್ರವಾದಿ ಮುಹಮ್ಮದ್‌ರಿಗಿಂತ(ಸ) ತನ್ನ ಸಂತಾನ, ಹೆತ್ತವರು, ಪತಿ–ಪತ್ನಿಯರೊಂದಿಗೆ ಅಥವಾ ಇನ್ನಿತರರೊಂದಿಗೆ ಹೆಚ್ಚಿನ ಪ್ರೀತಿಯಿದ್ದರೆ ಆ ವ್ಯಕ್ತಿ ಇನ್ನೂ ಸರಿಯಾದ ಸತ್ಯವಿಶ್ವಾಸಿಯಾಗಿಲ್ಲ ಎಂದು ಅರ್ಥ.

ಆದರೆ ಪ್ರವಾದಿಯವರು ಈ ಜಗತ್ತಿಗೆ ವಿದಾಯ ಹೇಳಿ ಸಾವಿರಕ್ಕಿಂತಲೂ ಅಧಿಕ ವರ್ಷಗಳಾಗಿವೆ. ಇಂದು ಜಗತ್ತಿನ ಮುಸ್ಲಿಮರ ಪೈಕಿ ಹೆಚ್ಚಿನವರು ಪ್ರವಾದಿಯವರು ಜೀವಿಸಿದ್ದ ಜಗತ್ತಿನ ಆ ಭೂಭಾಗವನ್ನು ಕಣ್ಣಾರೆ ಕಂಡೂ ಇಲ್ಲ. ಶತಮಾನಗಳ ಹಿಂದೆ ಜಗತ್ತಿನ ಯಾವುದೋ ಭೂಭಾಗದಲ್ಲಿ ಜೀವಿಸಿ ಮರಣ ಹೊಂದಿದ ಒಬ್ಬ ವ್ಯಕ್ತಿಯನ್ನು ನಾವು ಕಣ್ಣಾರೆ ಕಾಣುತ್ತಿರುವ

ನಮ್ಮ ಮಕ್ಕಳಿಗಿಂತ, ಹೆತ್ತವರಿಗಿಂತ ಹೆಚ್ಚಾಗಿ ಪ್ರೀತಿಸಲು ಹೇಗೆ ಸಾಧ್ಯ? ಈ ಸಂಶಯಕ್ಕೆ ಮೂರು ಮತ್ತು ನಾಲ್ಕನೆಯ ಹದೀಸಿನಲ್ಲಿ ಉತ್ತರವು ಸಿಗುತ್ತದೆ.

ಸಣ್ಣ ವಯಸ್ಸಿನ ಬಾಲಕರಾಗಿದ್ದ ಹ.ಅನಸ್(ರ)ರೊಂದಿಗೆ ಪ್ರವಾದಿಯವರು(ಸ) ಈ ರೀತಿ ಉಪದೇಶಿಸುತ್ತಾರೆ: ಯಾರೊಂದಿಗೂ ಅಹಿತ ಭಾವನೆ ಇಲ್ಲದೆ ಜೀವನ ಕಳೆಯಲು ನಿನಗೆ ಸಾಧ್ಯವಾದರೆ, ಹಾಗೆಯೇ ಜೀವಿಸು. ಅಂದರೆ ಯಾರೊಂದಿಗೂ ಕೋಪಿಸಿಕೊಳ್ಳದೆ ಎಲ್ಲರೊಂದಿಗೂ ಪ್ರೀತಿ, ಸೌಹಾರ್ದದೊಂದಿಗೆ ವರ್ತಿಸಲು ಪ್ರಯತ್ನಿಸಬೇಕು. ಇಲ್ಲಿ ಸಾಧ್ಯವಾದರೆ ಎಂಬುದಕ್ಕೆ قدرت ಎಂಬ ಪದ ಪ್ರಯೋಗವಾಗಿದೆ. ಕೇವಲ ಸಾಧ್ಯವಾದರೆ ಎಂಬುದು ಮಾತ್ರ ಇದರರ್ಥವಲ್ಲ, ಇಚ್ಛಾಪೂರ್ವಕ ಪ್ರಯತ್ನಿಸಿ ಅದನ್ನು ಸಾಧಿಸಬೇಕು. ಇಲ್ಲಿ ಹೇಳಿರುವುದು ಯಾರನ್ನೂ ದ್ವೇಷಿಸಲು, ಕಾರಣವೇ ಇಲ್ಲದಿರುವಾಗ, ಎಲ್ಲರಿಂದಲೂ ಪ್ರೀತಿ ಸಹಕಾರ ಸಿಗುತ್ತಿರುವಾಗ ಕೋಪಿಸಿಕೊಳ್ಳದೆ ಇರುವುದು ಎಂದಲ್ಲ, ಬದಲಾಗಿ ಜನರನ್ನು ದ್ವೇಷಿಸಲು ಕಾರಣವಿದ್ದರೂ ಇಲ್ಲದಿದ್ದರೂ ಎಲ್ಲರೊಂದಿಗೂ ಪ್ರೀತಿ ಮಮತೆಯಿಂದ ವರ್ತಿಸಬೇಕು ಎಂಬುದನ್ನು ಒಂದು ಆದರ್ಶವಾಗಿ ಸ್ವೀಕರಿಸಿ ಪಾಲಿಸಬೇಕು ಎಂಬುದು ಇದರ ಉದ್ದೇಶವಾಗಿದೆ.

ಹೀಗೆ ಮಾಡುವುದು ನನ್ನ ಸುನ್ನತ್-ಚರ್ಯೆ ಆಗೆ ಎಂದ ಬಳಿಕ ಮುಂದುವರಿಯುತ್ತಾ ಈ ರೀತಿ ಹೇಳುತ್ತಾರೆ, ''ನನ್ನ ಚರ್ಯೆಯನ್ನು ಪ್ರೀತಿಸಿದವನು ನನ್ನನ್ನು ಪ್ರೀತಿಸಿದನು. ನನ್ನನ್ನು ಪ್ರೀತಿಸಿದವನು ನನ್ನ ಜೊತೆ ಸ್ವರ್ಗದಲ್ಲಿರುವನು.'' ಪ್ರವಾದಿಯವರನ್ನು ಪ್ರೀತಿಸುವುದು ಅಂದರೆ ಏನು ಮತ್ತು ಹೇಗೆ ಎಂಬುದನ್ನು ಈ ವಚನವು ಸ್ಪಷ್ಟಪಡಿಸುತ್ತದೆ.

ಅಮೂಲ್ಯ ವಸ್ತುಗಳೊಂದಿಗೆ, ಸಂಪತ್ತಿನೊಂದಿಗೆ, ಮಕ್ಕಳೊಂದಿಗೆ ಹೆತ್ತವರೊಂದಿಗೆ ನಮಗೆ ಇರುವ ಪ್ರೀತಿಯ ಸಾಲಿಗೆ ಪ್ರವಾದಿ ಪ್ರೇಮವು ಸೇರುವುದಿಲ್ಲ, ಪ್ರವಾದಿ ಪ್ರೇಮವು ಇವೆಲ್ಲವುಗಳಿಗಿಂತ ಭಿನ್ನವಾಗಿದೆ ಮತ್ತು ಜೀವನದಲ್ಲಿ ವಿಶೇಷ ಸ್ಥಾನವಿರುವಂತಹದ್ದಾಗಿದೆ. ಪ್ರವಾದಿ ಮುಹಮ್ಮದ್‌ರು(ಸ) ನಮಗಾಗಿ ಕಲಿಸಿರುವ ಮತ್ತು ಶಾಶ್ವತವಾಗಿ ಉಳಿಸಿರುವ ಜೀವನ ವಿಧಾನವೇ ಅವರ ಚರ್ಯೆಯಾಗಿದೆ. ಈ ಚರ್ಯೆಯ ಮೂಲಕ ನಾವು ಪ್ರವಾದಿಯನ್ನು ಕಾಣುತ್ತೇವೆ ಮತ್ತು ಅರಿಯುತ್ತೇವೆ. ಇಂದು ನಮ್ಮ ಮುಂದೆ ಇರುವುದು ಅಂತಿಮ ಪ್ರವಾದಿಯವರ ಚರ್ಯೆಯಾಗಿದೆ. ಅದು ಮರಣ ಹೊಂದಿಲ್ಲ ಮತ್ತು ಮರಣ ಹೊಂದುವುದೂ ಇಲ್ಲ,

ಆದುದರಿಂದ ಪ್ರವಾದಿಯವರನ್ನು ಪ್ರೀತಿಸುವುದೆಂದರೆ ಅವರ ಸುನ್ನತ್ತನ್ನು ಪ್ರೀತಿಸುವುದಾಗಿದೆ. ಸುನ್ನತನ್ನು ಪ್ರೀತಿಸುವುದೆಂದರೆ ಪ್ರವಾದಿ ವಚನಗಳನ್ನು ಬರೆದಿಟ್ಟ ಗ್ರಂಥಗಳನ್ನು ಸುಂದರವಾಗಿ ಹೊದಿಕೆ ಹಾಕಿ ಕಪಾಟಿನಲ್ಲಿಟ್ಟು ಸಂರಕ್ಷಿಸುವುದಲ್ಲ, ಅವುಗಳನ್ನು ಸುವರ್ಣಾಕ್ಷರಗಳಲ್ಲಿ ಬರೆದು ಭದ್ರವಾಗಿಟ್ಟುಕೊಳ್ಳುವುದೂ ಅಲ್ಲ, ಈ ಪ್ರವಾದಿ ವಚನಗಳಲ್ಲಿ ಅಡಕವಾಗಿರುವ ನಿರ್ದೇಶನಗಳನ್ನು ಜೀವನದಲ್ಲಿ ಪಾಲಿಸಬೇಕು. ಹೀಗೆ ಮಾಡುವವರೇ ನಿಜವಾಗಿ ಪ್ರವಾದಿಯನ್ನು ಪ್ರೀತಿಸುವವರು. ಅಂತಹವರು ನಾಳೆ ಪರಲೋಕದಲ್ಲಿ ಅನುಗ್ರಹೀತ ಸ್ವರ್ಗದಲ್ಲಿ ಪ್ರವಾದಿಯವರೊಂದಿಗೆ ಇರುವರು.

ಪ್ರವಾದಿಯವರ ಜೀವನವನ್ನು, ಉನ್ನತ ಚಾರಿತ್ರ್ಯವನ್ನು ಸ್ಮರಿಸುವುದು ವರ್ಣಿಸುವುದು ಸ್ವಾಗತಾರ್ಹವಾಗಿದೆ. ಆದರೆ ಈ ಸ್ಮರಣೆ ಮತ್ತು ವರ್ಣನೆಗಳಿಂದ ನಮ್ಮ ಜೀವನವನ್ನು ಪ್ರವಾದಿಯವರ(ಸ) ಆದರ್ಶದಂತೆ ಮುನ್ನಡೆಸಲು ಸಾಧ್ಯವಾಗಬೇಕು. ಮೌಲೂದ್, ಕವಿತೆ, ಭಾಷಣಗಳಲ್ಲಿ ಪ್ರವಾದಿ ಪ್ರೇಮ ಪ್ರಕಟವಾಗುವುದಲ್ಲ, ಬದಲಾಗಿ ನಮ್ಮ ದೈನಂದಿನ ಜೀವನದಲ್ಲಿ ಅದು ಪ್ರಕಟವಾಗಬೇಕು. ಪ್ರವಾದಿ ಚರ್ಯೆಯಿಂದ ಪ್ರೇರಿತರಾಗಿ ನಿಮ್ಮ ಜೀವನದಲ್ಲಿ ಇತರ ಮನುಷ್ಯರೊಂದಿಗೆ ಯಾವುದೇ ದ್ವೇಷವಿಲ್ಲದೆ ಎಲ್ಲರೊಂದಿಗೂ ಪ್ರೀತಿಪೂರ್ವಕ ವರ್ತಿಸುತ್ತೀರಿ ಎಂದಾದರೆ ಅದು ಪ್ರವಾದಿಯವರೊಂದಿಗಿನ ಪ್ರೇಮವಾಗಿದೆ. ಆದರೆ ಇತರರೊಂದಿಗೆ ಕೋಪ ಮತ್ತು ದ್ವೇಷ ಭಾವನೆಯನ್ನು ಇಟ್ಟುಕೊಂಡು ಹಗಲು ರಾತ್ರಿ ಪ್ರವಾದಿಯವರ ಮಹಾನತೆಯನ್ನು ಹಾಡಿ ಹೊಗಳಿದರೂ ಅದು ಪ್ರವಾದಿಯವರಿಗೆ ತೋರುವ ವಂಚನೆಯಾಗುತ್ತದೆ. ನಮ್ಮ ಮುಂದಿರುವ ಪ್ರವಾದಿವಚನದ ಒಂದು ಭಾಗ ಮನುಷ್ಯರೊಂದಿಗಿನ ಪ್ರೀತಿಯಾಗಿದೆ. ಪ್ರವಾದಿಯವರೊಂದಿಗೆ ಪ್ರೀತಿ ಇರುವುದಾದರೆ ಎಲ್ಲ ಮನುಷ್ಯರೊಂದಿಗೂ ಪ್ರೀತಿಯುಂಟಾಗುತ್ತದೆ. ಉಂಟಾಗಲೇಬೇಕು.

ಮನುಷ್ಯರೊಂದಿಗಿರುವ ಮಮತೆ ಮತ್ತು ಪ್ರೇಮವು ಒಂದು ಉದಾಹರಣೆ ಮಾತ್ರವಾಗಿದೆ. ಪ್ರವಾದಿ ಚರ್ಯೆಯು ಈ ರೀತಿಯ ಅನರ್ಘ್ಯ ರತ್ನಗಳ ಮಹಾ ಭಂಡಾರವಾಗಿದೆ. ನಿತ್ಯ ಜೀವನದಲ್ಲಿ ಈ ಪೈಕಿ ಪ್ರತಿಯೊಂದನ್ನೂ ಅಳವಡಿಸುತ್ತಾ ಹೋದರೆ ಸತ್ಯವಿಶ್ವಾಸಿಯ ಪ್ರವಾದಿ ಪ್ರೇಮವು ಪರಿಪೂರ್ಣವಾಗುತ್ತದೆ.

ಪ್ರವಾದಿ ಚರ್ಯೆಯ ಪ್ರತಿಯೊಂದು ಮಾದರಿಯನ್ನು ನಾವು ನಮ್ಮ ಜೀವನದಲ್ಲಿ ಉತ್ಸಾಹ ಮತ್ತು ಸ್ಫೂರ್ತಿಯೊಂದಿಗೆ ಪಾಲಿಸಬೇಕು. ಒತ್ತಾಯದೊಂದಿಗೆ, ಒಲ್ಲದ ಮನಸ್ಸಿನೊಂದಿಗೆ ಅಲ್ಲ. ಪ್ರವಾದಿಯವರ ಆದರ್ಶ ಏನಾಗಿತ್ತೋ ಅದುವೇ ನಮ್ಮ ಇಚ್ಛೆ ಮತ್ತು ಅಭಿಲಾಶೆಯಾಗಬೇಕು. ನಮ್ಮ ಮನಸ್ಸು ಅಷ್ಟರ ಮಟ್ಟಿಗೆ ಅದರೊಂದಿಗೆ ಸಂಬಂಧವನ್ನು ಹೊಂದಿರಬೇಕು. ಪ್ರವಾದಿಯವರು ತೋರಿಸಿಕೊಟ್ಟ ಶರೀಅತ್‌ನೊಂದಿಗೆ ಮನಃಪೂರ್ವಕ ಪ್ರೀತಿ ಮತ್ತು ನಿಷ್ಠೆಯುಂಟಾಗುವವರೆಗೆ ನಮ್ಮ ಈಮಾನ್ ಪರಿಪೂರ್ಣವಾಗುವುದಿಲ್ಲ. ಪ್ರವಾದಿ ಚರ್ಯೆ ಎಂದು ಸರಿಯಾಗಿ ಮನದಟ್ಟಾಗಿರುವ ಯಾವುದಾದರೂ ಕೆಲಸದ ಬಗ್ಗೆ ಮನಸ್ಸಿನಲ್ಲಿ ಅಸಮಾಧಾನವಿರುವುದಾದರೆ ಅದು ಹೃದಯದಲ್ಲಿ ಕಾಪಟ್ಯ ಅಥವಾ ಅವಿಶ್ವಾಸ ಅಡಕವಾಗಿದೆ ಎಂಬುದರ ಲಕ್ಷಣವಾಗಿದೆ. ಈ ವಾಸ್ತವಿಕತೆಯೆಡೆಗೆ ಈ ಹದೀಸ್ ವಚನವು ಗಮನ ಸೆಳೆಯುತ್ತದೆ.



# 12. ಅಲ್ಲಾಹನ ಔಲಿಯಾಗಳು

عَنْ أَبِي هُرَيْرَةَ رَضِيَ اللهُ عَنْهُ قَالَ قَالَ رَسُولُ اللَّهِ ﷺ إِنَّ اللَّهَ تَبَارَكَ وَتَعَالَى قَالَ مَنْ عَادَى لِي وَلِيًّا فَقَدْ آذَنْتُهُ بِالْحَرْبِ وَمَا تَقَرَّبَ إِلَيَّ عَبْدِي بِشَيْءٍ أَحَبَّ إِلَيَّ مِمَّا افْتَرَضْتُهُ عَلَيْهِ. وَمَا يَزَالُ عَبْدِي يَتَقَرَّبُ إِلَيَّ بِالنَّوَافِلِ حَتَّى أُحِبَّهُ فَإِذَا أَحْبَبْتُهُ كُنْتُ سَمْعَهُ الَّذِي يَسْمَعُ بِهِ وَبَصَرَهُ الَّذِي يُبْصِرُ بِهِ وَيَدَهُ الَّتِي يَبْطِشُ بِهَا وَرِجْلَهُ الَّتِي يَمْشِي بِهَا وَإِنْ سَأَلَنِي لَأُعْطِيَنَّهُ وَلَئِنِ اسْتَعَاذَنِي لَأُعِيذَنَّهُ (بخاری)

ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳಿರುವುದಾಗಿ ಹ.ಅಬೂ ಹುರೈರ(ರ) ವರದಿ ಮಾಡಿರುವರು: 'ಪರಿಶುದ್ಧನೂ, ಅತ್ಯುನ್ನತನೂ ಆದ ಅಲ್ಲಾಹನು ಈ ರೀತಿ ಹೇಳಿರುವನು. ಯಾರಾದರೂ ನನ್ನ ಮಿತ್ರನೊಂದಿಗೆ ಅತಿಕ್ರಮ ತೋರಿಸಿದರೆ ನಾನು ಅವನೊಂದಿಗೆ ಯುದ್ಧ ಘೋಷಣೆ ಮಾಡುತ್ತೇನೆ. ನನ್ನ ದಾಸನು ನಾನು ಕಡ್ಡಾಯಗೊಳಿಸಿರುವ ಕರ್ತವ್ಯಗಳನ್ನು ನಿರ್ವಹಿಸುವುದರ ಹೊರತು ನನಗಿಷ್ಟವಾದ ಬೇರೊಂದು ಮಾರ್ಗದ ಮೂಲಕ ನನ್ನನ್ನು ಸಮೀಪಿಸಲಾರನು.

ನನ್ನ ದಾಸನು ಐಚ್ಛಿಕ ಸತ್ಕರ್ಮಗಳ ಮೂಲಕ ನನ್ನನ್ನು ಮತ್ತಷ್ಟು ಸಮೀಪಿಸುತ್ತಿರುವನೂ ನಾನು ಅವನನ್ನು ಪ್ರೀತಿಸುವವರೆಗೆ. ನಾನು ಅವನನ್ನು ಪ್ರೀತಿಸಲಾರಂಭಿಸಿದರೆ. ಅವನು ಕೇಳುವ ಕಿವಿಗಳು, ನೋಡುವ ಕಣ್ಣುಗಳು, ಅವನು ಬಲ ಪ್ರಯೋಗಿಸುವ ಅವನ ಕೈಗಳು ಅವನು ನಡೆಯುವ ಅವನ ಕಾಲುಗಳು ನಾನಾಗಿರುವೆನು. ಅವನು ನನ್ನೊಂದಿಗೆ ಬೇಡಿದರೆ ನಾನವನಿಗೆ ನಿಶ್ಚಯವಾಗಿಯೂ ನೀಡುವೆನು. ಅವನು ನನ್ನೊಂದಿಗೆ ಅಭಯ ಯಾಚಿಸಿದರೆ ನಾನು ಅವನಿಗೆ ನಿಶ್ಚಯವಾಗಿಯೂ ಅಭಯವನ್ನು ನೀಡುವೆನು.' (ಬುಖಾರಿ)

ಬಹಳ ಪ್ರಸಿದ್ಧವಾದ, ಮುಖ್ಯವಾದ ಅದೇ ವೇಳೆ ಅತಿ ಹೆಚ್ಚು ತಪ್ಪಾಗಿ ವ್ಯಾಖ್ಯಾನಿಸಲ್ಪಡುವ ಪ್ರವಾದಿ ವಚನವಿದು. ಅಲ್ಲಾಹನು ನನ್ನೊಂದಿಗೆ ಈ ರೀತಿ ಹೇಳಿರುವುದಾಗಿ ಪ್ರಸ್ತಾಪಿಸುತ್ತಾ ಪ್ರವಾದಿ ಮುಹಮ್ಮದ್‌ರು(ಸ) ಈ ವಚನವನ್ನು ತಮ್ಮ ಅನುಯಾಯಿಗಳ ಮುಂದೆ ವಿವರಿಸಿರುವರು. ಈ ರೀತಿಯ ಮುನ್ನುಡಿಯೊಂದಿಗೆ ಅವತೀರ್ಣವಾದ ಪ್ರವಾದಿ ವಚನಗಳು ಹದೀಸ್‌ಗಳ ಪೈಕಿ ಬಹಳ ಮಹತ್ವವುಳ್ಳದ್ದಾಗಿದೆ. 'ಕುದ್ಸಿಯಾದ' ಹದೀಸ್‌ಗಳು ಎಂದು ಇದನ್ನು ಕರೆಯಲಾಗುತ್ತದೆ.

ಮೂಲ ಹದೀಸ್‌ನಲ್ಲಿರುವ 'ಆದಾಲೀ' ಎಂಬ ಪದಕ್ಕೆ ನನ್ನೊಂದಿಗೆ ವಿದ್ವೇಷ ತೋರಿಸಿದ, ನನ್ನನ್ನು ಆಕ್ರಮಿಸಿದ, ನನ್ನೊಂದಿಗೆ ಶತ್ರುತ್ವ ತೋರಿದ ಎಂಬಿತ್ಯಾದಿ ಅರ್ಥಗಳಿವೆ. ಮಿತ್ರ(ವಲಿ)ನೊಂದಿಗೆ ಅತಿಕ್ರಮ ತೋರಿಸುವುದು ಎಂಬುದರ ಅರ್ಥ, ನನ್ನ ಮಿತ್ರನೊಂದಿಗೆ ದ್ವೇಷ ಸಾಧಿಸಿದರೆ ಅಥವಾ ಆಕ್ರಮ ಮಾಡಿದರೆ, ದ್ರೋಹ ಬಗೆದು ನನ್ನೊಂದಿಗೆ ಶತ್ರುತ್ವ ತೋರಿಸಿದರೆ ಎಂದಾಗಿದೆ. ಅಲ್ಲಾಹನ ಮಿತ್ರನೊಂದಿಗಿನ ದ್ವೇಷವು ಅಲ್ಲಾಹನೊಂದಿಗೆ ತೋರುವ ದ್ವೇಷವಾಗಿದೆ. ಅವರೊಂದಿಗೆ ಮಾಡುವ ಆಕ್ರಮ, ದ್ರೋಹ ಅಲ್ಲಾಹನೊಂದಿಗೆ ಮಾಡುವ ದ್ರೋಹ ಮತ್ತು ದ್ವೇಷವಾಗಿದೆ ಎಂಬುದು ಇದರ ತಾತ್ಪರ್ಯವಾಗಿದೆ.

ಹದೀಸಿನಲ್ಲಿರುವ 'ವಲಿ' ಎಂಬ ಪದವು ಮಿತ್ರ, ಸಹಾಯ ಮಾಡುವವನು, ರಕ್ಷಕ, ಒಡೆಯ ಎಂಬಿತ್ಯಾದಿ ಅರ್ಥಗಳಲ್ಲೆಲ್ಲಾ ಉಪಯೋಗಿಸಲ್ಪಡುತ್ತದೆ. 'ವಲಿ' ಎಂಬ ಪದದ ಬಹುವಚನ ರೂಪ 'ಔಲಿಯಾ' ಆಗಿದೆ. 'ವಲಿ' ಎಂಬ ಪದದ ಮೂಲ ಪದ 'ವಲಾಅ್' ಎಂದಾಗಿದೆ. ಸಾಮೀಪ್ಯ, ಮೈತ್ರಿ, ಸಂರಕ್ಷಣೆ ಎಂಬಿತ್ಯಾದಿ ಅರ್ಥಗಳೂ ಇದಕ್ಕಿವೆ. ಮಿತ್ರತ್ವ ಸಂಪಾದಿಸುವುದಕ್ಕೆ 'ಮುವಾಲಾತ್' ಎಂದು ಹೇಳಲಾಗುತ್ತದೆ. ಹೆಣ್ಣು ಮಕ್ಕಳನ್ನು ವಿವಾಹ ಮಾಡಿಕೊಡುವ ರಕ್ಷಕ ಅವಳ ವಲೀ ಆಗುತ್ತಾನೆ. ವ್ಯಕ್ತಿಯ ಅತ್ಯಂತ ಪ್ರೀತಿ ಪಾತ್ರರನ್ನು ಅವರ ವಲೀ ಎಂದು ಹೇಳಲಾಗುತ್ತದೆ. ಈ ಅರ್ಥಗಳಲ್ಲೆಲ್ಲಾ ಪವಿತ್ರ ಕುರ್‌ಆನಿನಲ್ಲಿ ಈ ಪದವು ಪ್ರಯೋಗಿಸಲ್ಪಟ್ಟದ್ದನ್ನು ನಾವು ನೋಡಬಹುದಾಗಿದೆ. ಉದಾಹರಣೆಗೆ ರಕ್ಷಕ, ಸರ್ವವನ್ನು ನೀಡುವವನು ಎಂಬ ಅರ್ಥದಲ್ಲಿ ಅಲ್ಲಾಹ ವಲಿಯ್ಯುಲ್ಲದೀನ ಆಮನೂ. (ಅಲ್ಲಾಹನು ವಿಶ್ವಾಸಿಗಳ ರಕ್ಷಕ ಮಿತ್ರನಾಗಿರುತ್ತಾನೆ. 2:257) ವಮನ್ ಕುತಿಲ ಮಝ್‌ಲೂಮನ್ ಫಕದ್ ಜಅಲ್‌ನಾ ಲಿವಲಿಯ್ಯಿಹೀ ಸುಲ್ತಾನನ್ (ಆಕ್ರಮವಾಗಿ ವಧಿಸಲ್ಪಟ್ಟವನ ವಾರೀಸುದಾರರಿಗೆ ಪ್ರತೀಕಾರ ಪಡೆಯುವ ಹಕ್ಕನ್ನು ನಾವು ನೀಡಿರುತ್ತೇವೆ. 17:33) ಔಲಾ ಯಸ್ತತೀವು ಅಂಯುಮಿಲ್ಲ ಹುವ ಫಲ್‌ಯುಮ್‌ಲಿಲ್ ವಲಿಯ್ಯುಹು. (ಅವನು ದುರ್ಬಲನಾಗಿದ್ದರೆ ಅಥವಾ ಒಕ್ಕಣೆ ಹೇಳಲಾರದವನಾಗಿದ್ದರೆ ಅವನ ರಕ್ಷಕನು ನ್ಯಾಯಪೂರ್ಣವಾಗಿ ಒಕ್ಕಣೆ ಬರೆಯಿಸಬೇಕು. 2:282) 'ಮಿತ್ರರು' ಎಂಬ ಅರ್ಥದಲ್ಲಿ ವಲ್ ಮುಅ್‌ಮಿನೂನ ವಲ್ ಮೂಮಿನಾತು ಬಅ್‌ಉಹುಮ್ ಔಲಿಯಾದು ಬಅ್‌ದ್ (ಸತ್ಯವಿಶ್ವಾಸಿ ಪುರುಷರು ಮತ್ತು ಸತ್ಯವಿಶ್ವಾಸಿ ಸ್ತ್ರೀಯರು ಇವರೆಲ್ಲ ಪರಸ್ಪರ ಆಪ್ತರು. 9:71) ಫಇದಲ್ಲದೀ ಬೈನಕ ವಬೈನಹು ಅದಾವತುನ್ ಕ ಅನ್ನಹು ವಲಿಯ್ಯುನ್ ಹಮೀಮ್. (ನಿಮ್ಮೊಂದಿಗೆ ಹಗೆತನ ಕಟ್ಟಿಕೊಂಡವನು ನಿಮ್ಮ ಆಪ್ತ ಮಿತ್ರನಾಗಿ ಬಿಡುವುದನ್ನು ನೀವು ಕಾಣುವಿರಿ. 41:34) ಪವಾಡ ಶಕ್ತಿ ಹೊಂದಿದವನು, ದೇವನ ಮತ್ತು ಮನುಷ್ಯರ ಮಧ್ಯೆ ಇರುವ ಮಧ್ಯವರ್ತಿ, ಸ್ವಾಮಿ ಮಹರ್ಷಿ ಮುಂತಾದ ಅರ್ಥಗಳು ಈ ಪದಕ್ಕಿಲ್ಲ. ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಈ ಅರ್ಥದಲ್ಲಿ ಈ ಪದವನ್ನು ಪ್ರಯೋಗಿಸಿಲ್ಲ. ಆದರೆ, ವಲೀ, ಔಲಿಯಾ ಎಂದು ಹೇಳಿದರೆ ಪವಾಡಸದೃಶ ಅದ್ಭುತ ಸಿದ್ಧಿಗಳನ್ನು ಹೊಂದಿದವರು, ಹಿಂದೂ ಧರ್ಮದ ಮಹರ್ಷಿಗಳಂತೆ ಶಪಿಸಲು, ವರ

ನೀಡಲು ಸಾಮರ್ಥ್ಯವಿರುವವರು ಎಂಬ ಭಾವನೆ ಅದು ಹೇಗೋ ನಮ್ಮ ಮಧ್ಯೆ ಪ್ರಚಾರ ಪಡೆದಿದೆ. ಇದನ್ನೇ ಬಳಸಿಕೊಂಡು ಕೆಲವು ಚಾಣಾಕ್ಷ ವ್ಯಕ್ತಿಗಳು ಸಿದ್ಧಿಗಳಂತೆ ವೇಷ ಕಟ್ಟಿಕೊಂಡು ಜನಸಾಮಾನ್ಯನನ್ನು ಶೋಷಿಸುತ್ತಿದ್ದಾರೆ. ನಿಜವಾದ ಔಲಿಯಾಗಳು ಈ ರೀತಿಯ ವ್ಯಾಪಾರಕ್ಕೆ ಖಂಡಿತ ಇಳಿಯಲಾರರು.

'ವಲೀ' ಎಂಬ ಪದದ ಅರ್ಥ ಸಂದರ್ಭಕ್ಕನುಸಾರ ಬದಲಾಗುತ್ತಿರುತ್ತದೆ. ತಂದೆಯು ಮಗನ 'ವಲಿ' ಎಂದು ಹೇಳುವಾಗ ಅದರ ಅರ್ಥ ರಕ್ಷಕ ಎಂದಾಗಿದೆ. ಪುತ್ರನು ತಂದೆಯ ವಲಿ ಎಂದಾಗ ಆಪ್ತ ಮತ್ತು ಉತ್ತರಾಧಿಕಾರಿ ಎಂಬ ಅರ್ಥವಿರುತ್ತದೆ. ಸತ್ಯವಿಶ್ವಾಸಿಗಳು ಪರಸ್ಪರ ಔಲಿಯಾಗಳು ಎಂದರೆ ಸತ್ಯವಿಶ್ವಾಸಿಗಳು ಪರಸ್ಪರ ಮಿತ್ರರು ಎಂದರ್ಥ. ಅಲ್ಲಾಹನು ಸತ್ಯವಿಶ್ವಾಸಿಗಳ ವಲಿ ಎಂದರೆ, ಅಲ್ಲಾಹನು ಅವರ ಸೃಷ್ಟಿಕರ್ತ, ಸಂರಕ್ಷಕ ಎಂದಾಗುತ್ತದೆ. ಸತ್ಯವಿಶ್ವಾಸಿಗಳು ಅಲ್ಲಾಹನ ಔಲಿಯಾಗಳು ಎಂದರೆ ಸತ್ಯವಿಶ್ವಾಸಿಗಳು ಅಲ್ಲಾಹನನ್ನು ಹೆಚ್ಚಾಗಿ ಪ್ರೀತಿಸುವವರು, ಅವನ ಸಾಮೀಪ್ಯಗಳಿಸುವವರು ಎಂದಾಗುತ್ತದೆ. ಸದಾ ಅಲ್ಲಾಹನನ್ನು ಭಯಭಕ್ತಿಯೊಂದಿಗೆ ಸ್ಮರಿಸುತ್ತಿರುವವರು, ಅವನ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿರುವವರು, ಅವನು ನಿಷಿದ್ಧಗೊಳಿಸಿದವುಗಳಿಂದ ದೂರ ಉಳಿಯುವವರು, ಅವನೊಂದಿಗೆ ಕೃತಜ್ಞತೆ ಮತ್ತು ವಿಧೇಯತೆಯಲ್ಲಿ ಸಂತೃಪ್ತಿಯುಳ್ಳವರು. ಅವನ ಪ್ರೀತಿಯಲ್ಲಿ ಸಂತೋಷವನ್ನು ಅನುಭವಿಸುವವರು ಔಲಿಯಾಗಳು. ಅವರು ಭೌತಿಕ ಸುಖಭೋಗಗಳಲ್ಲಿ ಆಸಕ್ತಿಯಿಲ್ಲದವರೂ, ಸಾತ್ವಿಕರೂ, ವಿನೀತರೂ ಆಗಿರುವರು. ಇಂತಹ ಗುಣ ಸ್ವಭಾವವುಳ್ಳ ವ್ಯಕ್ತಿಗಳು ಎಲ್ಲರ ಪ್ರೀತಿ ಗೌರವಕ್ಕೆ ಅರ್ಹರಾಗಿರುವರು. ವಾಸ್ತವದಲ್ಲಿ ಅವರದನ್ನು ಯಾರಿಂದಲೂ ನಿರೀಕ್ಷಿಸುವುದಿಲ್ಲ. ಅವರೊಂದಿಗೆ ತೋರಿಸುವ ಪ್ರೀತಿ ಗೌರವಾದರಗಳು ಅಲ್ಲಾಹನೊಂದಿಗಿನ ಭಯಭಕ್ತಿ ಮತ್ತು ಪ್ರೀತಿಯ ಅನಿವಾರ್ಯ ಬೇಡಿಕೆಯಾಗಿರುತ್ತದೆ. ಈ ರೀತಿಯ ಜನರೊಂದಿಗೆ ಯಾರಾದರೂ ದ್ವೇಷ ಮತ್ತು ಅತಿಕ್ರಮದಿಂದ ವರ್ತಿಸಿದರೆ ಅದನ್ನು ಅಲ್ಲಾಹನು ಅವನೊಂದಿಗಿನ ದ್ವೇಷ ಮತ್ತು ಅತಿಕ್ರಮವೆಂದು ಪರಿಗಣಿಸುವನು. ಆದುದರಿಂದ ಸಜ್ಜನರೊಂದಿಗೆ ದ್ವೇಷ ಸಾಧಿಸುವವರೊಂದಿಗೆ ಅಲ್ಲಾಹನು ಯುದ್ಧ ಘೋಷಣೆ ಮಾಡಿರುವನು. ಇನ್ನೊಂದು ಪ್ರವಾದಿ ವಚನದಲ್ಲಿ ಮುಹಮ್ಮದ್(ಸ) ಈ ರೀತಿ ಹೇಳಿರುವರು: ''ನನ್ನ ಸಂಗಾತಿಗಳ ವಿಷಯದಲ್ಲಿ ನೀವು ಅಲ್ಲಾಹನನ್ನು ಭಯಪಡಿರಿ. ನೀವು ಅವರಿಗೆ ದ್ರೋಹ ಬಗೆಯಬಾರದು. ಅವರಿಗೆ ದ್ರೋಹ ಬಗೆದರೆ ನನಗೆ ದ್ರೋಹ ಮಾಡಿದಂತೆ. ನನ್ನನ್ನು ದ್ರೋಹಿಸಿದವರು ಅಲ್ಲಾಹನನ್ನು ದ್ರೋಹಿಸಿದಂತೆ. ಅಲ್ಲಾಹನನ್ನು ದ್ರೋಹಿಸಿದವರನ್ನು ಅಲ್ಲಾಹನು ಶೀಘ್ರವಾಗಿ ಶಿಕ್ಷೆಗೊಳಪಡಿಸುವನು. ಅಲ್ಲಾಹನ ಧರ್ಮಕ್ಕಾಗಿ ಜೀವನವನ್ನೇ ಬಲಿ ನೀಡಿದ ಸಂಗಾತಿಗಳೆಲ್ಲ ಅಲ್ಲಾಹನ ಔಲಿಯಾಗಳಾಗಿದ್ದಾರೆ. ಅಂದರೆ ಮಿತ್ರರಾಗಿದ್ದಾರೆ ಎಂಬುದನ್ನು ಈ ಪ್ರವಾದಿವಚನ ಸ್ಪಷ್ಟಪಡಿಸುತ್ತದೆ. ಅವರ್ಯಾರೂ ಪವಾಡ ಪುರುಷ ವ್ಯಕ್ತಿಗಳೋ, ಅದ್ಭುತ ಸಿದ್ಧಿಗಳನ್ನು ಪಡೆದವರೋ ಸಂಪೂರ್ಣವಾಗಿ ಐಹಿಕ ಜೀವನವನ್ನು ಪರಿತ್ಯಾಗ ಮಾಡಿದವರೋ ಆಗಿರಲಿಲ್ಲ.

ಅಲ್ಲಾಹನ ಔಲಿಯಾಗಳ ಲಕ್ಷಣಗಳು ಹೇಗಿರುತ್ತವೆ ಎಂಬುದನ್ನು ಪ್ರಸ್ತುತ ಹದೀಸ್ ಮನವರಿಕೆ ಮಾಡಿಸುತ್ತದೆ. 'ವಲಾಅ್' ಎಂಬ ಪದದ ಅರ್ಥ- ತಕರ್ರುಬ್- ಅಂದರೆ ಸಾಮೀಪ್ಯ ಎಂದಾಗಿದೆಯಲ್ಲವೇ? ಅಲ್ಲಾಹನ ಸಾಮೀಪ್ಯಗಳಿಸಲಿಕ್ಕಿರುವ ಅತ್ಯುತ್ತಮ ಮತ್ತು ಸುಲಭದ ಮಾರ್ಗವೆಂದರೆ, ಅವನು ನೀಡಿರುವ ಹೊಣೆಗಾರಿಕೆಗಳನ್ನು ನಿರ್ವಹಿಸುವುದು ಅಥವಾ ಅವನು ಅವತೀರ್ಣಗೊಳಿಸಿದ ಶರೀಅತನ್ನು(ಧರ್ಮಶಾಸ್ತ್ರ ಸಂಪೂರ್ಣವಾಗಿ ಅನುಸರಿಸಿಕೊಂಡು ಜೀವಿಸುವುದು. ತನ್ನ ದಾಸರು ತನ್ನ ಸಾಮೀಪ್ಯವನ್ನು ಗಳಿಸಲಿಕ್ಕಾಗಿ ಅವನು ಇದನ್ನೇ ಇಷ್ಟ ಪಟ್ಟಿರುವುದು ಮತ್ತು ಆದೇಶಿಸಿರುತ್ತಾನೆ. ನಮಾಝ್, ಉಪವಾಸದಂತಹ ಕಡ್ಡಾಯ ಕರ್ಮಗಳನ್ನು ಶರೀತ್ತಿನ ಇತರ ವಿಧಿ ನಿಷೇಧಗಳನ್ನು ಉಲ್ಲಂಘಿಸಿ ತಾನು ವಲೀ ಆಗಿದ್ದೇನೆಂದು ಹೇಳಿಕೊಳ್ಳುವ, ಆ ರೀತಿ ಹೇಳಿಕೊಂಡು ತಿರುಗುವ ತಿಳಿಗೇಡಿಗಳಿದ್ದಾರೆ. ಅವರ ಮುಂಡಾಸು ಎಷ್ಟು ದೊಡ್ಡದಾಗಿದ್ದರೂ ಸರಿ, ಅವರ ಗಡ್ಡ ಎಷ್ಟು ಉದ್ದವಾಗಿದ್ದರೂ ಸರಿ. ಅವರು ತಿಳಿಗೇಡಿಗಳೇ ಆಗಿದ್ದಾರೆ.

ದೇವನ ದಾಸರ ವಲಿ ಎಂಬ ಅವಸ್ಥೆ ಮತ್ತಷ್ಟು ದೃಢವಾಗಲು, ಉನ್ನತವಾಗಲು ಏನು ಮಾಡಬೇಕು ಎಂಬುದನ್ನು, ಹಾಗೆ ಉನ್ನತರಾದ ಜನರ ವೈಶಿಷ್ಟ್ಯಗಳೇನೆಂದು ಮುಂದುವರಿಯುತ್ತಾ ವಿವರಿಸಲಾಗಿದೆ.

ಮೂಲದಲ್ಲಿರುವ 'ನವಾಫಿಲ್' ಎಂಬ ಪದವನ್ನು ಐಚ್ಛಿಕ ಸತ್ಕರ್ಮಗಳೆಂದು ಅನುವಾದಿಸಲಾಗಿದೆ. ಅನಿವಾರ್ಯತೆಗಿಂತ ಹೆಚ್ಚಿನದ್ದನ್ನು ಅರಬಿ ಭಾಷೆಯಲ್ಲಿ ನಫಿಲ್ ಎಂದು ಹೇಳಲಾಗುತ್ತದೆ. ನಫಿಲ್ ಎಂಬ ಪದದ ಬಹುವಚನ 'ನವಾಫಿಲ್' ಎಂದಾಗಿದೆ. ಅಲ್ಲಾಹನು ಹೊರಿಸಿರುವ ಎಲ್ಲ ಹೊಣೆಗಾರಿಕೆಗಳನ್ನು ಯಥಾ ಪ್ರಕಾರ ನೆರವೇರಿಸುವುದು. ನಿಷಿದ್ಧಗೊಳಿಸಿದ ಎಲ್ಲ ಕಾರ್ಯಗಳಿಂದ ದೂರ ನಿಲ್ಲುವುದು ಎಂಬುದು ಅಲ್ಲಾಹನ ವಲಿ ಅಥವಾ ಮಿತ್ರನಾಗುವುದರ ಪ್ರಥಮ ಬೇಡಿಕೆಯಾಗಿದೆ. ಈ ಬೇಡಿಕೆಯನ್ನು ಪೂರ್ಣಗೊಳಿಸಿದವರು ಅಲ್ಲಾಹನೊಂದಿಗೆ ಮಿತ್ರತ್ವ ಸಂಪಾದಿಸಲಿಕ್ಕಿರುವ ಒಂದನೇ ಮೈಲಿಗಲ್ಲನ್ನು ದಾಟಿದಂತೆ. ಅವರು ಅಲ್ಲಾಹನ ಕರುಣೆ ಮತ್ತು ಅನುಗ್ರಹಕ್ಕೆ ಅರ್ಹರಾಗುತ್ತಾರೆ. ಈ ಮೈತ್ರಿಯು ಸುದೃಢವಾದ ಸ್ನೇಹ ಸಂಬಂಧವಾಗಿ ಮುಂದುವರಿಯಲು ದೇವನ ದಾಸನು ಮತ್ತಷ್ಟು ಮುಂದೆ ಹೋಗಬೇಕಾಗಿದೆ. ಕಡ್ಡಾಯಗೊಳಿಸಲ್ಪಟ್ಟ ಸತ್ಕರ್ಮಗಳನ್ನು ಮಾಡುವುದು, ನಿಷಿದ್ಧವಾದ ಮತ್ತು ಅನಗತ್ಯವಾದ ಕೆಲಸಗಳನ್ನು ತೊರೆಯುವುದು ಒಂದು ಮೈಲುಗಲ್ಲಾಗಿದೆ. ಕಡ್ಡಾಯ ನಮಾಝಿನ ಜೊತೆಗೆ ಐಚ್ಛಿಕ ನಮಾಝ್, ಕಡ್ಡಾಯ ಝಕಾತಿನ ಜೊತೆಗೆ ಮತ್ತಷ್ಟು ದಾನ ನೀಡುವುದು. ಕಡ್ಡಾಯವಾದ ಉಪವಾಸದ ಜೊತೆಗೆ ಸುನ್ನತ್ ಉಪವಾಸ ಆಚರಿಸುವುದು, ದಿಕ್ರ್‌ಗಳು, ಕುರ್ ಆನ್ ಪಾರಾಯಣ ಇತ್ಯಾದಿಗಳನ್ನು ಮಾಡುವುದು, ಸ್ಪಷ್ಟವಾಗಿ ನಿಷೇಧಿಸಲ್ಪಟ್ಟ ವಿಷಯಗಳಿಂದ ದೂರ ಉಳಿಯುವುದರ ಜೊತೆಗೆ ಅನಗತ್ಯವಾದ ಹಾಗೂ ಸ್ಥಳ ಮತ್ತು ಸಂದರ್ಭಕ್ಕೆ ಸೂಕ್ತವಲ್ಲದ ಎಲ್ಲ ಕೆಲಸಗಳಿಂದ ದೂರ ಉಳಿಯುವುದು ಕೂಡಾ ಐಚ್ಛಿಕ ಸತ್ಕರ್ಮಗಳಲ್ಲಿ ಸೇರುತ್ತದೆ. ಈ

ಕೆಲಸಗಳ ಮೂಲಕ ಅಲ್ಲಾಹನ ಮಿತ್ರನು ಅಲ್ಲಾಹನ ಆಪ್ತಮಿತ್ರನಾಗಿ ಮಾರ್ಪಡುತ್ತಾನೆ. ಅಲ್ಲಾಹನ ಪ್ರೀತಿಗೆ ಪಾತ್ರರಾದವರ ಮನಸ್ಸಿನಲ್ಲಿ ಅವನೊಂದಿಗಿರುವ ಪ್ರೀತಿ ಮತ್ತು ಭಯಭಕ್ತಿ ಕಂಡು ಬರುವುದು ಇದೇ ಕಾರಣದಿಂದಾಗಿದೆ. ಅಲ್ಲಾಹನಿಂದ ಪ್ರೀತಿಸಲ್ಪಡುವ ಮತ್ತು ಅಲ್ಲಾಹನನ್ನು ಪ್ರೀತಿಸುವ ಸತ್ಯವಿಶ್ವಾಸಿಗಳನ್ನು ಪವಿತ್ರ ಕುರ್‌ಆನ್ ಈ ರೀತಿ ವರ್ಣಿಸಿದೆ.

ಅವರು ಸತ್ಯವಿಶವಾಸಿಗಳೊಂದಿಗೆ ವಿನಮ್ರರೂ ಸತ್ಯನಿಷೇಧಿಗಳೊಂದಿಗೆ ಕಠೋರರೂ ಆಗಿರುವರು. ಅವರು ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವರು. ಯಾವನೇ ಖಂಡಿಸುವವನ ಖಂಡನೆಗೆ ಭಯ ಪಡಲಾರರು. (ಪವಿತ್ರ ಕುರ್‌ಆನ್, ಅಲ್ ಮಾಇದ:54)

ಪ್ರವಾದಿ ಮುಹಮ್ಮದರು(ಸ) ಈ ರೀತಿ ಪ್ರಾರ್ಥಿಸುತ್ತಿದ್ದರು, ''ಅಲ್ಲಾಹನೇ, ನಿನ್ನೊಂದಿಗಿರುವ ಪ್ರೀತಿಯನ್ನು ಇಷ್ಟ ಪಡುವ ಕೆಲಸವಾಗಿ ಮಾಡಬೇಕು. ನನ್ನ ಅತಿ ದೊಡ್ಡ ಭಯ ನಿನ್ನೊಂದಿಗಿನ ಭಯವಾಗಿಸು. ನಿನ್ನನ್ನು ಭೇಟಿಯಾಗುವ ಬಯಕೆಯಲ್ಲಿ ಭೌತಿಕವಾದ ಅಗತ್ಯಗಳಿಂದ ನನ್ನನ್ನು ವಿರಕ್ತಗೊಳಿಸು. ಭೌತಿಕ ಸಂಪತ್ತಿನ ಮೂಲಕ ಈ ಲೋಕದ ಜನರ ಕಣ್ಣುಗಳಿಗೆ ತಂಪನ್ನು ನೀಡುವಾಗ ನನ್ನ ಕಣ್ಣುಗಳಿಗೆ ನಿನ್ನ ಆರಾಧನೆಯಿಂದ ತಂಪು ಲಭಿಸುವಂತೆ ಮಾಡು.''

ಕಡ್ಡಾಯ ಕರ್ಮಗಳನ್ನು ನಿರ್ವಹಿಸಿ ಅಲ್ಲಾಹನ ಸಾಮೀಪ್ಯ ಲಭಿಸುವಾಗ ಐಚ್ಛಿಕ ಸತ್ಕರ್ಮಗಳನ್ನು ಹೆಚ್ಚು ಹೆಚ್ಚು ಮಾಡುವುದರಿಂದ ಈ ಸಾಮೀಪ್ಯವು ಹೆಚ್ಚು ಸುದೃಢವೂ, ಉನ್ನತವೂ ಆಗುವುದು. ಆಗ ಸತ್ಯವಿಶ್ವಾಸಿಗಳ ಹೃದಯ ದೈವಿಕ ಜ್ಞಾನದಿಂದ ಶೋಭಾಯಮಾನವಾಗುವುದು. ಅವನ ಪ್ರೌಢಿಮೆಯಿಂದ, ಅವನ ಪ್ರೀತಿಯಿಂದ, ಅವನ ಪ್ರಭಾವದ ಬಗೆಗಿನ ಅನುಭೂತಿಯಿಂದ ತುಂಬಿಕೊಳ್ಳುವುದು. ಈ ಅವಸ್ಥೆಯನ್ನು ತಲುಪುದರ ಕುರಿತು ಒಮ್ಮೆ ಪ್ರವಾದಿ(ಸ) ಈ ರೀತಿ ಹೇಳಿರುವರು. ''ನೀವು ನಿಮ್ಮ ಸಂಪೂರ್ಣ ಹೃದಯದೊಂದಿಗೆ ಅಲ್ಲಾಹನನ್ನು ಪ್ರೀತಿಸುವವರಾಗಿ.'' ಮನಸ್ಸಿನಲ್ಲಿ ಅಲ್ಲಾಹನ ಬಗ್ಗೆ ಪ್ರೀತಿಯ ಭಾವನೆಯು ತುಂಬಿಕೊಂಡರೆ, ಅಲ್ಲಾಹನೊಂದಿಗಿರುವ ವಿಶ್ವಾಸ, ಪ್ರೀತಿ, ಅವನ ಸ್ನೇಹಕ್ಕೆ ಅನುಕೂಲವಲ್ಲದ ಎಲ್ಲ ವಿಷಯಗಳೂ ಹೊರದಬ್ಬಲ್ಪಡುವುದು. ಆ ಬಳಿಕ ಅಲ್ಲಾಹನೊಂದಿಗಿನ ಪ್ರೀತಿ ಮತ್ತು ಆ ಪ್ರೀತಿಯಲ್ಲಿರುವ ಅತ್ಯಾಸಕ್ತಿಯು ಅವನ ಇಚ್ಛೆ ಮತ್ತು ಮೋಹ ಅಭಿಲಾಶೆಗಳನ್ನು ನಿಯಂತ್ರಿಸುವುದು. ಅಲ್ಲಾಹನು ಇಷ್ಟಪಡದ ಯಾವುದನ್ನೂ ಅವನ ನಾಲಗೆಯು ಉಚ್ಚರಿಸಲಾರದು. ಅವನ ಪ್ರತಿಯೊಂದು ಚಲನೆಯೂ ಅಲ್ಲಾಹನ ಆದೇಶಗಳ ಸಾಕ್ಷಾತ್ಕಾರದ ರೂಪದಲ್ಲಿರುವುದು. ಅನಗತ್ಯವಾದ ಯಾವುದನ್ನೂ ಅವನು ಕೇಳುವುದಿಲ್ಲ ಮತ್ತು ನೋಡುವುದಿಲ್ಲ. ತನ್ನನ್ನು ಅಲ್ಲಾಹನಿಗೆ ಮತ್ತಷ್ಟು ನಿಕಟಗೊಳಿಸುವಂತಹದ್ದನ್ನು ಮಾತ್ರ ಅವನು ನೋಡುತ್ತಾನೆ ಮತ್ತು ಕೇಳುತ್ತಾನೆ. ಅವನು ಸತ್ಯ ಮತ್ತು ನ್ಯಾಯ ಸಮ್ಮತ ಕೆಲಸ ಮಾಡಲು ಮತ್ತು ದೇವನ ಮಾರ್ಗದಲ್ಲಿ ಹೋರಾಟ ನಡೆಸಲು ಮಾತ್ರ ತನ್ನ ಶಕ್ತಿಯನ್ನು ಉಪಯೋಗಿಸುತ್ತಾನೆ. ಅವನು ತನ್ನ ಕಾಲಿನ ಮೂಲಕ ನಡೆಯುತ್ತಾನೆ ಎಂದಾದರೆ ಅವನ ಪ್ರತಿ ಹೆಜ್ಜೆಯು ಅವನನ್ನು

ಅಲ್ಲಾಹನಿಗೆ ನಿಕಟಗೊಳಿಸುತ್ತದೆ. ನಾನು ಅವನ ಕಣ್ಣು, ಕಿವಿ, ಕೈ ಕಾಲು, ಆಗಿರುವೆ ಎಂದು ಹೇಳಿರುವುದರ ಉದ್ದೇಶ ಇದುವೇ ಆಗಿದೆ.

ನಿಷ್ಕಳಂಕ ಏಕದೇವ ವಿಶ್ವಾಸದ ಅತ್ಯುನ್ನತ ಅವಸ್ಥೆಯಿದು. ವಿಶ್ವಾಸಿಯ ಮನಸ್ಸಿನಲ್ಲಿ ಕಾಪಟ್ಯವಿಲ್ಲದ ಏಕದೇವ ವಿಶ್ವಾಸ ತುಂಬಿಕೊಂಡರೆ ಅವನ ಪ್ರತಿಯೊಂದು ಅಂಗಾಂಗದ ಕೆಲಸ ಕಾರ್ಯಗಳು ಅಲ್ಲಾಹನ ಅನುಸರಣೆಯೇ ಆಗಿರುತ್ತದೆ. ಈ ರೀತಿ ಸಂಪೂರ್ಣ ಜೀವನವನ್ನು ಅಲ್ಲಾಹನ ಇಬಾದತ್‌ಗಾಗಿ (ಆರಾಧನೆ) ಮೀಸಲಾಗಿಡುವವರ ಪ್ರತಿಯೊಂದು ಪ್ರಾರ್ಥನೆಗೆ ಅಲ್ಲಾಹನು ಉತ್ತರಿಸುವನು. ಅವರು ಸದಾ ಅಲ್ಲಾಹನ ಸಂರಕ್ಷಣೆಯಲ್ಲಿರುವರು. ಅವರು ಬೇಡುವುದನ್ನೆಲ್ಲಾ ನಾನು ನೀಡುತ್ತೇನೆ. ಅವರು ಅಭಯ ಯಾಚಿಸಿದರೆ ನಾನು ರಕ್ಷಣೆ ನೀಡುತ್ತೇನೆ ಎಂದು ಹೇಳಿರುವುದರ ತಾತ್ಪರ್ಯ ಇದುವೇ ಆಗಿದೆ.

ವಲಿಗಳ ಕಿವಿ, ಕಣ್ಣು, ಕೈಕಾಲುಗಳು ದೈವಿಕ ಶಕ್ತಿಯನ್ನು ಗಳಿಸಿರುತ್ತದೆ, ಆ ಕಾರಣದಿಂದಾಗಿ ಅವರಿಗೆ ಅನೈಸರ್ಗಿಕವಾದ ಮಾರ್ಗಗಳ ಮೂಲಕ ಜನರ ಅಭಿಲಾಶೆಗಳನ್ನು ಪೂರ್ತೀಕರಿಸಲು, ಅವರನ್ನು ಆಪತ್ತಿನಿಂದ ರಕ್ಷಿಸಲು ಸಾಧ್ಯವಾಗುತ್ತದೆ ಎಂಬುದಕ್ಕೆ ಆಧಾರವಾಗಿ ಅವರ ಅಂಧ ವಿಶ್ವಾಸಕ್ಕೆ ಪ್ರಮಾಣವಾಗಿ ಈ ಹದೀಸ್ ವಚನವನ್ನು ಕೆಲವರು ದುರ್ವ್ಯಾಖ್ಯಾನಿಸುತ್ತಾರೆ. ದೇವನ ದಾಸನು ಅಲ್ಲಾಹನ ಕಣ್ಣುಗಳ ಮೂಲಕ ನೋಡುವುದು, ಅಲ್ಲಾಹನ ಕೈಗಳ ಮೂಲಕ ಕೆಲಸ ಮಾಡುವುದು ಎಂಬುದೆಲ್ಲ ಕೇವಲ ಆಲಂಕಾರಿಕ ಪದ ಪ್ರಯೋಗಗಳಾಗಿವೆ. ನಿಜಾರ್ಥದಲ್ಲಿ ಅಲ್ಲಾಹನ ಕಣ್ಣು, ಕಿವಿ, ಕೈ ಕಾಲುಗಳು ಈ ಜಗತ್ತಿನಲ್ಲೇ ಅತಿ ಶ್ರೇಷ್ಠ ಮಾನವರಾದ ಪುಣ್ಯಾತ್ಮರಾದ ಪ್ರವಾದಿಗಳಿಗೂ ಲಭಿಸಿಲ್ಲ, ಲಭಿಸುವುದೂ ಇಲ್ಲ, ಪ್ರವಾದಿಗಳಿಗೆ ಪುಣ್ಯಾತ್ಮರಿಗೆ ಅಲ್ಲಾಹನ ಕಣ್ಣು, ಕಿವಿ, ಕೈಕಾಲುಗಳು ಇದೆ ಎಂದು ಒಪ್ಪಿಕೊಳ್ಳುವುದು ಅವರನ್ನು ದೇವನ ಅವತಾರವೆಂದು ಒಪ್ಪಿಕೊಳ್ಳುವುದಕ್ಕೆ ಸಮಾನವಾಗಿದೆ.



# 13. ಕರ್ಮಗಳ ಮೌಲ್ಯ

عَنْ عُمَرَبْنِ الْخَطَّابِ قَالَ سَمِعْتُ رَسُولَ اللّٰهِ ﷺ يَقُولُ:
إِنَّمَا الْأَعْمَالُ بِالنِّيَّاتِ وَإِنَّمَا لِكُلِّ امْرِئٍ مَا نَوَى. فَمَنْ كَانَتْ هِجْرَتُهُ إِلَى اللّٰهِ وَ
رَسُولِهِ فَهِجْرَتُهُ إِلَى اللّٰهِ وَ رَسُولِهِ وَمَنْ كَانَتْ هِجْرَتُهُ لِدُنْيَا يُصِيبُهَا أَوِ امْرَأَةٍ
يَنْكِحُهَا فَهِجْرَتُهُ إِلَى مَا هَاجَرَ إِلَيْهِ .(بخاری و مسلم)

ಉಮರ್ ಬಿನ್ ಖತ್ತಾಬ್(ರ) ವರದಿ ಮಾಡುತ್ತಾರೆ. ಪ್ರವಾದಿ ಮಹಮ್ಮದ್‌ರು(ಸ) ಹೇಳಿದರು, ಕರ್ಮಗಳು ಉದ್ದೇಶವನ್ನು ಅವಲಂಬಿಸಿರುತ್ತದೆ. ಪ್ರತಿಯೊಬ್ಬನಿಗೂ ಅವನು ಉದ್ದೇಶಿಸಿರುವುದು ಸಿಗುತ್ತದೆ. ಒಬ್ಬನು ಅಲ್ಲಾಹ್ ಮತ್ತು ಅವನ ರಸೂಲರಿಗಾಗಿ ಹಿಜ್ರತ್(ದೇಶತ್ಯಾಗ) ಮಾಡಿದರೆ ಅವನ ಹಿಜ್ರತ್ ಅಲ್ಲಾಹ್ ಮತ್ತು ರಸೂಲರಿಗಾಗಿರುವುದು. ಒಬ್ಬನು ಸಂಪಾದನೆ ಮಾಡುವುದಕ್ಕಾಗಿ ಅಥವಾ ಓರ್ವ ಸ್ತ್ರೀಯನ್ನು ವಿವಾಹವಾಗುವುದಕ್ಕಾಗಿ ಹಿಜ್ರತ್ ಮಾಡಿದರೆ ಅವನ ಹಿಜ್ರತ್ ಅದಕ್ಕಾಗಿಯೇ ಆಗಿರುವುದು. (ಬುಖಾರಿ, ಮುಸ್ಲಿಮ್)

ಮನುಷ್ಯನ ಕರ್ಮಗಳ ಮೌಲ್ಯವನ್ನು ನಿರ್ಧರಿಸಲು ಇಸ್ಲಾಮ್ ನಿಶ್ಚಯಿಸಿರುವ ಮಾನದಂಡವನ್ನು ಈ ಪ್ರವಾದಿ ವಚನವು ವಿವರಿಸುತ್ತದೆ. ಕೆಲಸದಿಂದ ಉಂಟಾಗಿರುವ ಅಥವಾ ಉಂಟಾಗಲಿರುವ ಪರಿಣಾಮವನ್ನು ಅನುಸರಿಸಿ ಅಲ್ಲ, ಬದಲಾಗಿ ವ್ಯಕ್ತಿಯು ಯಾವ ಉದ್ದೇಶದಿಂದ ಆ ಕೆಲಸವನ್ನು ಮಾಡಿದ್ದಾನೆ ಎಂಬುದನ್ನು ಅನುಸರಿಸಿ ಕೆಲಸವು ಒಳಿತು-ಕೆಡುಕು, ಪುಣ್ಯ-ಪಾಪ, ಉತ್ಕೃಷ್ಟ-ನಿಕೃಷ್ಟ ಎಂದು ಪರಿಗಣಿಸಲ್ಪಡುತ್ತದೆ.

ಊರಿಗೆ ಬಂದು ಜನರನ್ನು ಆಕ್ರಮಿಸುತ್ತಿರುವ ಒಂದು ಕ್ರೂರ ಮೃಗವನ್ನು ಕೊಂದು ಜನರಿಗೆ ಸಮಾಧಾನವನ್ನು ನೀಡುವ ಉದ್ದೇಶದಿಂದ ವ್ಯಕ್ತಿಯು ತನ್ನ ಕೋವಿಯಿಂದ ಗುಂಡನ್ನು ಹಾರಿಸಿದ. ಆದರೆ ಅದು ಗುರಿ ತಪ್ಪಿ ನಿರಪರಾಧಿಯಾದ ವ್ಯಕ್ತಿಗೆ ತಾಗಿ ಸತ್ತು ಹೋದ. ಇಲ್ಲಿ ವ್ಯಕ್ತಿಯ ಕೆಲಸವು ಸರಿಯಾಗಿದೆ. ಏಕೆಂದರೆ ಅವನ ಉದ್ದೇಶವು ಶ್ರೇಷ್ಠವಾಗಿತ್ತು ಮತ್ತು ಪವಿತ್ರವಾಗಿತ್ತು. ಇನ್ನೊಬ್ಬ ವ್ಯಕ್ತಿ ತನಗೆ ವೈರವಿರುವ ವ್ಯಕ್ತಿಯನ್ನು ವಧಿಸಿ ಬಿಡಬೇಕೆಂಬ ಉದ್ದೇಶದಿಂದ ಗುಂಡು ಹಾರಿಸುತ್ತಾನೆ. ಆದರೆ ಅದು ಗುರಿತಪ್ಪಿ ಮೇಲೆ ಪ್ರಸ್ತಾಪಿಸಿದ ಕ್ರೂರ ಮೃಗಕ್ಕೆ ತಾಗಿ

ಅದು ಸಾಯುತ್ತದೆ. ಆದರೂ ಆ ವ್ಯಕ್ತಿಯ ಉದ್ದೇಶವು ನೀಚವೂ ನಿಕೃಷ್ಟವೂ ಆದ ಕಾರಣ ಅವನ ಕೆಲಸವೂ ನಿಕೃಷ್ಟವಾಗಿದೆ.

ಈ ಮಾನದಂಡದ ಪ್ರಕಾರ ಒಂದು ಕೆಲಸವು ಪ್ರತ್ಯಕ್ಷ ರೂಪದಲ್ಲಿ ಒಳಿತಾಗಿ ಕಂಡುಬಂದ ಮಾತ್ರಕ್ಕೆ ಅದು ಇಸ್ಲಾಮಿನ ಪ್ರಕಾರ ಮಾತ್ರವಲ್ಲ ಅಲ್ಲಾಹನ ಮುಂದೆ ಸತ್ಕರ್ಮ ಆಗಿರ ಬೇಕೆಂದಿಲ್ಲ, ಅಲ್ಲಾಹನು ನೋಡುವುದು ಕೆಲಸದ ತಾತ್ಕಾಲಿಕ ಪರಿಣಾಮವನ್ನಲ್ಲ, ಕೆಲಸದ ಹಿಂದಿರುವ ಉದ್ದೇಶವನ್ನಾಗಿದೆ. ಏಕೆಂದರೆ ಮನುಷ್ಯನಿಗೆ ಇಚ್ಛಾ ಸ್ವಾತಂತ್ರ್ಯವನ್ನೂ, ಕರ್ಮಸ್ವಾತಂತ್ರ್ಯವನ್ನೂ ಅಲ್ಲಾಹನು ನೀಡಿದ್ದಾನೆ. ಆದುದರಿಂದ ಆಲೋಚಿಸುವುದು ಮತ್ತು ಅದನ್ನು ಅನುಸರಿಸಿ ಕೆಲಸ ಮಾಡುವುದರಲ್ಲೇ ಮನುಷ್ಯನ ನಿಜವಾದ ಪರೀಕ್ಷೆ ನಡೆಯುತ್ತದೆ. ಯಾವ ಕೆಲಸವಾಗಿದ್ದರೂ ಅದರ ಪರಿಣಾಮವು ಅಲ್ಲಾಹನ ಉಲ್ಲಂಘಿಸಲಾಗದ ಪ್ರಕೃತಿಯನ್ನು ಅನುಸರಿಸಿಯೇ ಸಂಭವಿಸುತ್ತದೆ. ಆದರಲ್ಲಿ ಮನುಷ್ಯನಿಗೆ ಯಾವುದೇ ಸ್ವಾತಂತ್ರ್ಯವಿಲ್ಲ, ಆದುದರಿಂದ ಕೆಲಸದ ಭೌತಿಕ ಪರಿಣಾಮ ವನ್ನು ಅದರ ಸಂಪೂರ್ಣ ಮೌಲ್ಯವನ್ನು ನಿರ್ಧರಿಸುವ ಮಾನದಂಡವಾಗಿಸಲು ಸಾಧ್ಯವಿಲ್ಲ, ಭೌತಿಕ ಪರಿಣಾಮವು ಒಳಿತಾದರೂ ಕೆಡುಕಾದರೂ ಅಲ್ಲಾಹನಿಂದಲೇ ಸಂಭವಿಸುತ್ತದೆ.

ಉದ್ದೇಶವನ್ನು ಕರ್ಮದ ಮೌಲ್ಯವಾಗಿ ನಿರ್ಣಯಿಸುವುದಕ್ಕೆ ಇನ್ನೊಂದು ಮುಖವೂ ಇದೆ. ದೇವನ ಪರೀಕ್ಷೆಯೂ ಎಲ್ಲರಿಗೂ ಸಮಾನವಾಗಿದೆ. ಒಬ್ಬ ವ್ಯಕ್ತಿ ಹಸಿವಿನಿಂದ ಕಂಗೆಟ್ಟಿರುವ ಸಹೋದರನನ್ನು ನೋಡಿದ. ಅವನಿಗೆ ಆಹಾರ ನೀಡಬೇಕೆಂಬ ಅದಮ್ಯ ಆಸೆಯಾಯಿತು. ಅದಕ್ಕಾಗಿ ಪ್ರಯತ್ನಿಸಿದ. ಆದರೆ ಹಣವಿಲ್ಲದ ಕಾರಣ ಅವನಿಗದು ಸಾಧ್ಯವಾಗಲಿಲ್ಲ, ಆದರೆ ಶ್ರೀಮಂತನಾದ ಬೇರೊಬ್ಬ ವ್ಯಕ್ತಿ ಅವನಿಗೆ ಸಹಾಯ ಮಾಡುತ್ತಾನೆ. ಒಬ್ಬ ವ್ಯಕ್ತಿ ದೇಶದ ಮೇಲೆ ದಾಳಿ ಮಾಡುತ್ತಿರುವ ಶತ್ರುಗಳನ್ನು ನೋಡುತ್ತಾನೆ. ಅನಾರೋಗ್ಯದ ಕಾರಣದಿಂದ ಅವನಿಗೆ ಅವರನ್ನು ಹಿಮ್ಮೆಟ್ಟಿಸಲು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗುವುದಿಲ್ಲ, ಆರೋಗ್ಯವಂತನಾದ ಬೇರೊಬ್ಬ ವ್ಯಕ್ತಿ ಆಯುಧದೊಂದಿಗೆ ಹೋಗಿ ಶತ್ರುಗಳನ್ನು ಎದುರಿಸಿ ಬರುತ್ತಾನೆ. ಒಬ್ಬ ವ್ಯಕ್ತಿ ನೆರೆಮನೆಯವನ ಪತ್ನಿಯನ್ನು ಬಯಸುತ್ತಾನೆ. ಆದರೆ ಪರಿಸ್ಥಿತಿ ಅನುಕೂಲವಿಲ್ಲದ ಕಾರಣದಿಂದ ಅವನಿಗದು ಸಾಧ್ಯವಾಗುವುದಿಲ್ಲ, ಇನ್ನೋರ್ವ ವ್ಯಕ್ತಿ ನೆರೆಮನೆಯವನ ಪತ್ನಿಯಿಂದ ಆಕರ್ಷಿಸಲ್ಪಡುತ್ತಾನೆ. ಆದರೆ ಸಚ್ಚಾರಿತ್ರ್ಯದ ಕಾರಣ ಅವನು ದಾರಿ ತಪ್ಪುವುದಿಲ್ಲ,

ಮೊದಲನೆಯ ಉದಾಹರಣೆಯಲ್ಲಿ ಹಸಿವಿನಿಂದ ಇದ್ದ ವ್ಯಕ್ತಿಗೆ ಆಹಾರವನ್ನು ನೀಡಿದ ಶ್ರೀಮಂತ, ರಾಜ್ಯವನ್ನು ಶತ್ರುಗಳಿಂದ ರಕ್ಷಿಸಲು ಹೋರಾಟ ನಡೆಸಿ ವಿಜಯಿಯಾದ ವ್ಯಕ್ತಿ ಈ ಇಬ್ಬರಿಗೂ ಅಲ್ಲಾಹನು ಅದಕ್ಕೆ ಬೇಕಾದ ಸಾಮರ್ಥ್ಯವನ್ನು ನೀಡಿದ್ದನು. ಇನ್ನಿಬ್ಬರಿಗೆ ಆ ಸಾಮರ್ಥ್ಯ ದೊರೆಯದ ಕಾರಣ ಅವರಿಗದನ್ನು ಮಾಡಲಾಗಲಿಲ್ಲ, ಇಲ್ಲಿ ಪರಿಣಾಮವನ್ನು ಕೆಲಸದ ಮಾನದಂಡವಾಗಿ ಸ್ವೀಕರಿಸಿದರೆ ಆರೋಗ್ಯ ಮತ್ತು ಸಂಪತ್ತು ಇಲ್ಲದವನ ಪ್ರಯತ್ನವು ಪ್ರತಿಫಲ ರಹಿತವಾಗಿ ಕಾಣಿಸುತ್ತದೆ. ಅಂದರೆ ಸಾಮರ್ಥ್ಯ ಮತ್ತು ಆರೋಗ್ಯವುಳ್ಳ ವ್ಯಕ್ತಿ

ಅಲ್ಲಾಹನ ಪರೀಕ್ಷೆಯಲ್ಲಿ ವಿಜಯಿಯಾಗುತ್ತಾನೆ ಮತ್ತು ಅದಿಲ್ಲದವರು ಸೋಲುತ್ತಾರೆ. ಇದು ಒಬ್ಬ ಅಧ್ಯಾಪಕ ತಾನು ಪಾಠ ಮಾಡಿದ ಮಕ್ಕಳಿಗೂ ಪಾಠ ಮಾಡದ ಮಕ್ಕಳಿಗೂ ಒಟ್ಟಾಗಿ ಪರೀಕ್ಷೆ ನಡೆಸುವುದು ಮತ್ತು ಫಲಿತಾಂಶ ನೀಡುವುದಕ್ಕೆ ಸಮಾನವಾಗಿದೆ ಅಲ್ಲವೇ?

ಎರಡನೆಯ ಉದಾಹರಣೆಯಲ್ಲಿ ವ್ಯಕ್ತಿ ಕೆಟ್ಟ ಕೆಲಸ ಮಾಡದೆ ಇರುವುದು ಅವನಿಗೆ ಅದಕ್ಕೆ ಅವಕಾಶ ಸಿಗದೆ ಇರುವುದರಿಂದಾಗಿದೆ. ಎರಡನೆಯ ವ್ಯಕ್ತಿ ಅಲ್ಲಾಹನ ಭಯದಿಂದ ಕೆಟ್ಟ ಕೆಲಸದಿಂದ ದೂರ ಉಳಿಯುತ್ತಾನೆ. ಕರ್ಮಗಳ ಮೌಲ್ಯವು ಪರಿಣಾಮವನ್ನು ಅವಲಂಬಿಸಿರುತ್ತದೆ. ಎಂದಾದರೆ, ಇಬ್ಬರೂ ಒಂದೇ ರೀತಿಯಲ್ಲಿ ಸದಾಚಾರಿಗಳೆನಿಸಿಕೊಳ್ಳುತ್ತಾರೆ. ಆದರೆ ವಾಸ್ತವಿಕತೆ ಹಾಗಿದೆಯೇ?

ಸಾಮರ್ಥ್ಯವುಳ್ಳವರು ಹಲವು ರೀತಿಯ ಪುಣ್ಯ ಕರ್ಮಗಳನ್ನು ಮಾಡಿ ಶ್ರೇಷ್ಠರಾಗುತ್ತಿರುವುದನ್ನು ಕಂಡು ಬಡವರಾದ ಕೆಲವು ಪ್ರವಾದಿ ಸಂಗಾತಿಗಳು ದುಃಖದಿಂದ ಪ್ರವಾದಿಯವರ(ಸ) ಬಳಿ ಬಂದು ಹೇಳಿದರು: ''ದೇವನ ಸಂದೇಶವಾಹಕರೇ, ದೇವನ ಸಂಪ್ರೀತಿ ಮತ್ತು ಪುಣ್ಯಕಾರ್ಯಗಳನ್ನೆಲ್ಲಾ ಶ್ರೀಮಂತರು ತಮ್ಮದಾಗಿಸಿಕೊಳ್ಳುತ್ತಿದ್ದಾರೆ. ಅವರಿಗೆ ದಾನ-ಧರ್ಮಗಳನ್ನು ಮಾಡಬಹುದು, ಧರ್ಮಯುದ್ಧದಲ್ಲಿ ಪಾಲ್ಗೊಳ್ಳಬಹುದು. ಬಡವರಾದ ನಮಗೆ ಆ ರೀತಿ ಮಾಡಲು ಸಾಧ್ಯವಿಲ್ಲವಲ್ಲವೇ?'' ಪ್ರವಾದಿ(ಸ) ಅವರೊಂದಿಗೆ ಹೇಳಿದರು, ''ನೀವು ಅಲ್ಲಾಹನನ್ನು ಸ್ತುತಿಸಿರಿ ಮತ್ತು ಕೊಂಡಾಡಿರಿ. ಇಷ್ಟು ಮಾಡಿದರೆ ನಿಮಗೆ ಅವರಿಗೂ ಸಿಗುವ ಪ್ರತಿಫಲವೇ ಸಿಗುವುದು.'' ಆದರೆ ದಾನ-ಧರ್ಮವನ್ನು ನೀಡುವ ಬದಲು ಕೇವಲ ದಿಕ್ರ್, ತಸ್ಬೀಹ್‌ಗಳನ್ನು ಹೇಳಿದರೆ ಸಾಕೆಂದು ಅಲ್ಲಾಹನ ಪ್ರವಾದಿ ಶ್ರೀಮಂತ ಸಹಾಬಿಗಳೊಂದಿಗೆ ಹೇಳಲಿಲ್ಲ. ಕರ್ಮಗಳನ್ನು ಮಾಡಲು ಸಾಧ್ಯವಿರಲಿ, ಇಲ್ಲದಿರಲಿ ಮಾಡಿದ ಕರ್ಮಗಳ ತಾತ್ಕಾಲಿಕ ಪರಿಣಾಮ ಏನೇ ಆಗಿರಲಿ, ಅದರ ಹಿಂದಿರುವ ಉದ್ದೇಶ, ಭಾವನೆ ಇತ್ಯಾದಿಗಳು ಅದರ ಮೌಲ್ಯವನ್ನು ನಿರ್ಧರಿಸುತ್ತದೆ ಎಂಬುದನ್ನು ಈ ಮೂಲಕ ಇಸ್ಲಾಮ್ ಕಲಿಸಿಕೊಡುತ್ತದೆ. ಅಲ್ಲಾಹನು ಯಾರಿಂದಲೂ ಅವರ ಸಾಮರ್ಥ್ಯಕ್ಕೆ ಮೀರಿದ ಏನನ್ನೂ ಅಪೇಕ್ಷಿಸುವುದಿಲ್ಲ, ಎಲ್ಲರಿಂದಲೂ ಅವರ ಸಾಮರ್ಥ್ಯಕ್ಕೆ ಅನುಗುಣವಾದುದನ್ನು ಮಾತ್ರ ನಿರೀಕ್ಷಿಸುತ್ತಾನೆ. 'ದಾನ' ಮಾಡಲು ಸಾಧ್ಯವಿರುವವರಿಂದ ಮಾತ್ರ ಅದನ್ನು ಅಪೇಕ್ಷಿಸುತ್ತಾನೆ. ಆದರೆ ದಾನ ನೀಡಬೇಕೆಂಬ ಮನಸ್ಸು ಮತ್ತು ಅಭಿಲಾಶೆಯನ್ನು ಅವನು ಎಲ್ಲರಿಂದಲೂ ನಿರೀಕ್ಷಿಸುತ್ತಾನೆ. ಅದು ಎಲ್ಲರಿಂದಲೂ ಸಾಧ್ಯವಾಗುವ ವಿಷಯವಾಗಿದೆ. ಸಾಮರ್ಥ್ಯವಿರುವವನ ದಾನಕ್ಕೆ ಇರುವ ಪುಣ್ಯವೇ ಬಡವನ ದಾನ ನೀಡಬೇಕೆನ್ನುವ ಆಶೆಗೂ ಸಿಗುತ್ತದೆ. ಏಕೆಂದರೆ ಈ ಆಶೆಯು ಅವನ ಹೃದಯವನ್ನು ಶುದ್ಧಗೊಳಿಸುತ್ತದೆ. ಅವನಿಂದ ಸಾಧ್ಯವಿರುವ ಕೆಲಸವನ್ನು ಸಂಸ್ಕರಿಸುತ್ತದೆ. 'ಉದ್ದೇಶವನ್ನು ಅನುಸರಿಸಿ ಕರ್ಮಗಳ ಮೌಲ್ಯವು ನಿರ್ಣಯಿಸಲ್ಪಡುತ್ತದೆ.' ಎಂಬ ಈ ಪ್ರವಾದಿ ವಚನವು ಈ ಎಲ್ಲಾ ಉದಾತ್ತ ವಿಚಾರಗಳನ್ನು ಒಳಗೊಂಡಿದೆ.

ಈ ಮಾನದಂಡವು ಮನುಷ್ಯನ ಕರ್ಮಗಳು ನಿಸ್ವಾರ್ಥವಾಗಿರುವುದರ, ನಿಷ್ಕಳಂಕವಾಗಿರುವುದರ ಮಹತ್ವವನ್ನು ಅವಶ್ಯಕತೆಯನ್ನು ನಮಗೆ ಬೊಟ್ಟು ಮಾಡಿ ತೋರಿಸುತ್ತದೆ.

ಯಾವ ಕೆಲಸ ಒಳ್ಳೆಯದಾಗಿದ್ದರೂ ಅದನ್ನು ಮಾಡುವುದರ ಹಿಂದೆ ಏನಾದರೂ ಕೆಟ್ಟ ಉದ್ದೇಶವು ಅಡಗಿಕೊಂಡಿದೆ ಎಂದಾದರೆ ಅದು ಮೌಲ್ಯಹೀನವಾಗಿ ಬಿಡುತ್ತದೆ. ಎಲ್ಲರೂ ಗಾಢ ನಿದ್ರೆಯಲ್ಲಿರುವಾಗ ಅಪರಾತ್ರಿಯಲ್ಲಿ ಎದ್ದು ದೇವಭಯದಿಂದ ಅವನ ಮುಂದೆ ನಮಾಝ್ ನಿರ್ವಹಿಸುತ್ತಾ, ಪ್ರಾರ್ಥನೆಯನ್ನು ಮಾಡುವುದು ಒಂದು ಶ್ರೇಷ್ಠ ಆರಾಧನೆಯಾಗಿದೆ. ಆದರೆ ನನ್ನ ಈ ಪ್ರಾರ್ಥನೆಯನ್ನು ಯಾರಾದರೂ ನೋಡಿದರೆ ಆಗಬಹುದಿತ್ತು ಎಂದು ಆ ವ್ಯಕ್ತಿ ಭಾವಿಸಿ ಬಿಟ್ಟರೆ ಅವನ ಆ ಪುಣ್ಯ ಕರ್ಮವು ತಿರಸ್ಕಾರ ಯೋಗ್ಯವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಏಕೆಂದರೆ ಅಲ್ಲಾಹನ ಪ್ರೀತಿಯನ್ನು ಗಳಿಸಬೇಕೆಂಬ ವ್ಯಕ್ತಿಯ ಉದ್ದೇಶವನ್ನು 'ದೇವಭಕ್ತ' ಎಂಬ ಪ್ರಶಂಸೆಯ ಅಪೇಕ್ಷೆಯು ಮಲಿನಗೊಳಿಸಿಬಿಟ್ಟಿತು. ಈ ರೀತಿಯಲ್ಲಿ ಕರ್ಮಗಳನ್ನು ಮಾಡುವುದರ ಹಿಂದೆ ದೇವನ ಸಂಪ್ರೀತಿ ಗಳಿಸುವುದರ ಜೊತೆಗೆ ಬೇರೆ ಏನಾದರೂ ಉದ್ದೇಶವಿದ್ದರೆ ಅದು ಶಿರ್ಕ್ (ದೇವ ಸಹಬಾಗಿತ್ವ) ಎಂದು ಕೂಡಾ ಕೆಲವು ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ.

ಈ ವಿಷಯವನ್ನು ಬಹಳ ಸ್ಪಷ್ಟವಾಗಿ ಮನವರಿಕೆ ಮಾಡಿರುವ ಒಂದು ಉದಾಹರಣೆಯನ್ನು ಪ್ರವಾದಿ(ಸ) ಈ ವಚನದಲ್ಲಿ ನೀಡಿರುತ್ತಾರೆ. ಹಿಜ್ರತ್ ಎಂಬುದು ಬಹಳ ಕಷ್ಟಕರವಾದ ಒಂದು ಕೆಲಸವಾಗಿದೆ. ಒಬ್ಬನು ತನ್ನ ಸ್ವಂತ ಊರು, ಮನೆ, ಸಂಪತ್ತು, ಕುಟುಂಬವನ್ನೆಲ್ಲಾ ತೊರೆದು ಸೂಕ್ತವಾದ ಸ್ಥಳವನ್ನು ಹುಡುಕಿ ಹೋಗುವುದು ಹಿಜ್ರತ್ ಆಗಿದೆ. ಅವರು ಹೋಗಿ ತಲುಪುವ ಸ್ಥಳದಲ್ಲಿ ಸಂಪತ್ತನ್ನು ಬಯಸುವುದಿಲ್ಲ, ಬಂಧು-ಬಾಂಧವರನ್ನು ನಿರೀಕ್ಷಿಸುವುದಿಲ್ಲ. ತಮ್ಮ ಉನ್ನತ ಆದರ್ಶವನ್ನು ಅನುಸರಿಸಿ ಜೀವಿಸಲು ಸಾಧ್ಯವಾಗುವ ಸೌಕರ್ಯವನ್ನು ಮಾತ್ರ ನಿರೀಕ್ಷಿಸುತ್ತಾರೆ. ಈ ರೀತಿಯ ಹಿಜ್ರತ್ ಹೋಗುವಿಕೆ ಇಸ್ಲಾಮಿನ ಪ್ರಕಾರ ಬಹಳ ಶ್ರೇಷ್ಠವಾದ ಕೆಲ ಸವಾಗಿದೆ. ಈ ಹಿಜ್ರತ್ ಹೋಗುವಿಕೆ ಕೇವಲ ಅಲ್ಲಾಹನಿಗೆ ಮಾತ್ರ ಅವನ ರಸೂಲರಿಗೆ ಮಾತ್ರ ವಾಗಿದ್ದರೆ ಅದು ಬಹಳ ಶ್ರೇಷ್ಠತೆ ಪಡೆದುಕೊಳ್ಳುತ್ತದೆ. ಮೇಲೆ ಪ್ರಸ್ತಾಪಿಸಿದ ಎಲ್ಲ ತ್ಯಾಗಗಳನ್ನು ಸಹಿಸಿಕೊಂಡು ಒಬ್ಬ ವ್ಯಕ್ತಿ, ತಾನು ಇಷ್ಟ ಪಡುವ ಹೆಣ್ಣನ್ನು ವಿವಾಹವಾಗಲು ದೇಶತ್ಯಾಗ ಮಾಡು ತ್ತಾನೆ ಎಂದಾದರೆ ಅವನಿಗೆ ಆ ಮೂಲಕ ಯೋಗ್ಯವಾದ ಜೀವನವನ್ನು ನಡೆಸಲು ಸಾಧ್ಯವಾದರೆ, ಈ ಹಿಜ್ರತನ್ನು ಅವನು ಹೆಣ್ಣಿಗಾಗಿ ಮಾಡಿದ ಹಿಜ್ರತ್ ಎಂದು ಅಲ್ಲಾಹನು ಪರಿಗಣಿಸುವನು. ಬೇರೆ ಯಾವುದಾದರೂ ಉದ್ದೇಶಕ್ಕಾಗಿ ಹಿಜ್ರತ್ ಹೋದರೆ ಆ ಉದ್ದೇಶಕ್ಕಾಗಿಯೇ ಹೋದಂತೆ ಎಂದು ಅದರ ಮೌಲ್ಯವು ನಿರ್ಧರಿಸಲ್ಪಡುತ್ತದೆ. ಅದಕ್ಕೆ ದೇವನ ಮಾರ್ಗದಲ್ಲಿ ಹಿಜ್ರತ್ ಹೋದ ಮೌಲ್ಯ ಮತ್ತು ಪ್ರತಿಫಲವು ಇರಲಾರದು.

ಧನಿಕ, ಧರ್ಮನಿಷ್ಠ ಎಂದು ಕರೆಸಿಕೊಳ್ಳಬೇಕು ಎಂಬ ಉದ್ದೇಶದಿಂದ ದಾನಧರ್ಮಗಳ ನ್ನು ಮಾಡುವುದು, ವ್ಯಾಪಾರ ನಡೆಸುವ ಉದ್ದೇಶದಿಂದ ಹಜ್ಜ್ ಕರ್ಮವನ್ನು ನೆರವೇರಿಸುವುದು ಎಂಬಿತ್ಯಾದಿ ಕೆಲಸಗಳು ಉದ್ದೇಶದಲ್ಲಿರುವ ದೋಷದ ಕಾರಣದಿಂದಾಗಿ ಮೌಲ್ಯಹೀನವಾಗುವ ಕರ್ಮಗಳಿಗೆ ಉದಾಹರಣೆಗಳಾಗಿವೆ. ಆದರೆ ಒಬ್ಬ ವ್ಯಕ್ತಿ ದೇವನಿಗಾಗಿ ಮಾಡುವ ಕೆಲಸದಲ್ಲಿ

ಲೌಕಿಕವಾದ ಉಪ ಉದ್ದೇಶವೂ ಸೇರಿಕೊಂಡರೆ ಆ ಕರ್ಮವು ನಿರರ್ಥಕವೆನಿಸುವುದೇ? ಉದಾಹರಣೆಗೆ ಒಬ್ಬ ದಾನಿಯು ತನ್ನ ದಾನದ ಮೂಲಕ ಅಲ್ಲಾಹನ ಪ್ರೀತಿಯನ್ನು ಬಯಸುವುದರ ಜೊತೆಗೆ ತಾನು ದಾನ ನೀಡಿದ ವ್ಯಕ್ತಿಯೂ ತನ್ನನ್ನು ಪ್ರೀತಿಸಬೇಕು. ತನ್ನ ಸಂಪತ್ತನ್ನು ಸಂರಕ್ಷಿಸುವುದರಲ್ಲಿ ಸಹಕರಿಸಬೇಕು ಎಂದು ಬಯಸುತ್ತಾನೆ. ಹಾಗಾದರೆ ಆ ವ್ಯಕ್ತಿಯ ದಾನವು ಪ್ರತಿಫಲಕ್ಕೆ ಅರ್ಹವಾಗದೆ ಮೌಲ್ಯಹೀನವಾಗಿ ಬಿಡುವುದೇ? ಈ ವಿಷಯದಲ್ಲಿ ಹಳೆಯ ಕಾಲದ ವಿದ್ವಾಂಸರು ಚಿಂತನ ಮಂಥನ ನಡೆಸಿದ್ದಾರೆ. ಈ ಮೊದಲೇ ಹೇಳಿದಂತೆ ಆ ವ್ಯಕ್ತಿಯಲ್ಲಿ ದೇವ ಸಂಪ್ರೀತಿಯೊಂದಿಗೆ ಬೇರೆ ಉದ್ದೇಶವೂ ಸೇರಿರುವುದರಿಂದ ಆ ದಾನವು ದೇವನ ಮುಂದೆ ಪ್ರತಿಫಲವಾಗಿ ಬಿಡುತ್ತದೆ ಎಂಬುದು ಒಂದು ಅಭಿಪ್ರಾಯ. ಎರಡು ಉದ್ದೇಶಗಳಲ್ಲಿ ಯಾವುದಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗಿತ್ತೋ ಅದನ್ನು ಅನುಸರಿಸಿ ಪ್ರತಿಫಲವು ನೀಡಲ್ಪಡುತ್ತದೆ ಎಂಬುದು ಪ್ರಬಲ ಅಭಿಪ್ರಾಯವಾಗಿದೆ. ಉದ್ದೇಶದಲ್ಲಿ ದೇವಸಂಪ್ರೀತಿಗೆ ಅನುಗುಣವಲ್ಲದ ಕೆಲಸಗಳು ಸೇರಿಕೊಂಡರೆ ಮೌಲ್ಯದಲ್ಲಿ ಕೊರತೆಯನ್ನು ಅನುಭವಿಸಬೇಕಾಗುತ್ತದೆ ಎಂಬುವುದರಲ್ಲಿ ಎರಡು ಮಾತಿಲ್ಲ.

ಅಲ್ಲಾಹನ ಸಂಪ್ರೀತಿಗಾಗಿ ಮಾಡುವ ಕೆಲಸಗಳಿಂದ ಲೌಕಿಕವಾದ ಪ್ರಯೋಜನಗಳು ಲಭಿಸುವುದಕ್ಕೆ ವಿರೋಧವಿಲ್ಲ ಎಂಬುದು ಸರಿಯಾದ ಅಭಿಪ್ರಾಯವಾಗಿದೆ. ಈ ಪ್ರಯೋಜನವು ಅಲ್ಲಾಹನ ಪ್ರೀತಿಗೆ ಸಂಬಂಧ ಪಟ್ಟದ್ದಾಗಿರಬೇಕು. ಕನಿಷ್ಠ ಪಕ್ಷ ಅವನ ಪ್ರೀತಿಗೆ ವಿರುದ್ಧವಲ್ಲದ್ದಾಗಿರಬೇಕು. ಹಜ್ಜ್‌ನ ಸಂದರ್ಭದಲ್ಲಿ ಸಿಗುವ ಐಹಿಕ ಲಾಭಗಳನ್ನು ಸ್ವೀಕರಿಸಲು ಪವಿತ್ರ ಕುರ್‌ಆನಿನಲ್ಲೇ ಅನುಮತಿಯನ್ನು ನೀಡಲಾಗಿದೆಯಲ್ಲವೇ? ಅದೇ ರೀತಿ ಸತ್ಕರ್ಮದಿಂದ ಲಭಿಸುವ ಭೌತಿಕ ಪ್ರಯೋಜನ ಆ ಸತ್ಕರ್ಮದ ಮೌಲ್ಯವನ್ನು ಕಡಿಮೆ ಮಾಡುತ್ತದೆ ಎಂದು ಹೆದರಿ ಅದನ್ನು ಉಪೇಕ್ಷಿಸಬೇಕಾಗಿಲ್ಲ. ಸತ್ಕರ್ಮದ ಉದ್ದೇಶವೇ ಭೌತಿಕ ಪ್ರಯೋಜನ ಗಳಿಸುವುದು ಎಂದಾದಾಗ ಮಾತ್ರ ಮೌಲ್ಯಹೀನತೆ ಸಂಭವಿಸುತ್ತದೆ. ಒಂದು ಆರಾಧನೆಯಲ್ಲಿ ಲೌಕಿಕ ಪ್ರಯೋಜನಗಳು ಒಳಗೊಂಡ ಕಾರಣಕ್ಕೆ ಅದು ಅಲ್ಲಾಹನ ಮುಂದೆ ಮೌಲ್ಯವುಳ್ಳದ್ದೋ ಇಲ್ಲವೋ ಎಂದು ತೀರ್ಮಾನಿಸಲ್ಪಡಬೇಕಾದರೆ, ಆ ಲೌಕಿಕ ಪ್ರಯೋಜನವಿಲ್ಲದಿರುತ್ತಿದ್ದರೆ ವ್ಯಕ್ತಿ ಆ ಆರಾಧನೆಯನ್ನು ಮಾಡುತ್ತಿದ್ದನೋ ಇಲ್ಲವೋ ಎಂಬುದನ್ನು ನೋಡಬೇಕಾಗುತ್ತದೆ. ಉದಾಹರಣೆಗೆ ವ್ಯಾಪಾರಕ್ಕೆ ಸೌಲಭ್ಯವಿರುವ ಕಾರಣ ಅಥವಾ ಉದ್ಯೋಗ ಲಭಿಸುವ ಸಾಧ್ಯತೆ ಇರುವುದರಿಂದ ವ್ಯಕ್ತಿ ಹಜ್ಜ್‌ಗೆ ಹೋಗುತ್ತಾನೆ. ಈ ಸೌಲಭ್ಯ ಮತ್ತು ಸಾಧ್ಯತೆ ಇಲ್ಲದಿರುತ್ತಿದ್ದರೆ ವ್ಯಕ್ತಿ ಹಜ್ಜ್‌ಗೆ ಹೋಗುತ್ತಿರಲಿಲ್ಲ. ಹಾಗಾದರೆ ಉದ್ದೇಶವು ಲೌಕಿಕವಾಯಿತು. ಪ್ರಪಂಚ ನಿಯಮ ಪ್ರಕಾರ ಅವನು ಹಾಜಿ ಎನಿಸಿಕೊಂಡರೂ ಅದಕ್ಕೆ ಅಲ್ಲಾಹನು ಮಹತ್ವವನ್ನು ನೀಡುವುದಿಲ್ಲ.



# 14. ಪಾಪ ಮತ್ತು ಪುಣ್ಯ

عَنِ النَّوَّاسِ بْنِ سَمْعَانَ رَضِيَ اللهُ عَنْهُ قَالَ سَأَلْتُ رَسُولَ اللهِ ﷺ عَنِ الْبِرِّ وَالْإِثْمِ
فَقَالَ الْبِرُّ حُسْنُ الْخُلُقِ وَالْإِثْمُ مَا حَاكَ فِي صَدْرِكَ
وَكَرِهْتَ أَنْ يَطَّلِعَ عَلَيْهِ النَّاسُ (مسلم)

ನವ್ವಾಸ್ ಬಿನ್ ಸಮ್‌ಆನ್(ರ) ಹೇಳುತ್ತಾರೆ. ನಾನೊಮ್ಮೆ ಪ್ರವಾದಿ ಮುಹಮ್ಮದ್(ಸ) ರವರ ಬಳಿ ಪುಣ್ಯ ಮತ್ತು ಪಾಪದ ಬಗ್ಗೆ ಕೇಳಿದೆ. ಆಗ ಪ್ರವಾದಿ(ಸ) ಈ ರೀತಿ ಉತ್ತರಿಸಿದರು. ಸಚ್ಚಾರಿತ್ರ್ಯವೇ ಪುಣ್ಯ ಮತ್ತು ನಿನ್ನ ಮನಸ್ಸಿಗೆ ಚುಚ್ಚುವ ಹಾಗೂ ಜನರು ತಿಳಿಯಬಾರದೆಂದು ನೀನು ಬಯಸುವ ಕ್ರಿಯೆಯೇ ಪಾಪವಾಗಿದೆ. (ಮುಸ್ಲಿಮ್)

ಪುಣ್ಯ ಮತ್ತು ಪಾಪ ಎಂದರೇನೆಂದು ಸ್ಪಷ್ಟವಾಗಿ ತಿಳಿಸಿಕೊಡುವ ಪ್ರವಾದಿ ವಚನವಿದು. ಪುಣ್ಯ ಎಂದು ಅನುವಾದಿಸಲಾಗಿರುವ 'ಬಿರ್ರ್' ಎಂಬ ಮೂಲ ಪದವು ಒಳಿತು, ನೀತಿ, ಔದಾರ್ಯ ಎಂಬಿತ್ಯಾದಿ ಅರ್ಥಗಳನ್ನು ಒಳಗೊಂಡಿದೆ. ಅದೇ ರೀತಿ ಪಾಪ ಎಂದು ಅನುವಾದಿಸಿರುವ 'ಇಸ್ಮ್' ಎಂಬ ಪದವು ಕೆಡುಕು, ಅನೀತಿ, ಸುಳ್ಳು, ಅನ್ಯಾಯ ಎಂಬಿತ್ಯಾದಿ ಅರ್ಥಗಳನ್ನು ಒಳಗೊಂಡಿದೆ.

ಉತ್ತಮ ಸ್ವಭಾವವು ಎಲ್ಲ ಒಳಿತುಗಳ ಭಂಡಾರವಾಗಿದೆ. ಒಳ್ಳೆಯ ನಡವಳಿಕೆ, ಸತ್ಕರ್ಮ ಮತ್ತು ಆತ್ಮಸಂಸ್ಕರಣೆಯ ಲಕ್ಷಣವಾಗಿದೆ. ವ್ಯಕ್ತಿ ಎಷ್ಟೇ ಸಾಮರ್ಥ್ಯವುಳ್ಳವನಾಗಿದ್ದರೂ, ವಿದ್ಯಾವಂತನಾಗಿದ್ದರೂ ಆರಾಧನೆ ಮಾಡುವವನಾಗಿದ್ದರೂ ಅವನ ಸ್ವಭಾವ ಒಳ್ಳೆಯದಾಗಿರದಿದ್ದರೆ ಯಾರೂ ಅವನನ್ನು ಪ್ರೀತಿಸಲಾರರು ಮತ್ತು ಅವನನ್ನು ಆದರ್ಶ ವ್ಯಕ್ತಿಯೆಂದು ಪರಿಗಣಿಸಲಾರರು. ಇಸ್ಲಾಮಿನ ಆರಂಭ ಕಾಲದಲ್ಲಿ ಪ್ರತಿಯೊಬ್ಬ ಮುಸ್ಲಿಮರೂ ತನ್ನ ಪರಿಚಿತ ವ್ಯಕ್ತಿಗಳಿಂದ ಪ್ರೀತಿಸಲ್ಪಡುತ್ತಿದ್ದರು ಮತ್ತು ಆದರ್ಶ ವ್ಯಕ್ತಿಯೆಂದು ಹೆಸರು ಪಡೆದಿದ್ದರು. ಸತ್ಯ ಮತ್ತು ನೀತಿಯನ್ನು ವಿರೋಧಿಸುವವರು ಮಾತ್ರ ಅವರನ್ನು ದ್ವೇಷಿಸುತ್ತಿದ್ದರು. ಕೆಲವು ಇಸ್ಲಾಮಿನ ವಿರೋಧಿಗಳು ಅಪಪ್ರಚಾರ ಮಾಡುತ್ತಿರುವಂತೆ ಇಸ್ಲಾಮ್ ಖಡ್ಗದಿಂದ ಪ್ರಚಾರವಾದುದಲ್ಲ, ಬದಲಾಗಿ ಈ ಸಚ್ಚಾರಿತ್ರ್ಯದ ವೈಶಿಷ್ಟ್ಯತೆಯಿಂದ, ಮಾದರೀ ಯೋಗ್ಯ ಗುಣ ನಡತೆಯಿಂದ

ಜನರು ಆಕರ್ಷಿತರಾಗಿ ಇಸ್ಲಾಮ್ ಧರ್ಮವು ಬಹಳ ಶೀಘ್ರವಾಗಿ ಪೂರ್ವ- ಪಶ್ಚಿಮಗಳಲ್ಲಿ ಪ್ರಚಾರವನ್ನು ಪಡೆಯಿತು.

ಸಚ್ಚಾರಿತ್ರ್ಯದ ಮಹತ್ವವನ್ನು ವಿವರಿಸುವ ಅನೇಕ ಪ್ರವಾದಿ ವಚನಗಳಿವೆ. ಕೆಲವು ಉದಾಹರಣೆಗಳನ್ನು ನೋಡೋಣ. ಬುಖಾರಿ ಮತ್ತು ಮುಸ್ಲಿಮ್‌ನಲ್ಲಿ ಉದ್ಧರಿಸಲ್ಪಟ್ಟಿರುವ ಪ್ರವಾದಿ ವಚನವೊಂದರಲ್ಲಿ 'ಸತ್ಯವಿಶ್ವಾಸಿಗಳ ಪೈಕಿ ಅತ್ಯಂತ ಶ್ರೇಷ್ಠರು ಸಚ್ಚಾರಿತ್ರ್ಯವುಳ್ಳವರಾಗಿದ್ದಾರೆ' ಎಂದು ಹೇಳಲಾಗಿದೆ. ತಿರ್ಮಿದಿ ಮತ್ತು ಇಬ್ನ್ ಹಿಬ್ಬಾನ್‌ನಲ್ಲಿ ವರದಿಯಾಗಿರುವ ಪ್ರವಾದಿ ವಚನವೊಂದರಲ್ಲಿ 'ಪರಲೋಕದಲ್ಲಿ ವಿಚಾರಣೆಯ ಸಂದರ್ಭದಲ್ಲಿ ವ್ಯಕ್ತಿಯ ಸಚ್ಚಾರಿತ್ರ್ಯವು ತಕ್ಕಡಿಯಲ್ಲಿ ಭಾರವಾಗಿ ತೂಗುವುದು' ಎಂಬುದರ ಪ್ರಸ್ತಾಪವಿದೆ. ಬಝ್ಝಾರ್ ವರದಿ ಮಾಡಿರುವ ಒಂದು ವಚನದಲ್ಲಿ 'ಪರಲೋಕ ವಿಚಾರಣೆಯ ವೇಳೆ ವ್ಯಕ್ತಿಯ ಸಚ್ಚಾರಿತ್ರ್ಯವನ್ನು ನಮಾಝ್ ಉಪವಾಸಗಳ ಸ್ಥಾನಕ್ಕೆ ಏರಿಸಲಾಗುವುದು' ಎಂದು ಬಂದಿರುತ್ತದೆ.

ಸಚ್ಚಾರಿತ್ರ್ಯವೆಂದರೇನೆಂದು ಹೆಚ್ಚು ಕಡಿಮೆ ಎಲ್ಲರಿಗೂ ತಿಳಿದಿರುತ್ತದೆ. ಆದರೂ ಸಚ್ಚಾರಿತ್ರ್ಯದ ವಾಸ್ತವಿಕತೆಯ ಬಗ್ಗೆ ಕೆಲವು ಇಸ್ಲಾಮೀ ವಿದ್ವಾಂಸರು ನೀಡಿರುವ ವಿವರಣೆಯು ಗಮನಾರ್ಹವಾಗಿದೆ. ಹಸನ್ ಬಸರಿ ಪ್ರಸ್ತಾಪಿಸಿರುತ್ತಾರೆ. 'ಒಬ್ಬನು ಸದಾ ಹಸನ್ಮುಖಿಯಾಗಿರುವುದು ತನ್ನ ಸಂಪತ್ತನ್ನು ಸತ್ಕರ್ಮಗಳಿಗಾಗಿ ಖರ್ಚು ಮಾಡುವುದು, ಜನರಿಂದ ಉಂಟಾಗುವ ತೊಂದರೆಗಳನ್ನು ಕ್ಷಮಿಸಿ ಬಿಡುವುದು. ಇದು ಸಚ್ಚಾರಿತ್ರ್ಯವಾಗಿದೆ. ಇಮಾಮ್ ವಾಸಿತಿಯವರ ಪ್ರಕಾರ 'ಸಚ್ಚಾರಿತ್ರ್ಯವೆಂದರೆ, ಸುಖ ಮತ್ತು ದುಃಖದ ಸಂದರ್ಭಗಳಲ್ಲಿ ಸಹಜೀವಿಗಳಿಗೆ ಇಷ್ಟವಾಗುವ ರೀತಿಯಲ್ಲಿ ವರ್ತಿಸುವುದರ ಹೆಸರಾಗಿದೆ. ಇಮಾಮ್ ಅಲಿ(ರ)ಯವರ ಪ್ರಕಾರ ಸಚ್ಚಾರಿತ್ರ್ಯವು ಮೂರು ಕೆಲಸಗಳ ಹೆಸರಾಗಿದೆ. ಕೆಡುಕುಗಳಿಂದ ದೂರ ಉಳಿಯುವುದು, ಒಳಿತು ಗಳನ್ನು ಅರಸುವುದು, ಸಹಜೀವಿಗಳಿಗೆ ಸುಖ ಸಂತೋಷವನ್ನುಂಟು ಮಾಡುವುದು.

ಈ ರೀತಿಯಲ್ಲಿ ವಿದ್ವಾಂಸರು ಸಚ್ಚಾರಿತ್ರ್ಯದ ವಾಸ್ತವಿಕತೆಯನ್ನು ವಿವರಿಸುತ್ತಾರೆ. ಆರಾಧನಾ ಕರ್ಮಗಳಲ್ಲಿರುವ ಆಸಕ್ತಿಗಿಂತ ಮಿಗಿಲಾಗಿ ಸ್ವತಃ ಪರಿಸರ ಮತ್ತು ಪರಿಸರ ವಾಸಿಗಳೊಂದಿಗೆ ಗೌರವ ಪೂರ್ವಕ ಮತ್ತು ಪ್ರೀತಿಯಿಂದ ಕೂಡಿದ ವರ್ತನೆಯಲ್ಲಿ ಇವೆಲ್ಲವುಗಳು ಒಳಗೊಳ್ಳುತ್ತವೆ.

ಪಾಪದ ಬಗ್ಗೆ ಪ್ರವಾದಿಯವರು(ಸ) ನೀಡಿರುವ ಉದಾಹರಣೆಯು ಇನ್ನು ಬೇರೆ ಯಾವ ಉದಾಹರಣೆಯ ಅಗತ್ಯವಿಲ್ಲದಷ್ಟು ಸರಳವಾಗಿದೆ. ನಮ್ಮ ಮನಸ್ಸಿಗೆ ಒಳ್ಳೆಯದೆಂದು ತೋಚದ, ಜನರು ನೋಡಬಾರದೆಂದು ರಹಸ್ಯವಾಗಿ ಮಾಡಬೇಕಾಗಿ ಬರುವ ಎಲ್ಲವೂ ಕೆಡುಕು ಮತ್ತು ಪಾಪವಾಗಿದೆ. ಇಲ್ಲಿ ಅಲ್ಲಾಹನ ವಿಧಿ ನಿಷೇಧಗಳ ಬಗ್ಗೆ, ಪವಿತ್ರ ಕುರ್‌ಆನಿನ ಮತ್ತು ಪ್ರವಾದಿ ಚರ್ಯೆಗೆ ವಿರುದ್ಧವಾದ ಕೆಲಸಗಳು ಎಂದು ಹೇಳದೆ 'ಮನಸ್ಸಿಗೆ ಚುಚ್ಚುವ' ಎಂಬ ಮಾತನ್ನು ಪ್ರಯೋಗಿಸಿರುವುದು ಬಹಳ ಗಮನಾರ್ಹವಾಗಿದೆ. ಧರ್ಮಬದ್ಧ ಹಾಗೂ ಅನುಮತಿ ನೀಡಲ್ಪಟ್ಟ ವಿಷಯಗಳ ಪೈಕಿ ಕೆಲವು ಕೆಲಸಗಳನ್ನು ಮನಃಸಾಕ್ಷಿಯು ನಿರಾಕರಿಸುತ್ತದೆ. ಉದಾಹರಣೆಗೆ ನಿಮಗೆ ಬಹಳ ಬಾಯಾರಿಕೆಯಾಗಿದೆ. ನಿಮ್ಮ ಬಾಯಾರಿಕೆ ತಣಿಸುವಷ್ಟು

ನೀರು ಮಾತ್ರ ಬಳಿ ಇದೆ. ಆದರೆ ನಿಮ್ಮಂತೆಯೇ ಬಾಯಾರಿದ ವ್ಯಕ್ತಿಯೊಬ್ಬ ನಿಮ್ಮ ಬಳಿಯಿದ್ದಾನೆ. ಧರ್ಮಶಾಸ್ತ್ರದ ಪ್ರಕಾರ ನಿಮ್ಮ ಬಳಿ ಇರುವ ನೀರನ್ನು ನೀವೇ ಕುಡಿದು ಮುಗಿಸಬಹುದು. ಅದರ ಒಡೆಯರು ನೀವಾದುದರಿಂದ ನಿಮಗೆ ಪ್ರಥಮ ಅವಕಾಶ. ಹಾಗೆ ಮಾಡಿದರೆ, ನಾನದನ್ನು ಸಂಪೂರ್ಣ ಕುಡಿದದ್ದು ಸರಿಯಲ್ಲ, ಅದರ ಅರ್ಧ ಅಥವಾ ಕಾಲು ಭಾಗವಾದರೂ ಇನ್ನೊಬ್ಬ ಬಾಯಾರಿದವನಿಗೆ ನೀಡಬಹುದಿತ್ತು ಎಂದು ನಿಮಗೆ ತೋಚಬಹುದು. ಈ ಯೋಚನೆ ನಿಮಗೆ ಬರಲು ಕಾರಣವೇನೆಂದರೆ ನೀವು ಮಾಡಿದ ಕೆಲಸ ಸರಿಯಲ್ಲ ಎಂದಾಯಿತು. ನೀರನ್ನು ಸಂಪೂರ್ಣವಾಗಿ ನಿಮಗೇ ಕುಡಿಯಬೇಕು. ಆದರೆ ನೀವು ಸ್ವಾರ್ಥಿ, ನಿರ್ದಯಿ ಎಂಬುದು ಜನರಿಗೆ ಗೊತ್ತಾಗಬಾರದು. ಆದುದರಿಂದ ಯಾರಿಗೂ ಗೊತ್ತಾಗದ ಸ್ಥಳಕ್ಕೆ ಹೋಗಿ ಅಡಗಿಕೊಂಡು ಕುಡಿಯುತ್ತೀರಿ. ಅಡಗಿಕೊಂಡು ಕುಡಿಯಬೇಕೆಂದು ತೋಚುವ ಈ ಪ್ರೇರಣೆಯು ನೀವು ಮಾಡುತ್ತಿರುವ ಕೆಲಸ ಸರಿಯಾಗಿಲ್ಲ ಎಂಬುದರ ಲಕ್ಷಣವಾಗಿದೆ. 'ಜನರು ತಿಳಿಯಬಾರದೆಂದು ನೀವು ಬಯಸುವ' ಎಂದು ಪ್ರವಾದಿ ವಚನದಲ್ಲಿ ಹೇಳಲಾಗಿದೆ. ಮನುಷ್ಯನು ರಹಸ್ಯವಾಗಿ ಮತ್ತು ಏಕಾಂತದಲ್ಲಿ ಮಾಡುವ ಕೆಲವು ಕೆಲಸಗಳಿವೆ. ಅವುಗಳು ಈ ವಾಕ್ಯದ ವ್ಯಾಪ್ತಿಯಲ್ಲಿ ಬರುವುದಿಲ್ಲ.



# 15. ಹಿತ-ಅಹಿತ ಮತ್ತು ಮನಸ್ಸು

عنْ نعمان بن بشير سَمِعْتُ رَسُولَ اللّه ﷺ يَقُولُ:

إِنَّ الْحَلَالَ بَيِّنٌ وَإِنَّ الْحَرَامَ بَيِّنٌ وَبَيْنَهُمَا أُمُورٌ مُشْتَبِهَات لَا يَعْلَمُهُنَّ كَثِيرٌ مِنَ النَّاسِ فَمَنِ اتَّقَى الشُّبُهَاتِ فَقَدْ اسْتَبْرَأَ لِدِينِهِ وَعِرْضِهِ وَمَنْ وَقَعَ فِي الشُّبُهَاتِ وَقَعَ فِي الْحَرَامِ كَالرَّاعِي يَرْعَى حَوْلَ الْحِمَى يُوشِكُ أَنْ يَرْتَعَ فِيهِ أَلَا وَإِنَّ لِكُلِّ مَلِكٍ حِمًى أَلَا وَإِنَّ حِمَى اللّهِ مَحَارِمُهُ أَلَا وَإِنَّ فِي الْجَسَدِ مُضْغَةً إِذَا صَلُحَتْ صَلُحَ الْجَسَدُ كُلُّهُ وَإِذَا فَسَدَتْ فَسَدَ الْجَسَدُ كُلُّهُ أَلَا وَهِيَ الْقَلْبُ. (بخارى و مسلم)

ನುಅ್‌ಮಾನ್ ಬಿನ್ ಬಶೀರ್(ರ) ವರದಿ ಮಾಡುತ್ತಾರೆ- ಪ್ರವಾದಿ ಮುಹಮ್ಮದ್(ಸ) ಹೇಳಿದರು: ಹಲಾಲ್ ಮತ್ತು ಹರಾಮ್(ಧರ್ಮಸಮ್ಮತ ಮತ್ತು ನಿಷಿದ್ಧ)ಗಳನ್ನು ಸ್ಪಷ್ಟಪಡಿಸಲಾಗಿದೆ. ಆದರೆ ಅವುಗಳ ಮಧ್ಯೆ ಕೆಲವು ಸಂಶಯಾಸ್ಪದ ಸಂಗತಿಗಳಿವೆ. ಹೆಚ್ಚಿನವರಿಗೆ ಈ ಬಗ್ಗೆ ಅರಿವು ಇರುವುದಿಲ್ಲ, ಯಾರು ಸಂಶಯಾಸ್ಪದ ವಸ್ತುಗಳಿಂದ ದೂರ ಉಳಿದನೋ ಅವನು ತನ್ನ ಧರ್ಮ ಮತ್ತು ಮಾನವನ್ನು ರಕ್ಷಿಸಿಕೊಂಡನು. ಯಾರು ಸಂಶಯಾಸ್ಪದ ವಸ್ತುಗಳಲ್ಲಿ ಸಿಲುಕಿದನೋ ಅವನು ನಿಷಿದ್ಧಕ್ಕೆ ತಲುಪಿಯೇ ತೀರುವನು. ನಿಷಿದ್ಧ ಹುಲ್ಲುಗಾವಲಿನ ಪಕ್ಕದಲ್ಲಿ ತನ್ನ ಜಾನುವಾರುಗಳನ್ನು ಮೇಯಿಸುವವನಂತೆ. ಅವನ ಜಾನುವಾರು ಹುಲ್ಲುಗಾವಲಿಗೆ ನುಗ್ಗಿ ಮೇಯುವ ಸಂಭವವಿದೆ. ಎಚ್ಚರಿಕೆ! ಪ್ರತಿಯೊಬ್ಬ ರಾಜನಿಗೆ ಒಂದು ನಿಷಿದ್ಧ ಹುಲ್ಲುಗಾವಲಿರುತ್ತದೆ. ಎಚ್ಚರಿಕೆ! ಅಲ್ಲಾಹನ ನಿಷಿದ್ಧ ಹುಲ್ಲುಗಾವಲು ಅವನ ನಿಷೇಧಗಳಾಗಿವೆ. (ನಿಷಿದ್ಧಗೊಳಿಸಿದಂತಹ ವಸ್ತುಗಳು) ತಿಳಿಯಿರಿ. ಮನುಷ್ಯನ ಶರೀರದಲ್ಲಿ ಒಂದು ಮಾಂಸದ ತುಂಡಿದೆ. ಅದು ಸರಿಯಾದರೆ ಇಡೀ ಶರೀರ ಸರಿಯಾಗಿರುತ್ತದೆ. ಅದು ಕೆಟ್ಟು ಹೋದರೆ ಇಡೀ ಶರೀರ ಕೆಟ್ಟು ಹೋಗುತ್ತದೆ. ನೆನಪಿಡಿ. ಅದು (ಮಾಂಸದ ತುಂಡು) ಮನುಷ್ಯನ ಹೃದಯವಾಗಿದೆ.

(ಬುಖಾರಿ, ಮುಸ್ಲಿಮ್)

ದೈನಂದಿನ ಜೀವನದಲ್ಲಿ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಅನುಸರಿಸಬೇಕಾದ ಕೆಲವು ನಿಯಮಗಳನ್ನು ಈ ಹದೀಸ್‌ನ ಮೂಲಕ ಕಲಿಸಲಾಗಿದೆ. ಯಾವುದನ್ನು ಮಾಡ ಬಹುದು, ಮಾಡಬಾರದು, ವರ್ಜಿಸಬೇಕು. ನಿರಾಕರಿಸಬೇಕು ಎಂಬಿತ್ಯಾದಿಗಳು ಶುದ್ಧ ಪ್ರಕೃತಿಯಲ್ಲಿ ಸ್ವಯಂ ಅರಿವಿಗೆ ಬರುತ್ತದೆ. ಆದರೆ ಕಾಲ ಪರಿಸ್ಥಿತಿಯ ಅನಿವಾರ್ಯತೆಯು ಕೆಲವೊಮ್ಮೆ ಮನುಷ್ಯ ಪ್ರಕೃತಿಯ ಈ ಸಾಮರ್ಥ್ಯವನ್ನು ಸ್ತಬ್ಧಪಡಿಸುತ್ತದೆ. ಆದುದರಿಂದ ಮನುಷ್ಯನು ಇವುಗಳ ಸ್ವಾಧೀನತೆಯಿಂದ ಸಂಪೂರ್ಣವಾಗಿ ಹೊರ ಬರುವುದು ಕಷ್ಟಸಾಧ್ಯ. ಎಷ್ಟರ ಮಟ್ಟಿಗೆ ಪ್ರಕೃತಿ ನೀಡಿರುವ ಈ ಸಾಮರ್ಥ್ಯವು ಕಡಿಮೆಯಾಗುತ್ತದೋ, ಅಷ್ಟರ ಮಟ್ಟಿಗೆ ಅವನ ನೈಸರ್ಗಿಕ ಜ್ಞಾನವು ಕಡಿಮೆಯಾಗುತ್ತಾ ಬರುತ್ತದೆ. ಈ ಕೊರತೆಯನ್ನು ನೀಗಿಸಲಿಕ್ಕಾಗಿ ಅಲ್ಲಾಹನು ತನ್ನ ಧರ್ಮ ಮತ್ತು ಶರೀಅತನ್ನು ಅವತೀರ್ಣಗೊಳಿಸಿರುವನು. ಆದುದರಿಂದ ಶರಈ ನಿಯಮಗಳನ್ನು ಅನುಮತಿ ಇರುವಂತಹದ್ದು ಎಂದು ಪರಿಗಣಿಸಬಹುದಾಗಿದೆ ಎಂದು ಅಬೂ ಹನೀಫಾರವರು ಅನುಮತಿ ಇರುವ ಕೆಲಸದ ಬಗ್ಗೆ ವ್ಯಾಖ್ಯಾನ ನೀಡಿರುವರು. ಶರಈ ನಿಯಮಗಳ ಪ್ರಕಾರ ನಿಷಿದ್ಧವಾದ ವಿಷಯಗಳನ್ನು ನಿಷಿದ್ಧವೆಂದು ಪರಿಗಣಿಸಬೇಕೆಂದು ಇಮಾಮ್ ಶಾಫಿಈಯವರು ವ್ಯಾಖ್ಯಾನಿಸಿರುವರು. ಈ ವ್ಯಾಖ್ಯಾನಗಳ ಮಧ್ಯೆ ಕೇವಲ ಪದಗಳ ವ್ಯತ್ಯಾಸವಿದೆಯೆಂದು ಭಾಸವಾಗುತ್ತದೆ. ಆದರೆ ವಾಸ್ತವಿಕತೆ ಹಾಗಿಲ್ಲ. ವಿಷಯಗಳ ಸ್ವಭಾವದ ಕುರಿತು ವಿದ್ವಾಂಸರ ಮಧ್ಯೆ ಇರುವ ಚರ್ಚೆಯು ಇದರಲ್ಲಿ ಪ್ರತಿಫಲಿಸಿದೆ. ಮೌಲಿಕ ಸ್ವಭಾವ ನಿಷಿದ್ಧವೆಂದು ಅಬೂ ಹನೀಫಾರ ಅಭಿಪ್ರಾಯ. ಆದುದರಿಂದ ಯಾವ ಕೆಲಸವಾದರೂ ಅನುಮತಿ ಇರುವಂತಹದ್ದು ಎಂದಾಗಬೇಕಿದ್ದರೆ ಅದಕ್ಕೆ ಆಧಾರಗಳು ಬೇಕು. ಮೌಲಿಕ ಸ್ವಭಾವ ಅನುಮತಿ ಇದೆ ಎಂಬುದು ಇಮಾಮ್ ಶಾಫಿಈಯವರ ಅಭಿಪ್ರಾಯ. ಅಂದರೆ ಒಂದು ಕೆಲಸವನ್ನು ನಿಷಿದ್ಧವೆನ್ನಲು ಆಧಾರಬೇಕು. ಮೂಲ ರೂಪದಲ್ಲಿ ಎಲ್ಲ ಕೆಲಸಗಳೂ ಅನುಮತಿ ಇರುವಂತಹದ್ದು. ಹೆಚ್ಚಿನ ಇಸ್ಲಾಮೀ ವಿದ್ವಾಂಸರು ಇದೇ ಅಭಿಪ್ರಾಯವನ್ನು ಹೊಂದಿದ್ದಾರೆ. ಇದಕ್ಕೆ ಆಧಾರವಾಗಿ ಅನೇಕ ಹದೀಸ್‌ಗಳೂ, ಪವಿತ್ರ ಕುರ್‌ಆನಿನ ಸೂಕ್ತಗಳೂ ಇವೆ.

ಶರೀಅತ್ ಹಲಾಲ್ ಅಥವಾ ಹರಾಮ್ ಎಂದು ಸ್ಪಷ್ಟವಾಗಿ ಹೇಳಿರದ ಅಥವಾ ಹೇಳಿರು ವುದಾಗಿ ಸ್ಪಷ್ಟವಾಗಿ ತಿಳಿದುಬಂದಿಲ್ಲದ ಅನೇಕ ವಿಷಯಗಳನ್ನು ಮನುಷ್ಯನು ಎದುರಿಸಬೇಕಾಗಿ ಬರುತ್ತದೆ. ಇವುಗಳೇ ಸಂಶಯಾಸ್ಪದ ಸಂಗತಿಗಳು-ಶುಬ್‌ಹಾತ್. ಅದು ನಿಷಿದ್ಧವೆಂದು ಪರಿಗ ಣಿಸುವ ಯಾವುದೇ ಸೂಚನೆಯು ಕುರ್‌ಆನ್ ಮತ್ತು ಸುನ್ನತ್‌ಗಳಲ್ಲಿ ಇಲ್ಲವೆಂದು ಸ್ಪಷ್ಟವಾಗುವ ವರೆಗೆ ಅವುಗಳು ಸಂಶಯಾಸ್ಪದ ವಿಷಯಗಳಾಗಿರುತ್ತವೆ. ಹಾಗೆ ಬಂದರೆ ಅವುಗಳನ್ನು ಹಲಾಲ್ ಎಂದು ಪರಿಗಣಿಸಬಹುದು. ಇದೆ ಎಂದು ಗೊತ್ತಾದರೆ ಅವುಗಳು ಸ್ಪಷ್ಟವಾದ ನಿಷಿದ್ಧ ವಿಷಯ ಗಳಾಗಿವೆ. ಇವೆರಡೂ ತೀರ್ಮಾನಕ್ಕೆ ಬರಲು ಸಾಧ್ಯವಿಲ್ಲದ ಸಂದರ್ಭಗಳಲ್ಲಿ ಏನು ಮಾಡ ಬೇಕು? ದೂರ ಉಳಿಯಬೇಕು. ಇದುವೇ ರಕ್ಷಣೆ ಮತ್ತು ಪಾಪದಿಂದ ದೂರ ಉಳಿಯುವ ವಿಧಾನವಾಗಿದೆ. ಈ ಬಗ್ಗೆ ಸರಿಯಾದ ಮಾಹಿತಿ ಇಲ್ಲದೆ ಸಂಶಯಾಸ್ಪದ ಕೆಲಸಗಳನ್ನು ಮಾಡುವು

ದೆಂದರೆ ಸ್ವಯಂ ಧರ್ಮವನ್ನು ಕಳಂಕಿತಗೊಳಿಸಿದಂತೆ. ತನಗೆ ಸೂಕ್ತವೋ ಅಲ್ಲವೋ ಎಂಬುದು ಸ್ವಯಂ ತಿಳಿದು ಬರದ ಸಂದರ್ಭದಲ್ಲಿ ಆ ಕೆಲಸವನ್ನು ಮಾಡುವುದು ಅವನ ವ್ಯಕ್ತಿತ್ವಕ್ಕೆ ಕಳಂಕ ತರುತ್ತದೆ. ಈ ರೀತಿಯಲ್ಲಿ ಅವನು ಆಕ್ಷೇಪಾರ್ಹ ಮತ್ತು ಅಪಮಾನಿತನಾಗುವನು. ಸಂಶಯಾಸ್ಪದ ವಸ್ತುಗಳನ್ನು ವರ್ಜಿಸಿದವನು ದೊಡ್ಡ ಪಾಪಗಳಿಂದ ಸುರಕ್ಷಿತನಾಗುವನು ಎಂದು ಪ್ರವಾದಿ ವಚನದಲ್ಲಿ ಹೇಳುವುದರ ತಾತ್ಪರ್ಯ ಇದುವೇ ಆಗಿದೆ.

ಧರ್ಮ ಸಮ್ಮತ ಅಥವಾ ನಿಷಿದ್ಧವೆಂದು ತಿಳಿಯದ ಸಂಶಯವುಳ್ಳ ಕೆಲಸಗಳಲ್ಲಿ ನಿರತನಾಗುವವನು ನಿಷಿದ್ಧ ಕೆಲಸದೆಡೆಗೆ ತಲುಪುವನು ಎಂದು ಪ್ರವಾದಿ(ಸ) ಹೇಳಿರುವರು. ಇದು ಎರಡು ರೀತಿಯಲ್ಲಿ ಸಂಭವಿಸಬಹುದಾಗಿದೆ. ಸಂಶಯಾಸ್ಪದ ವಿಷಯಗಳು ಅನೇಕ ಸಂದರ್ಭಗಳಲ್ಲಿ ನಿಷಿದ್ಧವಾಗಿರಬಹುದು. ಎರಡನೆಯದಾಗಿ ಸಂಶಯಾಸ್ಪದ ವಸ್ತುಗಳ ಧರ್ಮಬಾಹಿರ ಅಂಶಗಳ ಬಗ್ಗೆ ತಿಳಿದಿದ್ದು ಅದನ್ನು ಮಾಡುವವನು ಸ್ಪಷ್ಟವಾದ ಪಾಪಗಳನ್ನು ಎಸಗುವಲ್ಲಿ ಇನ್ನಷ್ಟು ಧೈರ್ಯ ತೋರಬಲ್ಲನು.

ಈ ವಿಷಯವನ್ನು ಒಂದು ಮನೋಜ್ಞವಾದ ಉದಾಹರಣೆಯ ಮೂಲಕ ಪ್ರವಾದಿ(ಸ) ಯವರು ವಿವರಿಸಿರುವರು. ಒಬ್ಬ ವ್ಯಕ್ತಿ ತಾನು ನೆಟ್ಟು ಬೆಳೆಸಿದ ಬೆಳೆಯಿರುವ ಪ್ರದೇಶ ನಿಷೇಧಿತವಲಯ ಎಂಬುದರ ಉದ್ದೇಶವಾಗಿದೆ. ಬೇರೊಬ್ಬ ವ್ಯಕ್ತಿ ಅದರ ಸುತ್ತಲೂ ತನ್ನ ಜಾನುವಾರುಗಳನ್ನು ಮೇಯಿಸುತ್ತಾನೆ ಎಂದಾದರೆ, ಆ ಜಾನುವಾರು ಅದಕ್ಕೆ ಸಾಧ್ಯವಾದರೆ ನೆಟ್ಟು ಬೆಳೆಸಿದ ಬೆಳೆಗಳನ್ನೂ ತಿಂದು ಮುಗಿಸುತ್ತದೆ. ಇರಲಿ ಬಿಡಿ ಸ್ವಲ್ಪ ಬೆಳೆಯನ್ನು ತಿನ್ನಲಿ ಎಂಬುದಾಗಿ ವ್ಯಕ್ತಿಯೂ ತಿಳಿಯಬಹುದು. ಕ್ರಮೇಣ ಅವನು ಬೇರೆಯವರ ಬೆಳೆಯಿರುವಲ್ಲಿಯೇ ಹೋಗಿ ತನ್ನ ಜಾನುವಾರುಗಳನ್ನು ಮೇಯಿಸಲು ಹಿಂಜರಿಯಲಾರನು.

ಅಲ್ಲಾಹನು ನಿಷಿದ್ಧ ಗೊಳಿಸಿದ ವಿಷಯಗಳು ಅವನ ನಿಷೇಧಿತ ಮೇರೆಗಳಾಗಿವೆ. ಅದರ ಹತ್ತಿರವೂ ಸುಳಿಯಬಾರದು. ಇದುವೇ ಅತ್ಯಂತ ಸುರಕ್ಷಿತ ಮಾರ್ಗ. ನಿಷೇಧಿತ ವಲಯದ ಸುತ್ತ ತಿರುಗಾಡುತ್ತಿದ್ದರೆ ಅದರೊಳಗೆ ಪ್ರವೇಶಿಸುವ ಉತ್ಸಾಹ ಉಂಟಾಗಬಹುದು. ಅವಕಾಶ ಸಿಕ್ಕರೆ ಅವನದರೊಳಗೆ ಪ್ರವೇಶಿಸಲೂಬಹುದು. ಇದುವೇ ಮನುಷ್ಯನ ಸ್ವಭಾವವಾಗಿದೆ. ಆದುದರಿಂದ ಪಾಪಮುಕ್ತನಾಗ ಬೇಕಾದರೆ ಪಾಪವೆಂದು ಸ್ಪಷ್ಟವಾಗಿ ತಿಳಿದಿರುವ ಕೆಲಸಗಳನ್ನೂ ವರ್ಜಿಸಬೇಕು. ಅದು ಸಾಧ್ಯವಾಗಬೇಕಾದರೆ ನಮ್ಮ ಹೃದಯ ಶುದ್ಧವಾಗಿರಬೇಕು.

ಆದುದರಿಂದ ಹೃದಯ ಮತ್ತು ಅದರ ಸಂಸ್ಕರಣೆಯ ಪ್ರಾಧಾನ್ಯತೆಯನ್ನು ಎತ್ತಿ ಹೇಳುತ್ತಾ ಈ ಪ್ರವಾದಿ ವಚನವನ್ನು ಕೊನೆಗೊಳಿಸಲಾಗಿದೆ. ಹೃದಯ ಅಂದರೆ ಮನುಷ್ಯ. ಅದು ಒಳ್ಳೆಯದಾದರೆ ಮನುಷ್ಯ ಒಳ್ಳೆಯವನಾಗುತ್ತಾನೆ. ಹೃದಯ ಒಳ್ಳೆಯದಾಗಿರದಿದ್ದರೆ ಬೇರೆ ಏನೂ ಒಳ್ಳೆಯದಾಗಿದ್ದರೂ ಪ್ರಯೋಜನವಿಲ್ಲ. ಹಿಂದಿನ ಕಾಲದ ವಿದ್ವಾಂಸರು ಹೇಳುರುತ್ತಾರೆ. ದೇಹ ಎಂದರೆ ಅದನ್ನು ಹೊಂದಿರುವ ವ್ಯಕ್ತಿಯ ರಾಜ್ಯದಂತೆ, ಹೃದಯವು ಕೇಂದ್ರ ಸ್ಥಳ, ಅವಯವಗಳು ಪ್ರಜೆಗಳಂತೆ, ಕರುಣೆ ತುಂಬಿದ ಬುದ್ಧಿಯು ಮಂತ್ರಿ, ದೇಹೇಚ್ಛೆಗಳು ಪ್ರಜೆಗಳಿಗೆ ಬೇಕಾದ

ವಸ್ತುಗಳನ್ನು ಒದಗಿಸಿ ಕೊಡುವವುಗಳು, ಕೋಪವು ಪೋಲೀಸಿನಂತೆ. ಅವನು ಮಹಾ ತಂತ್ರಜ್ಞ, ಅದರಂತೆ ನಿಕೃಷ್ಟನು. ಹಿತಾಕಾಂಕ್ಷಿಯಂತೆ ಕಂಡು ಬರುವನು. ಆದರೆ ಅವನ ಉಪದೇಶಗಳು ಮಾರಕವಾಗಿರುತ್ತದೆ. ಹೃದಯವು ಚಿಂತನೆ, ಭಾವನೆ, ಸೂಕ್ಷ್ಮತೆ ಮುಂತಾದವುಗಳ ಕೇಂದ್ರವಾಗಿದೆ. ರಾಜ್ಯದ ಅಭಿವ್ಯಕ್ತಿಯ ಸ್ಥಳ ನಾಲಗೆಯಾಗಿದೆ. ಪಂಚೇಂದ್ರಿಯಗಳು ಕೆಲಸಗಾರರು. ಪ್ರತಿಯೊಬ್ಬರಿಗೂ ಒಂದೊಂದು ಕೆಲಸವನ್ನು ವಹಿಸಿಕೊಡಲಾಗಿದೆ. ಕಣ್ಣುಗಳಿಗೆ ಬಣ್ಣದ ಲೋಕ ಕಿವಿಗಳಿಗೆ ಶಬ್ದದ ಲೋಕ ಹೀಗೆ ದೇಹದ ವಾರ್ತಾ ಮಾಧ್ಯಮಗಳೂ ಇವುಗಳೇ. ಹೃದಯ ರಾಜನಂತೆ. ರಾಜ ಒಳ್ಳೆಯವನಾದರೆ ಪ್ರಜೆಗಳೂ ಒಳ್ಳೆಯವರಾಗುತ್ತಾರೆ. ರಾಜನು ಕೆಟ್ಟು ಹೋದರೆ ಪ್ರಜೆಗಳೂ ಅವನಂತೆ ಕೆಟ್ಟು ಹೋಗುತ್ತಾರೆ. ಆಂತರಿಕವಾದ ರೋಗಗಳಿಂದ ಮುಕ್ತನಾದರೆ ರಾಜ ಒಳ್ಳಯವನಾಗುವನು. ಕಾಪಟ್ಯ, ಅಸೂಯೆ, ಜಿಪುಣತೆ, ಅತ್ಯಾಸೆ, ಲೋಭ, ಅಹಂಕಾರ, ಆತ್ಮಪ್ರಶಂಸೆ ಹೀಗೆ ಹೃದಯವನ್ನು ಬಾಧಿಸುವ ನಲವತ್ತರಷ್ಟು ರೋಗಗಳಿವೆ. ಅವುಗಳಿಂದೆಲ್ಲ ಅಲ್ಲಾಹನು ನಮ್ಮನ್ನು ರಕ್ಷಿಸಲಿ. ಆರೋಗ್ಯ ಪೂರ್ಣ ಹೃದಯವನ್ನು ಹೊಂದಲು ಅನುಗ್ರಹಿಸಲಿ– ಆಮೀನ್.



# 16. ಸಂಶಯವಿರುವುದನ್ನು ವರ್ಜಿಸಿರಿ

عن أبي محمد الحسن بن علي بن أبي طالب رَضِيَ اللَّهُ عَنْهُ قَالَ حَفِظْتُ مِنْ رَسُولِ اللَّهِ ﷺ دَعْ مَا يَرِيبُكَ إِلَى مَا لَا يَرِيبُكَ (ترمذي ، نسائي)

ಅಬೂ ಮುಹಮ್ಮದ್ ಹಸನ್ ಬಿನ್ ಅಲಿ ಬಿನ್ ಅಬೂ ತಾಲಿಬ್‌ರಿಂದ ಉಲ್ಲೇಖಿತ. ಪ್ರವಾದಿಯವರಿಂದ(ಸ) ನಾನು ಈ ರೀತಿ ಕಲಿತಿರುವೆ: ''ನಿನಗೆ ಸಂಶಯವಿರುವುದನ್ನು ಬಿಟ್ಟು ಸಂಶಯವಿಲ್ಲದಿರುವುದರೆಡೆಗೆ ಸಾಗು.'' (ತಿರ್ಮಿದಿ, ನಸಾಈ)

ಒಂದು ಸರಳವಾದ ಧಾರ್ಮಿಕ ನಿಯಮವನ್ನು ಈ ಪ್ರವಾದಿ ವಚನದ ಮೂಲಕ ಕಲಿಸಿಕೊಡಲಾಗಿದೆ. ಸರಿ-ತಪ್ಪು, ಹಿತ-ಅಹಿತ, ಧರ್ಮಬದ್ಧ-ಧರ್ಮನಿಷಿದ್ಧ, ಒಳಿತು-ಕೆಡುಕು ಈ ರೀತಿ ಯಾವುದೆಂದು ಸರಿಯಾಗಿ ನಿರ್ಧರಿಸಲು ಸಾಧ್ಯವಿಲ್ಲದ ಹಲವು ವಿಚಾರಗಳನ್ನು ನಿತ್ಯ ಜೀವನದಲ್ಲಿ ನಾವು ಎದುರಿಸಬೇಕಾಗಿ ಬರುತ್ತದೆ. ಇಂತಹ ಸಂದರ್ಭದಲ್ಲಿ ಕೆಲಸವನ್ನು ಮಾಡಲು ಅಥವಾ ಮಾಡದಿರಲು ಆ ಬಗ್ಗೆ ಸರಿಯಾದ ಜ್ಞಾನವಿರಬೇಕಾಗುತ್ತದೆ. ಸ್ವತಃ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲದ ವಿಷಯಗಳನ್ನು ವಿದ್ವಾಂಸರೊಂದಿಗೆ ಕೇಳಿ ತಿಳಿದು ಕೊಳ್ಳಬೇಕು. ಆದರೂ ತೃಪ್ತಿದಾಯಕ ಉತ್ತರ ಸಿಗದೇ ಹೋದರೆ ಅಂತಹ ವಿಷಯಗಳಿಂದ ದೂರ ಉಳಿಯ ಬೇಕಾಗಿದೆ.

ಸತ್ಯ, ಧರ್ಮ, ನೀತಿ, ಒಳಿತು, ಧರ್ಮಬದ್ಧ ಕೆಲಸಗಳು ಸಾಮಾನ್ಯವಾಗಿ ಸ್ಪಷ್ಟವಾಗಿ ರುತ್ತದೆ. ಅವುಗಳನ್ನು ಸ್ವೀಕರಿಸಲು ಆತ್ಮಸಾಕ್ಷಿ ಸದಾ ಸಿದ್ಧವಾಗಿರುತ್ತದೆ. ಅನೀತಿ, ಅಕ್ರಮ, ಕೆಡುಕುಗಳೂ ಸ್ಪಷ್ಟವಾಗಿ ಮನವರಿಕೆಯಾಗುತ್ತದೆ. ಅಂತಹ ಕೆಲಸಗಳನ್ನು ಮಾಡುವಾಗ ಆತ್ಮ ಸಾಕ್ಷಿ ಎಚ್ಚರಿಸುತ್ತಲೇ ಇರುತ್ತದೆ. ಸರಿ ಅಥವಾ ತಪ್ಪು ಎಂದು ಸರಿಯಾಗಿ ತಿಳಿದು ಬಾರದ ವಿಷ ಯಗಳಲ್ಲೂ ಕೆಲವೊಮ್ಮೆ ತಾತ್ಕಾಲಿಕವಾದ ಒಳಿತು ಕಂಡು ಬರಬಹುದು. ಆದರೂ ಅದನ್ನು ಮಾಡಬೇಕೋ ಬಿಡಬೇಕೋ ಎಂಬ ವಿಷಯದಲ್ಲಿ ಮನಸ್ಸಿನಲ್ಲಿ ಒಂದು ರೀತಿಯ ಕೋಲಾ ಹಲವೇರ್ಪಡುತ್ತದೆ. ಆದರಲ್ಲಿರುವ ತಪ್ಪುಗಳ ತಿಳುವಳಿಕೆಯ ಕಾರಣದಿಂದ ಈ ರೀತಿಯ ಮಾನಸಿಕ ಗೊಂದಲ ಉಂಟಾಗುತ್ತದೆ. ಅದನ್ನು ಮಾಡುವುದರಿಂದ ತಾತ್ಕಾಲಿಕವಾದ ಸುಖ ಅಥವಾ ಭವಿಷ್ಯದಲ್ಲಿ ಲಾಭ ಸಿಗಬಹುದು. ಆದರೆ ಅದನ್ನು ವರ್ಜಿಸುವುದರಿಂದ ಸುಖಕ್ಕಿಂತ

ಭಯಾನಕವಾದ ದುಃಖ ಮತ್ತು ಒಳಿತಿಗಿಂತ ಕೆಡುಕಾಗುವ ಸಂದರ್ಭದಿಂದ ತಪ್ಪಿಸಿಕೊಳ್ಳ ಬಹುದು. ಆದುದರಿಂದ ಒಂದು ಕೆಡುಕು ಆಗಿರಬಹುದೇ ಎಂಬ ಸಂಶಯದ ಆಧಾರದಲ್ಲಿ ಅದನ್ನು ತೊರೆಯುವುದು ಪ್ರತಿಫಲಕ್ಕೆ ಅರ್ಹವಾದ ಪುಣ್ಯ ಕಾರ್ಯವಾಗಿದೆ.

ಕೆಡುಕಾಗಿರಬಹುದು ಎಂಬ ಸಂಶಯವಿರುವ ಕೆಲಸಗಳನ್ನು, ನಾವು ಆ ಸಂಶಯವನ್ನು ಕಡೆಗಣಿಸಿ ಮಾಡಿದಾಗ ನಮಗೆ ತಿಳಿಯದ ರೀತಿಯಲ್ಲಿ ನಮ್ಮ ಮನಸ್ಸು ಸ್ವಲ್ಪ ಕಳಂಕಿತವಾಗು ತ್ತದೆ. ಅದು ಪದೇ ಪದೇ ಸಂಭವಿಸುವಾಗ ಕಳಂಕವು ಹೆಚ್ಚುತ್ತದೆ. ಇದು ಮುಂದುವರಿದು 'ಸರಿ' ಎಂದು ಸ್ಪಷ್ಟವಾಗಿ ಅರಿವಿಲ್ಲದ ವಿಷಯಗಳನ್ನು ನಿಸ್ಸಂಕೋಚವಾಗಿ ಮಾಡುವುದು ನಮ್ಮ ಅಭ್ಯಾಸವಾಗಿ ಬಿಡುತ್ತದೆ. ಸರಿ ಮತ್ತು ಸತ್ಯ ಎಂಬುದು ಸರಿಯಾಗಿ ಸ್ಪಷ್ಟವಾಗಿರುವುದನ್ನು ಮಾತ್ರ ಮಾಡುತ್ತೇನೆ ಎಂಬ ದೃಢ ನಿರ್ಧಾರವನ್ನು ತಾಳಿದರೆ ಮಾತ್ರ ಈ ತೊಳಲಾಟದಿಂದ ರಕ್ಷಣೆ ಹೊಂದಲು ಸಾಧ್ಯವಾಗಬಹುದು.

ಒಂದು ಕೆಲಸವು ಧರ್ಮ ಬದ್ಧವೋ, ನಿಷಿದ್ಧವೋ ಎಂಬ ಸಂಶಯ ಉಂಟಾದರೆ, ಅದನ್ನು ಬಿಟ್ಟು ಧರ್ಮಬದ್ಧವೆಂದು ದೃಢವಾಗಿರುವ ಕೆಲಸಗಳನ್ನು ಮಾತ್ರ ಮಾಡಬೇಕು. ಒಂದು ಸಂಪತ್ತು ತನಗೆ ಹಲಾಲ್ ಅಥವಾ ಹರಾಮ್ ಎಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ಸಾಧ್ಯ ವಾಗದಿದ್ದರೆ ಅಂತಹ ಸಂಪತ್ತನ್ನು ತ್ಯಜಿಸಬೇಕು. ಆದರೆ ಒಳಿತೋ, ಕೆಡುಕೋ ಎಂಬ ಸಂಶಯ ಹೊಣೆಗಾರಿಕೆಗಳಿಂದ ನುಣುಚಿಕೊಳ್ಳಲು ಅಥವಾ ಅನ್ಯಾಯವೆಸಗಲು ಅವಕಾಶ ನೀಡ ಬಾರದು. ಒಮ್ಮೆ ಬಿಶ್‌ರ್ ಇಬ್ನು ಹಾರಿಸ್ ಎಂಬ ವಿದ್ವಾಂಸರೊಂದಿಗೆ ಪ್ರಶ್ನಿಸಲಾಯಿತು. 'ಒಬ್ಬ ಪುರುಷನೊಂದಿಗೆ ಅವನ ತಾಯಿಯು ಪತ್ನಿಗೆ ತಲಾಖ್ ನೀಡಬೇಕೆಂದು ಹೇಳಿದರೆ ಆತ ಏನು ಮಾಡಬೇಕು.' ಬಿಶ್‌ರ್ ಈ ರೀತಿ ಉತ್ತರಿಸಿದರು. 'ಇಷ್ಟರವರೆಗೆ ಜೀವನದಲ್ಲಿ ತಾಯಿಯ ಎಲ್ಲಾ ಮಾತುಗಳನ್ನು ಅನುಸರಿಸುತ್ತಿದ್ದ ವ್ಯಕ್ತಿಯಾಗಿದ್ದರೆ ಮಾತ್ರ ಈ ವಿಷಯ ದಲ್ಲೂ ತಾಯಿ ಹೇಳಿದಂತೆ ಕೇಳಬಹುದು. ಆದರೆ ಇತರೆಲ್ಲ ವಿಷಯಗಳಲ್ಲಿ ತಾಯಿಯ ಮಾತನ್ನು ಕೇಳದ ವ್ಯಕ್ತಿಯು ಈ ಮಾತನ್ನು ಅನುಸರಿಸಬಾರದು. ತಪ್ಪು ಎಂದು ಸ್ವಯಂ ಸಂಶಯವಿರುವ ಕೆಲಸಗಳನ್ನು ಮಾಡಲು ಈ ಮೇಲಿನ ವಿದ್ವಾಂಸರ ಅಭಿಪ್ರಾಯವನ್ನು ಬಳಸಿಕೊಂಡು ಅದನ್ನು ಸರಿಯೆಂಬ ಅಭಿಪ್ರಾಯಕ್ಕೆ ಬರಬಾರದು ಎಂದೂ ಈ ಹದೀಸ್‌ನಿಂದ ತಿಳಿದು ಬರುತ್ತದೆಂದು ವಿದ್ವಾಂಸರು ಹೇಳಿರುತ್ತಾರೆ.

ಕೆಲವರಿಗೆ ಎಲ್ಲಾ ಕೆಲಸಗಳಲ್ಲೂ ಸಂಶಯವಿರುತ್ತದೆ. ವುಝೂ ಮಾಡಿ ಮುಗಿಯುವ ಹಂತಕ್ಕೆ ತಲುಪಿದಾಗ, ನಾನು ಮೊದಲು ನಿಯ್ಯತ್ ಹೇಳಿದ್ದೇನೋ ಇಲ್ಲವೋ ಎಂಬ ಸಂಶಯ. ವುಝೂ ಮುಗಿಸಿ ನಮಾಝಿಗೆ ನಿಂತಾಗ ವುಝೂ ಭಂಗವಾಗಿರಬಹುದೇ ಎಂಬ ಸಂಶಯ. ನಮಾಝಿನಲ್ಲಿಸುಜೂದ್‌ನಲ್ಲಿರುವಾಗ ನಾನು ರುಕೂಅ್ ಮಾಡಿ ಸುಜೂದ್‌ಗೆ ಬಂದಿರುವೆನೇ ಎಂಬ ಸಂಶಯ. ಇವೆಲ್ಲವೂ ಮನೋರೋಗವಾಗಿದೆ. ಹದೀಸಿನಲ್ಲಿರುವುದು ಇಂತಹ ಸಂಶ ಯದ ವಿಚಾರವಲ್ಲ, ಇಂತಹ ವಿಷಯಗಳಲ್ಲಿ ಸಂಶಯವಿದ್ದರೂ ಅದಕ್ಕೆ ರಿಯಾಯಿತಿ ಇದೆ.

ನಮಾಝಿನಲ್ಲಿ ಅಧೋವಾಯು ಹೊರಟಿದೆಯೇ ಎಂಬ ಸಂಶಯವಾಗುವವರ ಕುರಿತು ಪ್ರವಾದಿಯವರು(ಸ) ಹದೀಸ್ ವಚನವೊಂದರಲ್ಲಿ ಈ ರೀತಿ ಹೇಳೀರುವರು, ''ಶಬ್ದ, ವಾಸನೆ ಅನುಭವಕ್ಕೆ ಬರದೆ ಯಾರೂ ನಮಾಝುನ್ನು ತೊರೆಯಬೇಕಾದ ಅಗತ್ಯವಿಲ್ಲ.''

ಸಂಶಯಾಸ್ಪದ ವಿಷಯಗಳಿಂದ ಸತ್ಯವಿಶ್ವಾಸಿಗಳು ಸದಾ ದೂರ ಉಳಿಯಬೇಕೆಂದು ಈ ಹದೀಸ್ ಕಲಿಸುತ್ತದೆ ಎಂದೂ ವಿದ್ವಾಂಸರು ಹೇಳಿರುತ್ತಾರೆ. ಇನ್ನೊಬ್ಬರಿಗೆ ಆರೋಪಿಸಲು ಸಾಧ್ಯವಾಗುವಂತಹ ಅವಕಾಶವನ್ನು ಮಾಡಿಕೊಡಬಾರದು. ಅವನ ವ್ಯಕ್ತಿತ್ವ ಮತ್ತು ಚಾರಿತ್ರ್ಯವು ಸದಾ ಬೇರೆಯವರಿಗೆ ಸಂಶಯಕ್ಕೆ ಆಸ್ಪದವಿಲ್ಲದಂತೆ ಇರಬೇಕು. ಸಂಶಯಾಸ್ಪದ ವಿಷಯಗಳಿಂದ, ಸಂದರ್ಭಗಳಿಂದ ದೂರವಿರುವುದೇ ಅದಕ್ಕಿರುವ ದಾರಿ. ಸಂಶಯಾಸ್ಪದ ವಿಷಯಗಳಲ್ಲಿ ಸಿಲುಕಿಕೊಂಡವರಿಗೆ ಅವರ ಬಗ್ಗೆ ಬೇರೆಯವರು ಆರೋಪ ಹೊರಿಸುತ್ತಾರೆ ಎಂದು ದೂರು ಹೇಳಲು ಯಾವುದೇ ಅವಕಾಶವಿರುವುದಿಲ್ಲ.



# 17. ಪ್ರಮಾದ, ಮರೆವು ಮತ್ತು ನಿರ್ಬಂಧಿತಾವಸ್ಥೆ

عَنِ ابْنِ عَبَّاسٍ رَضِيَ اللهُ عَنْهُ أَنَّ رَسُولَ اللَّهِ ﷺ قَالَ إِنَّ اللهَ تَجَاوَزَ عَنْ أُمَّتِي الْخَطَأَ وَالنِّسْيَانَ وَمَا اسْتُكْرِهُوا عَلَيْهِ. (دارقطني، طبراني)

ಇಬ್ನ್ ಅಬ್ಬಾಸ್(ರ) ವರದಿ ಮಾಡಿರುವರು. ಪ್ರವಾದಿ(ಸ) ಹೇಳಿರುವರು, ''ನನ್ನ ಸಮುದಾಯವು ಪ್ರಮಾದ, ಮರೆವು ಮತ್ತು ನಿರ್ಬಂಧಿತಾವಸ್ಥೆಯಲ್ಲಿ ಮಾಡಿದ ತಪ್ಪುಗಳನ್ನು ಅಲ್ಲಾಹನು ಕ್ಷಮಿಸಿರುವನು.'' (ದಾರಕುತ್ನಿ , ತಬ್ರಾನಿ)

ಸರ್ವಶಕ್ತನಾದ ಅಲ್ಲಾಹನಿಗೆ ತನ್ನ ದಾಸರ ಬಗ್ಗೆ ಇರುವ ಅಪಾರ ಕರುಣೆ ಮತ್ತು ದಯೆಯನ್ನು ತೋರಿಸುವ ಪ್ರವಾದಿ ವಚನ ಇದಾಗಿದೆ. ಇಲ್ಲಿ ಬಿಟ್ಟು ಬಿಟ್ಟಿರುವನು (ತಜಾವಝ) ಎಂದು ಹೇಳಿರುವುದರ ಉದ್ದೇಶವು ಅದನ್ನು ವಿಚಾರಣೆಗೆ ಪರಿಗಣಿಸದೆ, ಶಿಕ್ಷಿಸದೆ ಬಿಟ್ಟು ಬಿಡುವನು ಎಂದಾಗಿದೆ. ಅಲ್ಲಾಹನು ತನ್ನ ಸಮುದಾಯವನ್ನು ಕ್ಷಮಿಸಿರುವನು ಎಂದು ಹೇಳಿರುವುದನ್ನು ತನಗೆ ನೀಡಿದ ಕ್ಷಮೆ ಎಂಬ ರೀತಿಯಲ್ಲಿ ಪ್ರವಾದಿಯವರು(ಸ) ವರ್ಣಿಸಿರುವರು. ಅವರು ಅಲ್ಲಾಹನ ಈ ಕ್ಷಮೆಗಾಗಿ ಬಹಳ ಆಗ್ರಹಿಸಿದ್ದರು ಮತ್ತು ಅದಕ್ಕಾಗಿ ಪ್ರಾರ್ಥಿಸಿದರು. ಆ ಪ್ರಾರ್ಥನೆಯು ಸ್ವೀಕೃತವಾಗಿ ಅದನ್ನು ಪ್ರವಾದಿಯವರು(ಸ) ಅಲ್ಲಾಹನು ತನ್ನೊಂದಿಗೆ ತೋರಿಸಿದ ಔದಾರ್ಯ ಮತ್ತು ಆದರ ಎಂಬ ರೀತಿಯಲ್ಲಿ ವರ್ಣಿಸಿರುವುದನ್ನು ಈ ಪ್ರವಾದಿ ವಚನದಲ್ಲಿ ಗಮನಿಸಬಹುದಾಗಿದೆ. ಪ್ರವಾದಿಯವರಿಗೆ(ಸ) ಈ ಸಮುದಾಯದೊಂದಿಗೆ ಅಪಾರವಾದ ಕರುಣೆ ಮತ್ತು ದಯೆ ಇತ್ತು. ನಿರ್ಬಂಧಿತಾವಸ್ಥೆಯಲ್ಲಿ, ತಿಳಿಯದೆ ಮರೆವಿನಿಂದ ಇನ್ನೊಬ್ಬ ವ್ಯಕ್ತಿಯ ಪ್ರಾಣ ಮತ್ತು ಸೊತ್ತನ್ನು ನಷ್ಟ ಪಡಿಸಿದರೆ ಅವನನ್ನು ಈ ಲೋಕದ ಜನರು ನಿರಪರಾಧಿ ಎನ್ನುವುದಿಲ್ಲ, ನಷ್ಟದಾರರಿಗೆ ನಷ್ಟ ಪರಿಹಾರ ನೀಡಬೇಕು. ಕ್ರಿಮಿನಲ್ ಅಪರಾಧವಾದರೆ ಶಿಕ್ಷೆಯನ್ನು ಅನುಭವಿಸಬೇಕು. ಇದು ಇಹಲೋಕದ ನೀತಿ-ನಿಯಮ. ಇಹಲೋಕದ ಕೋರ್ಟುಗಳಲ್ಲಿ ಈ ರೀತಿಯ ಕೇಸುಗಳನ್ನು ಪರಿಗಣಿಸುವುದು ಈ ನೀತಿ ನಿಯಮದ ಬುನಾದಿಯಲ್ಲಿ, ಜನ ಜೀವನ ಸುರಕ್ಷಿತವಾಗಿರಲು ಮತ್ತು ಊರಿನಲ್ಲಿ ಶಾಂತಿ ಸಮಾಧಾನ ನೆಲೆಸಲು ಈ ರೀತಿ ಮಾಡಬೇಕಾಗುತ್ತದೆ.

ಆದರೆ ಪರಲೋಕದಲ್ಲಿ ಅಲ್ಲಾಹನ ನ್ಯಾಯಾಲಯದಲ್ಲಿ ಮನಃಪೂರ್ವಕವಾಗಿ ಅಲ್ಲದೆ,

ತಿಳಿಯದೆ ಮರೆವಿನಿಂದ, ನಿರ್ಬಂಧಿತಾವಸ್ಥೆಯಲ್ಲಿ ಮಾಡಿದ ತಪ್ಪುಗಳಿಗೆ ವಿಚಾರಣೆ ಮತ್ತು ಶಿಕ್ಷೆ ವಿಧಿಸುವುದರಿಂದ ಅವನು ದಾಕ್ಷಿಣ್ಯದೊಂದಿಗೆ ವಿನಾಯಿತಿ ತೋರುವವನು. ಜನರನ್ನು ಹೇಗಾದರೂ ಮಾಡಿ ಶಿಕ್ಷಿಸಬೇಕು ಎಂಬುದು ಅಲ್ಲಾಹನ ನಿಯಮವಲ್ಲ. ಸಾಧ್ಯವಿರುವಷ್ಟರ ಮಟ್ಟಿಗೆ ಅವರನ್ನು ಶಿಕ್ಷೆಯಿಂದ ಪಾರುಗೊಳಿಸಬೇಕು ಎಂಬುದು ಅಲ್ಲಾಹನ ನಿಯಮ. ಆದುದ ರಿಂದ ಮನಸಾರೆ, ಉದ್ದೇಶಪೂರ್ವಕವಾಗಿ ಮಾಡದೆ ಇರುವ ತಪ್ಪುಗಳನ್ನು ತಿಳಿದು ಮಾಡಿದ್ದಲ್ಲ ಎಂಬ ಕಾರಣದಿಂದ ಕಡೆಗಣಿಸಿ ಶಿಕ್ಷೆಯನ್ನು ಜಾರಿಗೊಳಿಸದೆ ಬಿಟ್ಟು ಬಿಡಲಾಗುತ್ತದೆ.

ಮೂರು ಅವಸ್ಥೆಯಲ್ಲಿ ಎಸಗಲಾಗುವ ತಪ್ಪುಗಳು ಅಲ್ಲಾಹನ ಕ್ಷಮೆಗೆ ಅರ್ಹವಾಗಿರುತ್ತ ದೆ. ಒಂದು ತಿಳಿಯದೆ ಮಾಡಿದ್ದು. 'ಖತಅ' ಎಂಬುದು ಮೂಲ ಪದವಾಗಿದೆ. ಇದಕ್ಕೆ ಅರಿಯ ದೆ, ತಿಳಿಯದೆ ಮಾಡಿದ್ದು, ತಪ್ಪು, ಕೆಡುಕು ಎಂಬಿತ್ಯಾದಿ ಅರ್ಥಗಳಿವೆ. ಇಲ್ಲಿ ಮೊದಲ ಎರಡು ಅರ್ಥಗಳನ್ನು ಉದ್ದೇಶಿಸಲಾಗಿದೆ. ತಿಳಿಯದೆ ಮಾಡಿದ ತಪ್ಪುಗಳು, ಅರಿಯದೆ ಸಂಭವಿಸಿದ್ದು ಮನಃಪೂರ್ವಕ ಮಾಡಿರುವುದರ ವಿರೋಧ ಪದಗಳಾಗಿವೆ. ತಪ್ಪು, ಅನ್ಯಾಯ ಎಂಬುದು ಸರಿ ಮತ್ತು ನ್ಯಾಯದ ವಿರುದ್ಧ ಪದಗಳಾಗಿವೆ. ಈ ರೀತಿಯ್ಲು ತಪ್ಪು ಮತ್ತು ಅನ್ಯಾಯಗಳು ಇಹ ಲೋಕದಲ್ಲೂ ಪರಲೋಕದಲ್ಲೂ ಏಕ ಪ್ರಕಾರ ವಿಚಾರಣೆಗೆ ಅರ್ಹವಾಗಿರುತ್ತದೆ. ಓರ್ವ ವ್ಯಕ್ತಿ ತನಗೆ ಸೇರಬೇಕಾದದ್ದು ಎಂದು ತಿಳಿದು ಹಣವನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ ಎಂದಿಟ್ಟುಕೊ ಳ್ಳೋಣ. ವಾಸ್ತವದಲ್ಲಿ ಅದು ಬೇರೊಬ್ಬರಿಗೆ ಸೇರಬೇಕಾದುದಾಗಿತ್ತು. ಆದರೆ ಅವರಿಗೆ ತಿಳಿಯ ದೆ ಹಾಗೆ ಸಂಭವಿಸಿತು. ಇಂತಹ ತಿಳುವಳಿಕೆಯ ಕೊರತೆಯು ಕ್ಷಮೆಗೆ ಅರ್ಹವಾಗುತ್ತದೆ. ಆದರೆ ಬೇರೆಯವರದ್ದೆಂದು ತಿಳಿದೂ ಯಾರಾದರೂ ಹಣವನ್ನು ತಮ್ಮದಾಗಿಸಿಕೊಂಡರೆ ಅದು ತಿಳಿಯದೆ ಮಾಡಿದ್ದಲ್ಲ, ಅದು ಅಪರಾಧವಾಗಿದೆ. ಪವಿತ್ರ ಕುರ್‌ಆನ್ ಹೇಳುತ್ತದೆ.

''ನೀವು ತಿಳಿಯದೆ ಹೇಳಿಬಿಟ್ಟ ಮಾತಿಗಾಗಿ ನಿಮ್ಮ ಮೇಲೇನೂ ದೋಷವಿಲ್ಲ, ಆದರೂ ನೀವು ಉದ್ದೇಶಪೂರ್ವಕವಾಗಿ ಹೇಳಿದ ಮಾತಿನ ಬಗ್ಗೆ ಖಂಡಿತ ದೋಷವಿದೆ.''

(ಅಲ್ ಅಹ್‌ಝಾಬ್:5)

ಮರೆವಿನಿಂದ ಸಂಭವಿಸಿದ ತಪ್ಪುಗಳು ಕ್ಷಮೆಗೆ ಅರ್ಹವಾದ ಎರಡನೆಯ ವಿಷಯವಾಗಿದೆ. ನೀವು ಒಬ್ಬರೊಂದಿಗೆ ಸಾಲ ಪಡೆದಿರುತ್ತೀರಿ. ಮರಳಿ ನೀಡಬೇಕಾದ ಸಮಯ ಬಂದಾಗ ನಿಮಗದು ಮರೆತು ಹೋಯಿತು. ಒಂದು ಹೊತ್ತಿನ ನಮಾಝ್ ನಿರ್ವಹಿಸಲು ನಿಮಗೆ ಮರೆತು ಹೋಯಿತು. ಇಂತಹ ತಪ್ಪುಗಳು ಕ್ಷಮಿಸಲ್ಪಡುತ್ತದೆ. ಆದರೆ ನೆನಪಾದ ಕೂಡಲೇ ಅದನ್ನು ನಿರ್ವಹಿಸಬೇಕು. ಪ್ರವಾದಿ ಮುಹಮ್ಮದ್‌ರು(ಸ) ಹೇಳಿರುವರು. 'ಒಬ್ಬನು ನಮಾಝಿನ ಸಮಯವಾದಾಗ ನಿದ್ದೆ ಮಾಡಿದನು ಅಥವಾ ಮರೆತು ಬಿಟ್ಟನು. ಆಗ ಅವನು ನೆನಪಾದಾಗ ನಮಾಝ್ ನಿರ್ವಹಿಸಬೇಕು. ಹಾಗಲ್ಲದೆ ಅದಕ್ಕೆ ಬೇರೆ ಪ್ರಾಯಶ್ಚಿತ್ತವಿಲ್ಲ.'

ತಿಳಿಯದೆ ಮಾಡಿದ ಮತ್ತು ಮರೆವಿನಿಂದ ಮಾಡಿದ ತಪ್ಪುಗಳಿಗೆ ಕ್ಷಮೆ ಸಿಗುವುದು ಪರ ಲೋಕದಲ್ಲಿ ಮಾತ್ರ ಎಂದು ಕರ್ಮಶಾಸ್ತ್ರ ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. ಒಬ್ಬನ ಮರೆವು ಅಥವಾ ತಿಳುವಳಿಕೆಯ ಕೊರತೆಯಿಂದ ವ್ಯಕ್ತಿಗೆ ಅಥವಾ ಸಮುದಾಯಕ್ಕೆ ನಷ್ಟವಾದರೆ, ಅವನು

ಅದರ ಪರಿಹಾರ ನೀಡಲು ಬಾಧ್ಯಸ್ಥನಾಗುತ್ತಾನೆ. ಇದನ್ನು ವಿವರಿಸುತ್ತಾ ಪವಿತ್ರ ಕುರ್‌ಆನ್ ಹೇಳುತ್ತದೆ. 'ಒಬ್ಬನು ತಿಳಿಯದೆ ಇನ್ನೊಬ್ಬ ವ್ಯಕ್ತಿಯನ್ನು ಕೊಂದು ಬಿಟ್ಟರೆ ಪ್ರಾಯಶ್ಚಿತ್ತ ಮತ್ತು ನಷ್ಟ ಪರಿಹಾರವನ್ನು ನೀಡಬೇಕಾದುದು ಕಡ್ಡಾಯವಾಗಿರುತ್ತದೆ.'

ಮೂರನೆಯದು ನಿರ್ಬಂಧಿತಾವಸ್ಥೆಯಲ್ಲಿ ಮಾಡಲ್ಪಡುವ ಅಪರಾಧಗಳು. ಇವು ಕ್ಷಮೆಗೆ ಅರ್ಹವಾಗಿದೆ. ಇಚ್ಛಾ ಸ್ವಾತಂತ್ರ್ಯವು ನಿಷೇಧಿಸಲ್ಪಡುವ ಅವಸ್ಥೆಗೆ ನಿರ್ಬಂಧಿತಾವಸ್ಥೆ ಎನ್ನಲಾಗುತ್ತದೆ. ಇದು ಎರಡು ರೀತಿಯಲ್ಲಿ ಸಂಭವಿಸಬಹುದು. ಅನಿವಾರ್ಯ ಪರಿಸ್ಥಿತಿಯಲ್ಲಿ ನಿಷಿದ್ಧ ಆಹಾರವಲ್ಲದೆ ಹಸಿವನ್ನು ತಣಿಸಲು ಬೇರೆ ಏನೂ ಲಭ್ಯವಿಲ್ಲದಾಗ ಮನುಷ್ಯನು ನಿಷಿದ್ಧ ವಸ್ತುಗಳನ್ನು ತಿನ್ನಲು ನಿರ್ಬಂಧಿತನಾಗುತ್ತಾನೆ. ಇದನ್ನು ಪರಿಸ್ಥಿತಿಯಿಂದ ಉಂಟಾಗುವ ನಿರ್ಬಂಧಿತಾವಸ್ಥೆ ಎನ್ನಬಹುದು. ತನಗಿಂತ ಶಕ್ತಿಯುಳ್ಳ ಇನ್ನೊಬ್ಬ ವ್ಯಕ್ತಿ ಅಥವಾ ತನ್ನ ಮೇಲಿನ ಅಧಿಕಾರಿ ಒಂದು ಕೆಡುಕನ್ನು ಮಾಡಲು ಒತ್ತಾಯ ಪಡಿಸುವುದು, ಅದನ್ನು ಮಾಡದಿದ್ದರೆ ಮರಣದಂತಹ ಶಿಕ್ಷೆಯನ್ನು ನೀಡುವ ಭಯವಿರುವುದು ಮನುಷ್ಯ ನಿರ್ಮಿತವಾದ ನಿರ್ಬಂಧಿತಾವಸ್ಥೆಯಾಗಿದೆ. ಇಂತಹ ಪರಿಸ್ಥಿತಿಯಲ್ಲಿ ನಿಷಿದ್ಧ ಕೆಲಸಗಳನ್ನು ಮಾಡುವುದಕ್ಕೆ ಅನುಮತಿ ಇದೆ. ಆದರೆ ನಿರ್ಬಂಧಿತಾವಸ್ಥೆಯಲ್ಲಿ ಮಾಡುವ ಕೆಲಸದಿಂದ ಬೇರೆಯವರಿಗೆ ಪರಿಹಾರವಿಲ್ಲದ ನಷ್ಟ ಸಂಭವಿಸುವ ಅಪಾಯವಿದ್ದರೆ, ಅಂತಹ ಕೆಲಸವನ್ನು ಮಾಡುವ ಅಧಿಕಾರ ಯಾರಿಗೂ ಇಲ್ಲ ಎಂದು ಶರೀಅತ್ ನಮ್ಮನ್ನು ಎಚ್ಚರಿಸುತ್ತದೆ. ಕೊಲೆ, ಸ್ತ್ರೀಯ ಮೇಲೆ ಅತ್ಯಾಚಾರ ಮಾಡುವುದು ಮುಂತಾದ ಕೆಡುಕುಗಳು ಇದಕ್ಕೆ ಉದಾಹರಣೆಗಳಾಗಿವೆ. ಈ ರೀತಿಯ ಕೆಡುಕುಗಳನ್ನು ಮಾಡಿದರೆ ನಿರ್ಬಂಧಿತಾವಸ್ಥೆಯಲ್ಲಿ ಮಾಡಿದ್ದರೂ ಇಹಪರದಲ್ಲಿ ವಿಚಾರಣೆಯು ನಡೆಸಲ್ಪಡುತ್ತದೆ.



# 18. ಕರುಣಾಳುವಿನ ಶೀತಲ ಛಾಯೆಯಲ್ಲಿ

عَنْ أَبِي هُرَيْرَةَ رَضِيَ اللَّهُ عَنْهُ عَنِ النَّبِيِّ ﷺ قَالَ سَبْعَةٌ يُظِلُّهُمُ اللَّهُ فِي ظِلِّهِ
يَوْمَ لَا ظِلَّ إِلَّا ظِلُّه : الْإِمَامُ الْعَادِلُ وَشَابٌّ نَشَأَ فِي عِبَادَةِ اللَّهِ
وَرَجُلٌ قَلْبُهُ مُعَلَّقٌ بِالْمَسَاجِدِ وَرَجُلَانِ تَحَابَّا فِي اللَّهِ اجْتَمَعَاعلى ذٰلِكَ
وَتَفَرَّقَا عَلَيْهِ وَرَجُلٌ ذَكَرَ اللهَ خَالِيًا فَفَاضَتْ عَيْنَاهُ وَرَجُلٌ دَعَتْهُ امْرَأَةٌ ذَاتَ
مَنْصِبٍ وَجَمَالٍ فَقَالَ إِنِّي أَخَافُ اللَّهَ رَبَّ الْعَالَمِينَ وَرَجُلٌ تَصَدَّقَ
بِصَدَقَةٍ فَأَخْفَاهَا حَتَّى لَا تَعْلَمَ شِمَالُهُ مَا تُنْفِقُ يَمِينُهُ. (متفق عليه)

ಅಬೂ ಹುರೈರಾ(ರ) ವರದಿ ಮಾಡಿರುತ್ತಾರೆ. ಪ್ರವಾದಿ(ಸ) ಹೇಳಿರುವರು, 'ಅಲ್ಲಾಹನ ನೆರಳಲ್ಲದೆ ಬೇರೆ ಯಾವ ನೆರಳೂ ಇಲ್ಲದ ದಿನ ಏಳು ಜನರಿಗೆ ಅಲ್ಲಾಹನು ತನ್ನ ನೆರಳನ್ನು ನೀಡುವನು. ನ್ಯಾಯವಂತ ನಾಯಕ, ದೇವಾರಾಧನೆಯಲ್ಲಿ ನಿರತನಾಗಿರುವ ಯುವಕ, ಮಸೀದಿಯೊಂದಿಗೆ ಮನಸ್ಸು ಜೋಡಿಸಲ್ಪಟ್ಟ ಮನುಷ್ಯ, ಅಲ್ಲಾಹನ ಪ್ರೀತಿಗಾಗಿ ಒಟ್ಟು ಸೇರಿದ ಅಲ್ಲಾಹನ ಹೆಸರಿನಲ್ಲಿ ಪರಸ್ಪರ ಪ್ರೀತಿಸಿದ ಮತ್ತು ಅದಕ್ಕಾಗಿಯೇ ಅಗಲಿದ ವ್ಯಕ್ತಿಗಳು. ಏಕಾಂತದಲ್ಲಿ ಅಲ್ಲಾಹನನ್ನು ಸ್ಮರಿಸುತ್ತಾ ಕಣ್ಣೀರಿಳಿಸಿದ ವ್ಯಕ್ತಿ, ಅಧಿಕಾರ ಮತ್ತು ಸೌಂದರ್ಯವುಳ್ಳ ಯುವತಿ ಕರೆದಾಗ 'ನಾನು ಸರ್ವಲೋಕ ಪಾಲಕನಾದ ಅಲ್ಲಾಹನನ್ನು ಭಯಪಡುತ್ತೇನೆ' ಎಂಬ ಉತ್ತರ ನೀಡಿದ ವ್ಯಕ್ತಿ, ದಾನ ನೀಡುವಾಗ ತನ್ನ ಬಲಗೈ ನೀಡಿದುದನ್ನು ಎಡಗೈ ತಿಳಿಯದಂತೆ ಅದನ್ನು ಅಡಗಿಸಿದ ವ್ಯಕ್ತಿ.' (ಮುತ್ತಫಕುನ್ ಅಲೈಹಿ)

ವಿಚಾರಣೆಯ ದಿನವು ಸೃಷ್ಟಿಗಳ ಪಾಲಿಗೆ ಅತಿಭಯಾನಕ ಮತ್ತು ಗಾಬರಿಗೊಳಿಸುವ ಸಂದಿಗ್ಧ ದಿನವಾಗಿರುವುದು ಎಂದು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳು ಅನೇಕ ಕಡೆಗಳಲ್ಲಿ ನಮ್ಮನ್ನು ಎಚ್ಚರಿಸಿದೆ. ನರಕಕ್ಕಾದರೂ ಸರಿ ಒಮ್ಮೆ ಇಲ್ಲಿಂದ ಪಾರಾಗಿ ಎಲ್ಲಿಗಾದರೂ ಹೋದರೆ ಸಾಕು ಎಂದು ಆ ದಿನದ ಬಗ್ಗೆ ಕೆಲವರು ಭಾವಿಸುತ್ತಿರುವುದಾಗಿ ಹೇಳಲಾಗಿದೆ. ಆದರೆ ಭಯಭೀತಿ ತುಂಬಿದ ಆ ದಿನದಂದು-ಇದ್ಯಾವುದೂ ಬಾಧಿಸದ ಕೆಲವು

ವ್ಯಕ್ತಿಗಳು ಅವರಲ್ಲಿ ಇರುವರು. ಅವರಿಗೆ ಅಲ್ಲಾಹನ ಅರ್ಶ್‌ನ ನೆರಳು ಸಿಗುವುದು. ಅವನ ಕರುಣೆ ಮತ್ತು ಅನುಗ್ರಹಗಳು ಅವನನ್ನು ಸುತ್ತುವರಿಯುವುದು. ಅಲ್ಪ ಭೀತಿಯೂ ಅವರನ್ನು ಬಾಧಿಸದು. ''ನಿಮಗೆ ವಾಗ್ದಾನ ಮಾಡಲಾಗಿರುವ ದಿನವಲ್ಲವೇ ಇದು'' ಎಂದು ಹೇಳುತ್ತಾ ದೇವಚರರು ಅವರನ್ನು ಸ್ವಾಗತಿಸುವರು.

ಈ ರೀತಿಯ ನೆರಳು ದೊರೆತವರು ಯಾರಾಗಿರಬಹುದು? ಆ ಕೂಟದಲ್ಲಿ ಸೇರಲು ನಮಗೂ ಅವಕಾಶವೇನಾದರೂ ಇದೆಯೇ? ಈ ಮೇಲಿನ ಹದೀಸ್ ವಚನವು ನಮ್ಮ ಪ್ರಶ್ನೆಗಳಿಗೆ ಉತ್ತರವಾಗಿದೆ. ಅಂತ್ಯದಿನದಂದು ಶಾಂತಿಯ ಶೀತಲ ಛಾಯೆಯು ಲಭಿಸುವ ಏಳು ವಿಭಾಗದ ಜನರನ್ನು ಹದೀಸಿನಲ್ಲಿ ಪ್ರಸ್ತಾಪಿಸಲಾಗಿದೆ. ಅಂದರೆ ಈ ಏಳು ವಿಭಾಗದ ಜನರಿಗೆ ಮಾತ್ರ ಈ ನೆರಳು ಸಿಗುತ್ತದೆ ಎಂದಲ್ಲ. ಏಳಕ್ಕಿಂತ ಹೆಚ್ಚಿನ ಜನರ ಬಗ್ಗೆ ವಿವರಿಸಿರುವ ಬೇರೆ ಪ್ರವಾದಿ ವಚನಗಳಿವೆ. ಅಲ್ಲಾಹನ ವಿಶೇಷ ಕರುಣೆ ಲಭಿಸುವ ಏಳು ವಿಭಾಗದ ಜನರ ಬಗ್ಗೆ ಮಾತ್ರ ಈ ಹದೀಸ್‌ನಲ್ಲಿ ಪ್ರಸ್ತಾಪಿಸಲಾಗಿದೆ. ಸ್ವಲ್ಪ ಆಳವಾಗಿ ಚಿಂತನೆ ನಡೆಸಿದರೆ ಈ ಏಳು ವರ್ಗದಲ್ಲಿ ಎಲ್ಲಾ ರೀತಿಯ ದೇವಭಕ್ತರು ಒಳಗೊಳ್ಳುತ್ತಾರೆಂಬುದನ್ನು ಅರ್ಥ ಮಾಡಿಕೊಳ್ಳಬಹುದು.

## 1) ನ್ಯಾಯವಂತ ನಾಯಕ (ಇಮಾಮ್)

ಇಮಾಮ್ ಎಂಬ ಪದದ ಮೂಲಕ ಮುಖ್ಯವಾಗಿ ಮುಸ್ಲಿಮ್ ಸಮುದಾಯದ ಆಡಳಿತಗಾರರನ್ನು ಉದ್ದೇಸಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಆದರೂ ಎಲ್ಲ ಸ್ಥಳಗಳಲ್ಲೂ ನಾಯಕರನ್ನು ಈ ಹದೀಸ್ ಉದ್ದೇಶಿಸುತ್ತದೆ. ಅಲ್ಲಾಹನ ಆದೇಶಕ್ಕೆ ಅನುಸಾರ ತನ್ನ ಕೈ ಕೆಳಗಿನವರನ್ನು ನೋಡಿಕೊಳ್ಳುವುದು ನಾಯಕನ ನೀತಿ ಎಂಬುದನ್ನು ಇಲ್ಲಿ ಹೇಳಲಾಗಿದೆ.

ನ್ಯಾಯವಂತ ನಾಯಕರನ್ನು ಏಳರಲ್ಲಿ ಪ್ರಥಮವಾಗಿ ಪ್ರಸ್ತಾಪಿಸಲಾಗಿದೆ. ನೇತೃತ್ವದ ಮಹತ್ವ ಮತ್ತು ಗೌರವವನ್ನು ಇದು ವ್ಯಕ್ತ ಪಡಿಸುತ್ತದೆ. ನಾಯಕ ನ್ಯಾಯವಂತರ ಮಾದರಿಯಾಗಿದ್ದಾನೆ. ನಾಯಕನ ಗುಣವೇ ಅನುಯಾಯಿಗಳ ಗುಣವಾಗಿ ಪರಿಣಮಿಸುತ್ತದೆ. ಯಥಾ ರಾಜ ತಥಾ ಪ್ರಜಾ ಎಂಬ ಹೇಳಿಕೆ ಬಹಳ ಪ್ರಸಿದ್ಧವಾಗಿದೆಯಲ್ಲವೇ?

## 2) ದೇವಾರಾಧನೆಯಲ್ಲಿ ತಲ್ಲೀನನಾಗಿರುವ ಯುವಕ

ಅಲ್ಲಾಹನನ್ನು ಅನುಸರಿಸುತ್ತಾ ಆರಾಧಿಸುತ್ತಾ, ಯುವ ಪ್ರಾಯವನ್ನು ಮುಗಿಸಿದ ಮನುಷ್ಯ. ಯೌವನವು ಮನುಷ್ಯ ಜೀವನದ ಸುವರ್ಣ ಕಾಲವಾಗಿದೆ. ಯುವ ಪ್ರಾಯದಲ್ಲಿ ಜೀವನ ಪರಿಪೂರ್ಣವಾಗುತ್ತದೆ. ಆಗ ಅವನಲ್ಲಿರುವ ವಿಕಾರಗಳು, ಶಕ್ತಿ ಸಾಮರ್ಥ್ಯಗಳು ವಿಜೃಂಭಿಸುತ್ತದೆ. ವ್ಯಕ್ತಿಗೆ ಹೆಚ್ಚು ಸ್ವಾತಂತ್ರ್ಯ ಲಭಿಸುವ ವಯಸ್ಸು ಇದುವೇ ಆಗಿರುತ್ತದೆ. ಅದೇ ವೇಳೆ ಶೈತಾನನಿಗೆ ಮನುಷ್ಯನನ್ನು ಸುಲಭವಾಗಿ ವಶೀಕರಿಸಲು ಸಾಧ್ಯವಾಗುವ ಕಾಲ ಘಟ್ಟವು ಇದುವೇ ಆಗಿರುತ್ತದೆ. ಸದ್ವಿಚಾರಗಳು ಪಿಶಾಚಿಗೆ ಸಂಬಂಧ ಪಟ್ಟಂತೆ ಒಂದು ತಡೆ

ಗೋಡೆಯಾಗಿದೆ. ವಿಕಾರಗಳು ಹಾದು ಹೋಗಲು ಸಾಧ್ಯವಿರುವ ಬಾಗಿಲುಗಳಂತೆ ಯುವ ಪ್ರಾಯದಲ್ಲಿ ವ್ಯಕ್ತಿಯಲ್ಲಿ ವಿಚಾರಗಳಿಗಿಂತ ವಿಕಾರಗಳು ಹೆಚ್ಚು ಪ್ರಾಬಲ್ಯ ಹೊಂದಿರುತ್ತದೆ ಯಲ್ಲವೇ? ಆದ ಕಾರಣದಿಂದಲೇ ಯುವ ಪ್ರಾಯದಲ್ಲಿ ಹೆಚ್ಚಿನ ಯುವಕರು ಹಾದಿ ತಪ್ಪುತ್ತಾರೆ. ಈ ವೇಳೆ ವಿಚಾರ ಮತ್ತು ವಿವೇಕದ ಸಹಾಯದಿಂದ ದೇವನ ಅನುಸರಣೆ ಮತ್ತು ಆರಾಧ ನೆಯಲ್ಲಿ ಕಳೆಯುವ ವ್ಯಕ್ತಿ ವಾಸ್ತವದಲ್ಲಿ ಓರ್ವ ಸಾಹಸಿಯಾಗಿರುತ್ತಾನೆ. ತುಂಬಿ ತುಳುಕುವ ವಿಕಾರಗಳನ್ನು ನಿಯಂತ್ರಿಸುವಲ್ಲಿ, ಶೈತಾನನನ್ನು ಸೋಲಿಸುವಲ್ಲಿ ವಿಜಯಿಯಾಗುವ ಸಾಹಸಿ.

ಬಾಲ್ಯಕಾಲವನ್ನು ಹೆತ್ತವರು ಮತ್ತು ಗೆಳೆಯರ ಒಡನಾಟದಲ್ಲಿ ವ್ಯಕ್ತಿ ಕಳೆಯುತ್ತಾನೆ. ಈ ಸಂಬಂಧ ಮತ್ತು ಅದರ ಉದ್ದೇಶ ಹಾಗೂ ಮಾರ್ಗದರ್ಶನದಂತೆ ಅವನ ಚಾರಿತ್ರ್ಯವು ರೂಪುಗೊಳ್ಳುತ್ತವೆ. ಮುದಿ ಪ್ರಾಯದಲ್ಲಿ ಸ್ವ ಅನುಭವಗಳು ಮತ್ತು ವಾರ್ಧಕ್ಯಸಹಜ ತೊಂದ ರೆಗಳೊಂದಿಗೆ ಮನುಷ್ಯ ಜೀವಿಸುತ್ತಾನೆ. ಅಂದು ಅವನ ಉದ್ದೇಶವನ್ನು ಅನುಸರಿಸಿಕೊಂಡು ಜೀವನವು ಇರುತ್ತದೆ.

ಮೇಲೆ ಪ್ರಸ್ತಾಪಿಸಲಾದ ಜೀವನದ ಎರಡು ಕಾಲಘಟ್ಟಗಳಿಗೆ ಯುವತ್ವವನ್ನು ಹೋಲಿಸ ಲಾಗದು. ಯೌವನವು ಪ್ರಸ್ತುತ ಎರಡು ರೀತಿಯ ಬಂಧನಗಳಿಂದಲೂ ಮುಕ್ತವಾಗಿರುತ್ತದೆ. ಯೌವನದಲ್ಲಿ ಅವನ ಸ್ವಂತ ಇಚ್ಛೆಯೇ ಅವನನ್ನು ಮುನ್ನಡೆಸುತ್ತದೆ. ಯೌವನದ ಕುದಿಯುವ ರಕ್ತದಲ್ಲಿ ಶೈತಾನನ ಮನೋಹರವಾದ ಪ್ರಲೋಭನೆಗಳಿಗೆ ಬಲಿ ಬೀಳದೆ ಅಲ್ಲಾಹನನ್ನು ಸ್ಮರಿಸುತ್ತಾ ಅವನನ್ನು ಅನುಸರಿಸಿ ಜೀವಿಸುವ ವ್ಯಕ್ತಿತ್ವದ ಗಟ್ಟಿತನ ಮತ್ತು ಸ್ಥೈರ್ಯವನ್ನು ಗೌರವಿಸುತ್ತಾ ಅಂತ್ಯ ದಿನದಂದು ಅಲ್ಲಾಹನು ತನ್ನ ಶೀತಲ ಛಾಯೆಯಲ್ಲಿ ಅವರಿಗೂ ರಕ್ಷಣೆ ಒದಗಿಸುವನು.

## 3) ಮಸೀದಿಯೊಂದಿಗೆ ಮನಸ್ಸು ಜೋಡಿಸಲ್ಪಟ್ಟವರು

ಅಲ್ಲಾಹನ ವಿಶೇಷ ಕರುಣೆಗೆ ಅರ್ಹರಾದ ಮೂರನೆಯ ವಿಭಾಗದ ಜನರು ಮಸೀದಿ ಯೊಂದಿಗೆ ಮನಸ್ಸು ಜೋಡಿಸಲ್ಪಟ್ಟವರು. ನಮಾಝ್, ದಿಕ್ರ್, ತಸ್ಬೀಹ್, ಇಲ್‌ತಿಕಾಫ್ ಎಂಬಿತ್ಯಾದಿ ಕೆಲಸಗಳಿಗಾಗಿ ಮಸೀದಿಯನ್ನು ಸಂದರ್ಶಿಸುತ್ತಿರುವುದು, ಮಸೀದಿಯನ್ನು ಪ್ರೀತಿಸುವುದು, ಅದರ ಸಂರಕ್ಷಣೆ ಮತ್ತು ಉನ್ನತಿಗಾಗಿ ಕಾಳಜಿ ವಹಿಸುವುದು, ಗಮನ ನೀಡುವುದು ಮುಂತಾದವುಗಳು ಇದರಲ್ಲಿ ಸೇರಿವೆ. ಮಸೀದಿಗಳು ಅಲ್ಲಾಹನ ಭವನಗಳಾಗಿವೆ. ಮಸೀದಿಯೊಂದಿಗಿನ ಪ್ರೀತಿ ಮತ್ತು ಶ್ರದ್ಧೆಯು ಅಲ್ಲಾಹನೊಂದಿಗಿನ ಭಯ-ಭಕ್ತಿಯ ಭಾಗವೇ ಆಗಿದೆ. 'ಅಲ್ಲಾಹ್ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿರುವ, ನಮಾಝ್ ಸಂಸ್ಥಾಪಿಸುವ, ಝಕಾತ್ ನೀಡುವ ಅಲ್ಲಾಹನನ್ನಲ್ಲದೆ ಬೇರೆ ಯಾರನ್ನೂ ಭಯಪಡದ ವ್ಯಕ್ತಿಗಳು ಮಾತ್ರ ಮಸೀ ದಿಯನ್ನು ಸಂಸ್ಕರಿಸುತ್ತಾರೆ ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ.

## 4) ಅಲ್ಲಾಹನಿಗಾಗಿ ಪ್ರೀತಿಸಿದವರು

ಅಲ್ಲಾಹನ ಹೆಸರಿನಲ್ಲಿ ಪ್ರೀತಿಸುವ ಅದಕ್ಕಾಗಿ ಒಂದು ಗೂಡುವ ಮತ್ತು ಬೇರ್ಪಡುವ ವ್ಯಕ್ತಿಗಳು ಅಲ್ಲಾಹನ ನೆರಳಿಗೆ ಅರ್ಹರಾದ ನಾಲ್ಕನೆಯ ವಿಭಾಗದವರು. ಇಸ್ಲಾಮಿನ ಆದರ್ಶದ ಹೆಸರಿನಲ್ಲಿ ಒಂದುಗೂಡುವ ಮತ್ತು ಒಂದುಗೂಡುವಿಕೆಗೆ ತೊಂದರೆಯಾಗದಂತೆ ಪರಸ್ಪರ ಬೇರ್ಪಡುವ ವ್ಯಕ್ತಿಗಳು ಇವರಾಗಿರುತ್ತಾರೆ. ನಿಮ್ಮ ಸುತ್ತ ಮುತ್ತ ಎಲ್ಲ ರೀತಿಯ ಜನರಿರ ಬಹುದು. ಅವರಲ್ಲಿ ಯಾರು ಬೇಕಿದ್ದರೂ ನಿಮ್ಮ ಜೊತೆ ಸೇರಬಹುದು. ಆದರೆ ಹೆಚ್ಚು ಧಾರ್ಮಿಕ ಜ್ಞಾನವುಳ್ಳ, ದೇವಭಯವುಳ್ಳ ವ್ಯಕ್ತಿಗಳನ್ನು ನೀವು ನಿಮ್ಮ ಆತ್ಮೀಯ ಗೆಳೆಯರಾಗಿ ಆರಿಸಿಕೊಂಡರೆ, ಅದು ಅಲ್ಲಾಹನ ಹೆಸರಿನಲ್ಲಿರುವ ಸ್ನೇಹ ಸಂಬಂಧವೆನಿಸುತ್ತದೆ. ಆದರ್ಶಮಯ ಗೆಳೆತನವಾಗಿದೆ. ಅಲ್ಲಾಹನ ಹೆಸರಿನಲ್ಲಿ ಜೊತೆಯಾದ ವ್ಯಕ್ತಿಗಳು ಯಾವು ದಾದರೂ ಕಾರಣಕ್ಕೆ ಬೇರ್ಪಡಬೇಕಾಗಿ ಬಂದರೂ ಅವರ ಗೆಳೆತನವೂ ಯಾವ ತೊಂದರೆ ಯಿಲ್ಲದೆ ಮುಂದುವರಿಯುತ್ತದೆ. ಇದುವೇ ವಾಸ್ತವದಲ್ಲಿ ಅಲ್ಲಾಹನ ಹೆಸರಿನಲ್ಲಿ ಪರಸ್ಪರ ಪ್ರೀತಿಸಿದವರು ಮತ್ತು ಅಂತ್ಯದಿನದಂದು ಅವನ ನೆರಳಿಗೆ ಅರ್ಹರಾದವರು.

## 5) ಸಚ್ಚಾರಿತ್ರ್ಯವಂತರು

ನಿರ್ಜನವಾದ ಒಂದು ಸ್ಥಳದಲ್ಲಿ ಓರ್ವ ಸ್ತ್ರೀಯನ್ನು ನೀವು ಭೇಟಿಯಾಗುತ್ತೀರಿ. ಅವಳು ಸುಂದರಿಯಲ್ಲದಿದ್ದರೆ ನೀವು ಅವಳನ್ನು ಗಮನಿಸದಿರಬಹುದು. ಕೆಟ್ಟ ಚಾರಿತ್ರ್ಯದವಳೆಂದು ಗೊತ್ತಾದರೆ ನೀವು ದಾರಿ ಬದಲಿಸಿ ಬೇರೆ ದಾರಿಯಲ್ಲಿ ಮುಂದುವರಿಯಬಹುದು. ಆದರೆ ಈ ಸ್ತ್ರೀ ಕುಲೀನೆಯೂ ಸುಂದರಿಯೂ ಆಗಿದ್ದಾಳೆ. ನಿಮಗೆ ಬೇಕಿದ್ದರೆ ಆಕೆಯನ್ನು ವಶೀಕರಿಸಲು ಪ್ರಯತ್ನಿಸಬಹುದು. ಇಲ್ಲದಿದ್ದರೆ ಮುಂದೆ ಸಾಗಬಹುದು. ಆದರೆ ನೀವು ಹಾಗೇನೂ ಮಾಡದೆ ಮುಂದುವರಿಯುತ್ತೀರಿ. ಏಕೆಂದರೆ ನಿಮ್ಮ ಚಾರಿತ್ರ್ಯವು ಉತ್ತಮವಾಗಿದೆ. ಆದರೆ ಆ ಸುಂದರಿ ಮುಗುಳ್ನಗುತ್ತಾ ನಿಮ್ಮನ್ನು ಆಹ್ವಾನಿಸುತ್ತಾಳೆ. ಆಮಿಷಗಳನ್ನೊಡ್ಡುತ್ತಾಳೆ. ಆದರೂ ನೀವು ಬಲಿ ಬೀಳುವುದಿಲ್ಲ. ಅವಳಿಂದ ಮುಖ ತಿರುಗಿಸಿ ಮನಸ್ಸಿನಲ್ಲೇ ಅಥವಾ ನಾಲಗೆಯ ಮೂಲಕ ಈ ರೀತಿ ಹೇಳುತ್ತೀರಿ. ''ಇಲ್ಲ ಅಲ್ಲಾಹನು ಕಠಿಣವಾಗಿ ನಿಷೇಧಿಸಿರುವ ಅಶ್ಲೀಲ ಕೆಲಸವಿದು. ನಾನಿದಕ್ಕೆ ಬಲಿಯಾಗಲಾರೆ.'' ಉಜ್ವಲವಾದ ಈ ಚಾರಿತ್ರ್ಯವನ್ನು ಅಲ್ಲಾಹನು ಗೌರವಿಸುತ್ತಾನೆ. ಅವನಿಗೆ ಅಂತ್ಯದಿನದಂದು ನೆರಳನ್ನು ನೀಡುತ್ತಾನೆ. ಅವನು ಪ್ರಕೃತಿಯ ಒಂದು ಆಮಿಷವನ್ನು ಮೆಟ್ಟಿನಿಂತು ಸ್ವತಂತ್ರವಾದ ಪರಿಶುದ್ಧವಾದ ಇಚ್ಛಾಶಕ್ತಿಯನ್ನು ಪ್ರದರ್ಶಿಸಿರುವನು.

## 6) ಅಲ್ಲಾಹನನ್ನು ಸ್ಮರಿಸುತ್ತಾ ಕಣ್ಣೀರಿಳಿಸುವವರು.

ಜನರಿಂದ ಮರೆಯಾಗಿ ಅಲ್ಲಾಹನನ್ನು ಸ್ಮರಿಸುತ್ತಾ ಭಯಭಕ್ತಿಯಿಂದ ಕಣ್ಣೀರು ತುಂಬಿಕೊಳ್ಳುವುದು ಯಥಾರ್ಥ ಸತ್ಯವಿಶ್ವಾಸಿಯ ಒಂದು ಲಕ್ಷಣವಾಗಿರುತ್ತದೆ. ಪವಿತ್ರ

ಕುರ್‌ಆನ್ ಹೇಳುತ್ತದೆ. ''ಅಲ್ಲಾಹನ ಸ್ಮರಣೆಯುಂಟಾದಾಗ ಅವರ ಹೃದಯಗಳು ಕಂಪಿಸುತ್ತವೆ. ಅವರು ಮಾತ್ರ ಸತ್ಯವಿಶ್ವಾಸಿಗಳಾಗಿರುತ್ತಾರೆ.''

ಅಲ್ಲಾಹನನ್ನು ಮನಸ್ಸಿನಲ್ಲೇ ಸ್ಮರಿಸಬಹುದು. ಅಲ್ಲವಾದರೆ ಜೋರಾಗಿ ಸ್ಮರಿಸಬಹುದು. ನಮಾಝ್, ಕುರ್‌ಆನ್ ಪಾರಾಯಣದ ಮೂಲಕವೂ ಸ್ಮರಿಸಬಹುದು. ಯಾವಾಗಲೂ ಈ ಸ್ಮರಣೆಯು ಹೃದಯದಲ್ಲಿ ಭಕ್ತಿಯನ್ನು ತುಂಬಬೇಕು. ಹಾಗಿದ್ದಲ್ಲಿ ಅದು ಯಥಾರ್ಥ ದೇವಸ್ಮರಣೆಯಾಗುತ್ತದೆ.

ಅಲ್ಲಾಹನನ್ನು ಸ್ಮರಿಸುವಾಗ ಮನುಷ್ಯ ಅಳುವುದು ಯಾಕೆ? ಕಾರಣಗಳು ಅನೇಕ. ಅಲ್ಲಾಹನ ಅನಂತವಾದ ಪ್ರೀತಿ, ಕರುಣೆ, ಅನುಗ್ರಹಗಳು ಲಭಿಸಿದಾಗ ಅನುಭವವಾಗುವ ಆನಂದ. ಅವನ ಅಪಾರ ಶಕ್ತಿ-ಸಾಮರ್ಥ್ಯದ ಬಗ್ಗೆ ಇರುವ ಸಂಭ್ರಮದಿಂದ ಕೂಡಿದ ಪ್ರಜ್ಞೆ, ಅವನ ಸಾಮೀಪ್ಯ ಗಳಿಸಲು ಬಯಸುವ ಉತ್ಕಟ ಇಚ್ಛೆ, ಅವನ ಘೋರವಾದ ಶಿಕ್ಷೆಯ ಭಯ. ಈ ಅವಸ್ಥೆಗಳಲ್ಲೆಲ್ಲಾ ಸತ್ಯವಿಶ್ವಾಸಿಯ ಹೃದಯವು ತುಂಬಿ ಬರಬಹುದು. ಆ ಕಣ್ಣೀರು ಅವನ ಪಾಪಗಳನ್ನು ಕಳಂಕವನ್ನು ತೊಡೆದು ಹಾಕುತ್ತದೆ. ಈ ರೀತಿ ಪರಿಶುದ್ಧರಾಗುವವರು ಅಲ್ಲಾಹನ ವಿಶೇಷ ಕರುಣೆಗೆ ಪಾತ್ರರಾಗುತ್ತಾರೆ.

## 7. ಪ್ರಶಸ್ತಿಯನ್ನು ಬಯಸದೆ ದಾನ-ಧರ್ಮ ಮಾಡುವವರು:

ಖ್ಯಾತಿ, ಹೆಸರು, ಪ್ರಶಸ್ತಿಯನ್ನು ಬಯಸದೆ ರಹಸ್ಯವಾಗಿ ದಾನ-ಧರ್ಮಗಳನ್ನು ಮಾಡುವವರು ಅದರ ಮೂಲಕ ಅಲ್ಲಾಹನ ಪ್ರೀತಿ ಮತ್ತು ಜನರ ಒಳಿತನ್ನು ಮಾತ್ರ ಅಪೇಕ್ಷಿಸುತ್ತಾರೆ. ಅದರಲ್ಲಿ ಸ್ವಾರ್ಥ ಕಾಪಟ್ಯದ ಛಾಯೆಯೂ ಇರುವುದಿಲ್ಲ. ಸಂಪತ್ತಿನ ನಿಜವಾದ ತ್ಯಾಗ ಎಂದರೆ ಇದುವೇ ಆಗಿದೆ.

ದಾನಧರ್ಮವನ್ನು ಬಹಿರಂಗಗೊಳಿಸುವುದರಲ್ಲಿ ತಪ್ಪೇನಿಲ್ಲ. ಆದರೂ ಬಹಿರಂಗವಾಗಿ ದಾನ-ಧರ್ಮಗಳನ್ನು ನೀಡುವುದು ಒಂದು ರೀತಿಯ ವ್ಯಾಪಾರವಾಗಿ ಪರಿಣಮಿಸುತ್ತಿದೆ. ಪ್ರಶಸ್ತಿ, ಗೌರವವನ್ನು ಅಪೇಕ್ಷಿಸಿ ಕೆಲವರು ದಾನ-ಧರ್ಮಗಳನ್ನು ಮಾಡುತ್ತಾರೆ. ಈ ರೀತಿ ಗೌರವ, ಪ್ರಶಸ್ತಿಯನ್ನು ಅಪೇಕ್ಷಿಸಿ ನಡೆಸುವ ದಾನಧರ್ಮಗಳಿಗೆ ಅಲ್ಲಾಹನ ಬಳಿ ಯಾವುದೇ ಮಾನ್ಯತೆ ಇರುವುದಿಲ್ಲ.



# 19. ಕರ್ಮಗಳ ಪೂರ್ಣತೆ ಮತ್ತು ಅಪೂರ್ಣತೆ

قَالَ سلْمَان الفارِسي رَضِيَ اللّٰهُ عَنْهُ خَطَبَنَا رَسُولُ اللهِ ﷺ ...من فَطَّرَ فيه صَائِمًا كَانَ مَغْفِرَةً لِذُنُوبِهِ وَعِتْقَ رَقَبَتِهِ مِنَ النَّارِ وَكَانَ لَهُ مِثْلُ أَجْرِهِ مِنْ غَيرِ اَنْ يَنْقُصَ مِنْ أَجْرِهِ شَيْءٌ. قَالُوا يَا رَسُولَ اللهِ لَيْسَ كُلُّنَا يَجِدُ مَا يُفَطِّرُ الصَّائِمَ فَقَالَ رَسُولُ اللهِ ﷺ يُعْطِي اللهُ هذَا الثَّوَابَ مَنْ فَطَّرَ صَائِمًا عَلَى تَمْرَةٍ اَوْ عَلَى شُرْبَةِ مَاءٍ اَوْ مَذْقَةِ لَبَنٍ .(ابن خزيمة)

ಸಲ್ಮಾನ್ ಫಾರ್ಸಿ(ರ) ಹೇಳುತ್ತಾರೆ- ಪ್ರವಾದಿ(ಸ) ನಮ್ಮನ್ನುದ್ದೇಶಿಸಿ ಈ ರೀತಿ ಭಾಷಣ ಮಾಡಿದರು. ಆದರಲ್ಲಿ(ರಮಝಾನಿನಲ್ಲಿ) ಯಾರಾದರೂ ಓರ್ವ ಉಪವಾಸಿಗನಿಗೆ ಉಪವಾಸ ಪಾರಣೆ ಮಾಡಿಸಿದರೆ ಅದು ಅವನ ಪಾಪಗಳಿಗೆ ಪ್ರಾಯಶ್ಚಿತ್ತವಾಗುವುದು. ಅವನ ಕುತ್ತಿಗೆಯು ನರಕದಿಂದ ವಿಮೋಚನೆಯಾಗುತ್ತದೆ. ಅವನಿಗೆ ಆ ಉಪವಾಸಿಗನಿಗೆ ಸಿಗುವಂತಹ ಪ್ರತಿಫಲವೇ ಸಿಗುವುದು. ಉಪವಾಸಿಗನ ಪ್ರತಿಫಲದಲ್ಲಿ ಯಾವುದೇ ಕೊರತೆ ಉಂಟಾಗುವುದಿಲ್ಲ. ಸಭಿಕರು ಪ್ರಶ್ನಿಸಿದರು. 'ದೇವನ ಸಂದೇಶವಾಹಕರೇ, ನಾವೆಲ್ಲರೂ ಉಪವಾಸಿಗನ ಉಪವಾಸ ಪಾರಣೆ ಮಾಡಿಸುವಷ್ಟು ಅನುಕೂಲವಿರುವವರು ಅಲ್ಲವಲ್ಲವೇ?' ಪ್ರವಾದಿ(ಸ) ಉತ್ತರಿಸಿದರು- ಓರ್ವ ಉಪವಾಸಿಗನನ್ನು ಒಂದು ಖರ್ಜೂರದ ಮೂಲಕ, ಒಂದು ಸಲಕ್ಕೆ ಕುಡಿಯಲು ಅಗತ್ಯವಾದ ನೀರಿನ ಮೂಲಕ. ಒಂದು ಲೋಟ ಹಾಲಿನೊಂದಿಗೆ ಉಪವಾಸ ಪಾರಣೆ ಮಾಡಿಸಿದರೂ ಈ ಪ್ರತಿಫಲ ಲಭಿಸುತ್ತದೆ. (ಇಬ್ನು ಖುಝೈಮ)

ಶಅಬಾನ್ ತಿಂಗಳ ಕೊನೆಯ ಜುಮಾ ದಿನದಂದು ರಮಝಾನಿನ ಉಪವಾಸದ ಕುರಿತು ಪ್ರವಾದಿ ಮುಹಮ್ಮದ್(ಸ) ಮಾಡಿದ ಭಾಷಣದ ಉದ್ಧರಣೆಯ ಭಾಗವೊಂದು ಹದೀಸ್‌ನಲ್ಲಿದೆ. ಆದರ ಒಂದು ಭಾಗವು ಈ ಮೇಲಿನಂತಿದೆ. ರಮಝಾನ್‌ನ ಉಪವಾಸವಿರಿಸಿದ ಉಪವಾಸಿಗನಿಗೆ ಪಾರಣೆ ಮಾಡಿಸುವುದರ ಮಹತ್ವ ಮತ್ತು ಶ್ರೇಷ್ಠತೆಯ ಬಗ್ಗೆ ಈ ಹದೀಸಿನಲ್ಲಿ ಮಾಹಿತಿ ಇದೆ.

ಉಪವಾಸ ಪಾರಣೆಯ ಕುರಿತು ವಿವರಿಸುವುದಕ್ಕಿಂತ ಮೊದಲು ಇದೇ ಭಾಷಣದಲ್ಲಿ ಪ್ರವಾದಿಯವರು(ಸ) ರಮಝಾನ್ ಸಹನೆ ಮತ್ತು ಸಹಾನುಭೂತಿಯ ತಿಂಗಳು ಎಂದೂ ಹೇಳಿರುವರು. ಅವನ್ನೂ ಗಮನದಲ್ಲಿಟ್ಟು ವಿಮರ್ಶಿಸಿದಾಗ ಈ ಪ್ರವಾದಿ ವಚನದಲ್ಲಿ ಕೇವಲ ದಾನಧರ್ಮಕ್ಕೆ ಪ್ರೋತ್ಸಾಹ ನೀಡಲಾಗಿದೆ ಎಂಬುದಕ್ಕಿಂತ ಮಿಗಿಲಾದ ವಿಶಾಲವಾದ ಅರ್ಥ ವ್ಯಾಪ್ತಿಯಿದೆ ಎಂಬುದು ಮನದಟ್ಟಾಗುತ್ತದೆ. ಜನರ ಮಧ್ಯೆ ಪರಸ್ಪರ ಇರಬೇಕಾದ ಐಕ್ಯತೆ ಮತ್ತು ಸ್ನೇಹದ ಪ್ರತೀಕವೆಂಬ ನೆಲೆಯಲ್ಲಿ ಉಪವಾಸ ಪಾರಣೆ ಮಾಡಿಸುವುದು ವಿಶೇಷವಾಗಿ ಪ್ರೋತ್ಸಾಹಿಸಲ್ಪಟ್ಟಿದೆ.

ಮನುಷ್ಯರ ಮಧ್ಯೆ ಪರಸ್ಪರ ಸಂಬಂಧ ಹಳಸಿ ಹೋಗುವ ಕಾರಣದಿಂದಾಗಿ ಮನುಷ್ಯನಿಂದ ಪಾಪ ಸಂಭವಿಸುತ್ತದೆ ಮತ್ತು ಅವನು ನರಕಕ್ಕೆ ಅರ್ಹನಾಗುತ್ತಾನೆ. ಕ್ರೂರತೆ, ಪ್ರೀತಿಯ ಅಭಾವ, ಅನೈಕ್ಯ, ಕ್ಷಮಿಸುವ ಗುಣವಿಲ್ಲದಿರುವುದು, ಸಂಪತ್ತಿನ ಅತಿಯಾದ ಮೋಹ ಮೊದಲಾದ ಕೆಟ್ಟ ಗುಣಗಳು ಅದಕ್ಕೆ ಕಾರಣಗಳಾಗಿವೆ. ಉಪವಾಸವೆಂಬುದು ಈ ಕೆಟ್ಟ ಗುಣಗಳನ್ನೆಲ್ಲಾ ಹೊಸಕಿ ಹಾಕಿ ಅವುಗಳ ವಿರುದ್ಧವಾದ ಒಳ್ಳೆಯ ಗುಣಗಳನ್ನು ಹೆಚ್ಚಿಸುವ ಪ್ರಯತ್ನವಾಗಿದೆ. ಉಪವಾಸ ವ್ರತವನ್ನು ಕೈಗೊಳ್ಳುವಾಗ ಅನುಭವಿಸುವ ಕಷ್ಟ, ಉಪವಾಸ ಪಾರಣೆ ಮಾಡಿಸುವುದರ ಕುರಿತು ವ್ಯಕ್ತಿಗಿರುವ ಉತ್ಸಾಹವು ಅವರ ಪ್ರಯತ್ನ ಎಷ್ಟರ ಮಟ್ಟಿಗೆ ಯಶಸ್ವಿಯಾಗುವುದು ಎಂಬುದನ್ನು ತಿಳಿಸುತ್ತದೆ.

ಉಪವಾಸಿಗನಿಗೆ ಉಪವಾಸ ಪಾರಣೆ ಮಾಡಿಸುವ ಮೂಲಕ ಉಪವಾಸಿಗನಿಗೆ ಸಿಗುವಷ್ಟೇ ಪುಣ್ಯವು ಪಾರಣೆ ಮಾಡಿಸಿದವನಿಗೂ ಲಭಿಸುವುದು. ಆದರೆ ಇನ್ನೊಬ್ಬನ ಔದಾರ್ಯದಿಂದಾಗಿ ಉಪವಾಸ ಪಾರಣೆ ಮಾಡಿದ ವ್ಯಕ್ತಿಯ ಪುಣ್ಯದಲ್ಲಿ ಯಾವುದೇ ಕಡಿತವಾಗಲಾರದು ಎಂಬ ವಿಷಯವು ಗಮನಾರ್ಹವಾಗಿದೆ. ಉಪವಾಸ ಪಾರಣೆ ಮಾಡಿಸಲು ಪರಸ್ಪರರನ್ನು ಆಹ್ವಾನಿಸುವುದು, ಆಮಂತ್ರಣ ಸಿಕ್ಕಿದರೆ ಅದನ್ನು ಸ್ವೀಕರಿಸುವುದು, ಇದನ್ನು ಒಂದು ಸತ್ಕರ್ಮವೆಂದು ಇಸ್ಲಾಮ್ ಪರಿಗಣಿಸುತ್ತದೆ. ಆದುದರಿಂದ ಆಮಂತ್ರಣ ಸ್ವೀಕರಿಸುವುದನ್ನು ಮಹತ್ವವಿಲ್ಲದ ವಿಷಯವೆಂದು ತಿಳಿಯಬಾರದು. ಮುಸ್ಲಿಮ್ ಸಮುದಾಯ ಸುಭದ್ರವಾಗಲು ಒಂದು ಅವಕಾಶ ಎಂಬ ನೆಲೆಯಲ್ಲಿ ಅದನ್ನು ಪರಿಗಣಿಸಬೇಕು. ಸಹಾಬಿಗಳ ಪ್ರಶ್ನೆಗಳಿಗೆ ಪ್ರವಾದಿ ಮುಹಮ್ಮದರು(ಸ) ನೀಡಿರುವ ಉತ್ತರ ಈ ವಿಷಯವನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ.

ಕೇವಲ ದಾನಧರ್ಮ ಮತ್ತು ಅತಿಥಿ ಸತ್ಕಾರದ ಸ್ಥಾನಮಾನ ಮಾತ್ರ ಅದಕ್ಕಿರುವುದಾದರೆ, ದಾನ ಮಾಡಲು, ಅತಿಥಿ ಸತ್ಕಾರ ಮಾಡಲು ಸಾಮರ್ಥ್ಯವಿರುವ ಮತ್ತು ಸಾಧ್ಯತೆಯಿರುವ ವ್ಯಕ್ತಿಗಳಿಗೆ ಮಾತ್ರ ಇದನ್ನು ಆದೇಶಿಸಲಾಗುತ್ತಿತ್ತು. ಆದರೆ ಇಲ್ಲಿ ಪ್ರವಾದಿ ಮುಹಮ್ಮದರು(ಸ) ಪ್ರತಿಯೊಬ್ಬರೂ ತಮಗೆ ಸಾಧ್ಯವಿರುವ ರೀತಿಯಲ್ಲಿ ಅದೆಷ್ಟು ನಿಸ್ಸಾರವಾದ ವಸ್ತುವಿನಿಂದಾದರೂ ಸರಿ. ಉಪವಾಸ ಪಾರಣೆ ಮಾಡಿಸಬೇಕು ಎಂದು ಆದೇಶಿಸಿರುವರು. ಬರೀ ತಣ್ಣೀರಿನಿಂದ ಉಪವಾಸ ಪಾರಣೆ ಮಾಡಿಸಿದರೆ ಕೂಡಾ ಅದಕ್ಕೆ ಪಾಪಗಳಿಂದ ಮುಕ್ತಿ, ಕ್ಷಮೆ ಮತ್ತು ನರಕ ಮುಕ್ತಿಯ ಪ್ರತಿಫಲ ಸಿಗಲಿರುವುದು. ಆದುದರಿಂದ ಇದು ಬಹಳ ಪ್ರಮುಖವಾದ

ಪುಣ್ಯಕಾರ್ಯವೆಂದು ಇದರ ಕುರಿತು ಹೇಳಲಾಗಿದೆ. ಸಾಧಾರಣ ದಾನ-ಧರ್ಮಗಳಿಗೆ ಇರುವುದಕ್ಕಿಂತ ಹೆಚ್ಚಿನ ಬೆಲೆ ಮತ್ತು ಗೌರವ ಉಪವಾಸ ಪಾರಣೆ ಮಾಡಿಸುವ ವ್ಯಕ್ತಿಗಳಿಗೆ ಸಿಗುತ್ತದೆ ಎಂಬುದನ್ನು ಈ ಹದೀಸ್ ಸ್ಪಷ್ಟಪಡಿಸುತ್ತದೆ.

ಬಹಳ ಪ್ರಾಮುಖ್ಯವಾದ ಇನ್ನೊಂದು ವಿಷಯವೂ ಈ ಹದೀಸಿನಲ್ಲಿದೆ. ಕೆಲಸದ ವಿಧಾನಕ್ಕಿಂತ ಅದನ್ನು ಮಾಡುವ ವ್ಯಕ್ತಿಯ ಹೃದಯದ ಪಾವಿತ್ರ್ಯತೆಯು ಪ್ರಧಾನ ವಿಷಯವಾಗಿದೆ ಎಂಬುದು ಇಲ್ಲಿ ವಿವರಿಸಲ್ಪಟ್ಟಿದೆ. ಒಂದು ಕೆಲಸವು ಅಲ್ಲಾಹನ ದೃಷ್ಟಿಯಲ್ಲಿ ಪೂರ್ಣವೋ, ಅಪೂರ್ಣವೋ ಆಗುವುದು ವ್ಯಕ್ತಿಯ ಸಂಪತ್ತನ್ನು ಪರಿಗಣಿಸಿ ಅಲ್ಲ. ಬದಲಾಗಿ ವ್ಯಕ್ತಿಯ ಪ್ರಾಮಾಣಿಕತೆ ಮತ್ತು ಹೃದಯದ ಪಾವಿತ್ರ್ಯತೆಯನ್ನು ಪರಿಗಣಿಸಲಾಗುತ್ತದೆ. ಯಾವುದೇ ಅನುಕೂಲವಿಲ್ಲದ ವ್ಯಕ್ತಿ ಬೇರೆಯವರನ್ನು ತಣ್ಣೀರಿನೊಂದಿಗೆ ಉಪವಾಸ ಪಾರಣೆ ಮಾಡಿಸಿದರೆ, ಶ್ರೀಮಂತ ವ್ಯಕ್ತಿ ಬಹಳ ಆಡಂಬರಿಯಾಗಿ ನಡೆಸಿದ ಉಪವಾಸ ಪಾರಣೆಯ ಪುಣ್ಯ ಮತ್ತು ಪ್ರತಿಫಲವೇ ಅವನಿಗೂ ಸಿಗುವುದು. ಅನಾರೋಗ್ಯ ಪೀಡಿತ ವ್ಯಕ್ತಿ ಮಲಗಿ ನಮಾಝ್ ನಿರ್ವಹಿಸಿದರೂ ಆರೋಗ್ಯವಂತ ವ್ಯಕ್ತಿ ನಿಂತು ನಮಾಝ್ ನಿರ್ವಹಿಸಿದಷ್ಟೇ ಪುಣ್ಯವು ಲಭಿಸುವುದು. ಸೌಲಭ್ಯ ಮತ್ತು ಸಾಮರ್ಥ್ಯಗಳ ಪರಿಮಿತಿಯ ಕಾರಣದಿಂದ ಯಾರಿಗೂ ಸ್ವರ್ಗವು ತಡೆಯಲ್ಪಡುವುದಿಲ್ಲ. ಸೌಕರ್ಯ ಮತ್ತು ಸಾಮರ್ಥ್ಯವುಳ್ಳವರಿಗೆ ಸ್ವರ್ಗವು ಸಿಕ್ಕೇ ಸಿಗುತ್ತದೆ ಎಂದೂ ಹೇಳುವಂತಿಲ್ಲ. ಕೇವಲ ಪ್ರಶಂಸೆಯನ್ನು ಅಪೇಕ್ಷಿಸಿ ಯಾರಾದರೂ ವಿವಿಧ ರೀತಿಯ ಆಹಾರ ತಯಾರಿಸಿ ಉಪವಾಸ ಪಾರಣೆ ನಡೆಸಿದರೂ ಅದು ಅಪೂರ್ಣವೂ, ವಿಲಕ್ಷಣವೂ ಆಗುತ್ತದೆ.

ಪ್ರತಿಯೊಬ್ಬರೂ ತಮ್ಮ ಕರ್ಮಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಪರಿಪೂರ್ಣವಾಗಿ, ನಿಸ್ವಾರ್ಥವಾಗಿ ಮಾಡಬೇಕು. ಇದನ್ನೇ ಧರ್ಮಶಾಸ್ತ್ರವು ಎಲ್ಲರಿಂದಲೂ ಬಯಸುತ್ತದೆ. ಸಾಮರ್ಥ್ಯವಿಲ್ಲದ ಕಾರಣದಿಂದ ಕರ್ಮಗಳಲ್ಲಿ ಉಂಟಾಗುವ ಅಪೂರ್ಣತೆಯನ್ನು ಅಲ್ಲಾಹನು ಅಪೂರ್ಣ ಕರ್ಮವೆಂದು ಪರಿಗಣಿಸುವುದಿಲ್ಲ. ತನ್ನ ದಾಸನು ತಾನು ನೀಡಿದ ಸಾಮರ್ಥ್ಯವನ್ನು ಮನಸಾರೆ ಉಪಯೋಗಿಸಿರುವನೋ ಎಂದು ಮಾತ್ರ ಅವನು ನೋಡುತ್ತಾನೆ. ಲಭಿಸದೆ ಇರುವುದನ್ನು ವ್ಯಯಿಸಿರುವೆಯಾ ಎಂಬ ಪ್ರಶ್ನೆಯೇ ಇರುವುದಿಲ್ಲ. ಲಭಿಸಿರುವುದನ್ನು ಅಗತ್ಯವಿರುವಂತೆ ಉಪಯೋಗಿಸಿರುವುದಾದರೆ ಕರ್ಮವೂ ಸಂಪೂರ್ಣವಾಗುತ್ತದೆ. ಸಂಪೂರ್ಣ ಪ್ರತಿಫಲಕ್ಕೆ ಅರ್ಹವಾಗುತ್ತದೆ.



# 20. ಸಾಮರ್ಥ್ಯ ಮತ್ತು ಕರ್ಮ

عَنْ أَبِي ذَرٍّ رَضِيَ اللَّهُ عَنْهُ أَنَّ أُنَاسًا مِنْ أَصْحَابِ رَسُولِ اللَّهِ ﷺ قَالُوا لِلنَّبِيِّ ﷺ يَا رَسُولَ اللهِ ذَهَبَ أَهْلُ الدُّثُورِ بِالْأُجُورِ يُصَلُّونَ كَمَا نُصَلِّي وَيَصُومُونَ كَمَا نَصُومُ وَيَتَصَدَّقُونَ بِفُضُولِ أَمْوَالِهِمْ. قَالَ أَوَلَيْسَ قَدْ جَعَلَ اللَّهُ لَكُمْ مَا تَصَدَّقُونَ إِنَّ بِكُلِّ تَسْبِيحَةٍ صَدَقَةً وَكُلِّ تَكْبِيرَةٍ صَدَقَةٌ وَكُلِّ تَحْمِيدَةٍ صَدَقَةٌ وَكُلُّ تَهْلِيلَةٍ صَدَقَةٌ وَأَمْرٌ بِالْمَعْرُوفِ صَدَقَةٌ وَنَهْيٌ عَنِ الْمُنْكَرِ صَدَقَةٌ وَفِي بُضْعِ أَحَدِكُمْ صَدَقَةٌ قَالُوا يَا رَسُولَ اللَّهِ أَيَأْتِي أَحَدُنَا شَهْوَتَهُ وَيَكُونَ لَهُ فِيهَا أَجْرٌ قَالَ أَرَأَيْتُمْ لَوْ وَضَعَهَا فِي حَرَامٍ أَكَانَ عَلَيْهِ وِزْرٌ فَكَذَلِكَ إِذَا وَضَعَهَا فِي الْحَلَالِ كَانَ لَهُ أَجْرٌ. (مسلم)

ಅಬೂದರ್ರ್(ರ) ವರದಿ ಮಾಡುತ್ತಾರೆ. ಪ್ರವಾದಿ ಮುಹಮ್ಮದ್(ಸ)ರೊಂದಿಗೆ ಕೆಲವು ಸಹಾಬಿಗಳು ಬಂದು ಈ ರೀತಿ ದೂರು ನೀಡಿದರು. ''ಅಲ್ಲಾಹನ ಸಂದೇಶವಾಹಕರೇ, ಪ್ರತಿಫಲವನ್ನೆಲ್ಲಾ ಧನಿಕರು ತಮ್ಮದಾಗಿಸಿದರು. ಅವರು ನಮ್ಮ ಹಾಗೆ ನಮಾಝ್ ಮಾಡುತ್ತಾರೆ, ಉಪವಾಸವ್ರತ ಆಚರಿಸುತ್ತಾರೆ. ಮಾತ್ರವಲ್ಲ, ಅವರು ಮಿಕ್ಕಿರುವ ಸಂಪತ್ತನ್ನು ದಾನ ಮಾಡುತ್ತಾರೆ.'' ಪ್ರವಾದಿ(ಸ) ಕೇಳಿದರು- ''ದಾನ ನೀಡುವಂತಹದ್ದೇನನ್ನೂ ಅಲ್ಲಾಹನು ನಿಮಗೆ ನೀಡಲಿಲ್ಲವೆಂದೇ? ಪ್ರತಿಯೊಂದು ತಸ್ಬೀಹ್(ಸುಬ್ಹಾನಲ್ಲಾಹ್)ನಲ್ಲೂ ದಾನವಿದೆ. ಪ್ರತಿಯೊಂದು ತಕ್ಬೀರ್(ಅಲ್ಲಾಹು ಅಕ್ಬರ್)ನಲ್ಲೂ ದಾನವಿದೆ. ಪ್ರತಿಯೊಂದು ತಹ್‌ಮೀದ್ (ಅಲ್‌ಹಮ್ದುಲಿಲ್ಲಾಹ್) ಪ್ರತಿಯೊಂದು ತಹ್ಲೀಲ್(ಲಾ ಇಲಾಹ ಇಲ್ಲಲ್ಲಾಹ್) ಎಂದು ಹೇಳುವುದು) ದಾನವಾಗಿದೆ. ಒಳಿತನ್ನು ಆದೇಶಿಸುವುದು ದಾನವಾಗಿದೆ. ಕೆಡುಕನ್ನು ತಡೆಯುವುದು ದಾನವಾಗಿದೆ. ನಿಮ್ಮ ಪೈಕಿಯೊಬ್ಬನ ಸಂಸರ್ಗದಲ್ಲೂ ದಾನವಿದೆ.'' ಆಗ ಪ್ರಶ್ನಿಸಲಾಯಿತು. ''ನಮ್ಮ ಪೈಕಿಯೊಬ್ಬರು ಅವರ ಲೈಂಗಿಕ ಅವಶ್ಯಕತೆಯನ್ನು ಪೂರೈಸುವುದಕ್ಕೂ ಪ್ರತಿಫಲವಿದೆಯೇ?'' 'ನಿಮ್ಮ ಪೈಕಿ ಒಬ್ಬರು ನಿಷಿದ್ಧ ಮಾರ್ಗದಿಂದ ಶಾರೀರಿಕ ಬಯಕೆಯನ್ನು

ಪೂರೈಸಿದರೆ ಅದಕ್ಕೆ ಶಿಕ್ಷೆಯಿಲ್ಲವೇ? ಅದೇ ರೀತಿ ಸರಿಯಾದ ಮಾರ್ಗದಲ್ಲಿ ಪೂರೈಸಿದರೆ ಅದಕ್ಕೆ ಪ್ರತಿಫಲವಿದೆ.'' ಎಂದುತ್ತರಿಸಲಾಯಿತು. (ಮುಸ್ಲಿಮ್)

ಪ್ರವಾದಿ ಮುಹಮ್ಮದ(ಸ)ರು ಈ ಹದೀಸಿನ ಮೂಲಕ ಎರಡು ಪ್ರಮುಖ ವಿಷಯಗಳನ್ನು ಸರಳವಾಗಿ ತಿಳಿಸಿಕೊಟ್ಟಿರುವರು.

ಮನುಷ್ಯನಿಗೆ ಧರ್ಮವನ್ನು ಪಾಲಿಸುವುದಕ್ಕೆ, ಪುಣ್ಯವನ್ನು ಗಳಿಸುವುದಕ್ಕೆ ಆ ಮೂಲಕ ಶ್ರೇಷ್ಠನಾಗಲು ಸೌಕರ್ಯದ ಅಭಾವವು ಒಂದು ತಡೆಯಲ್ಲ ಎಂಬುದು ಇದರಲ್ಲಿರುವ ಒಂದನೆಯ ವಿಷಯ.

ಸಂಪತ್ತಿಲ್ಲದವರು ಕೆಲವೊಮ್ಮೆ ಒಂದು ವೇಳೆ ನನ್ನ ಬಳಿ ತುಂಬಾ ಹಣವಿದ್ದಿದ್ದರೆ, ನಾನು ಚೆನ್ನಾಗಿ ದಾನಧರ್ಮ ಮಾಡುತ್ತಿದ್ದೆ ಎಂದು ಭಾವಿಸುತ್ತಾರೆ. ಅಲ್ಲಿ ಮಸೀದಿ ನಿರ್ಮಿಸಬಹುದಿತ್ತು. ಇಲ್ಲಿ ಮದ್ರಸ ಕಟ್ಟಿಸಬಹುದಿತ್ತು, ಆದರೆ ನಾನು ದರಿದ್ರನಾಗಿರುವುದರಿಂದ ಈ ರೀತಿಯಲ್ಲಿ ಪುಣ್ಯ ಕೆಲಸಗಳನ್ನು ಮಾಡಲು ಮತ್ತು ಶ್ರೇಷ್ಠನೆನಿಸಲು ಅದೃಷ್ಟವಿಲ್ಲ ಎಂದು ಕೊಳ್ಳುತ್ತಾರೆ. ಅಧಿಕಾರ ನನ್ನ ಕೈಯಲ್ಲಿದ್ದರೆ ಸಮಾಜದಲ್ಲಿ ಈ ನಿಯಮಗಳನ್ನು ಜಾರಿಗೊಳಿಸುತ್ತಿದ್ದೆ. ಆಗ ಪ್ರವಾದಿ ಚರ್ಯೆಯನ್ನು ಪುನರುಜ್ಜೀವನಗೊಳಿಸಬಹುದಿತ್ತು ಎಂದೆಲ್ಲಾ ಅಧಿಕಾರ ಕೈಯಲ್ಲಿಲ್ಲದವರಿಗೆ ಅನಿಸುತ್ತಿರುತ್ತದೆ. ವಿದ್ಯೆ ಇದ್ದಿದ್ದರೆ ಈ ರೀತಿ ಮಾಡಬಹುದಿತ್ತು. ಅದನ್ನು ಸಾಧಿಸಬಹುದಿತ್ತು ಎಂದೆಲ್ಲಾ ಕೆಲವೊಮ್ಮೆ ವಿದ್ಯೆಯಿಲ್ಲದವರಿಗೆ ಅನಿಸುವುದಿದೆ.

ಈ ರೀತಿಯ ಜನರು ತಮ್ಮ ಬಳಿ ಇರುವ ಸಾಮರ್ಥ್ಯವನ್ನು ಮರೆತು ಇಲ್ಲದವುಗಳನ್ನು ನೆನಪಿಸಿಕೊಂಡು ನಿಟ್ಟುಸಿರು ಬಿಡುತ್ತಾರೆ. ಆಧ್ಯಾತ್ಮಿಕ ಮತ್ತು ಭೌತಿಕ ವಿಷಯಗಳಲ್ಲಿ ಈ ರೀತಿಯ ಸ್ವಭಾವವಿರುವವರು ಎಲ್ಲ ಕಾಲಗಳಲ್ಲೂ ಇರುತ್ತಾರೆ. ಹೆಚ್ಚಿನ ಸೌಕರ್ಯವಿರುವವರು ಹೆಚ್ಚು ಪುಣ್ಯ ಕೆಲಸಗಳನ್ನು ಮಾಡುತ್ತಾರೆ ಮತ್ತು ಹೆಚ್ಚಿನ ಪ್ರತಿಫಲ ಪಡೆದುಕೊಳ್ಳುತ್ತಾರೆ. ಆದುದರಿಂದ ನಮಗೆ ಎಂದಿಗೂ ಅವರ ಸ್ಥಾನವನ್ನು ತಲುಪಲು ಸಾಧ್ಯವಿಲ್ಲವೆಂದು ಭಾವಿಸಿ ದುಃಖಿಸುವ ಸಹಾಬಿಗಳು ತಮ್ಮ ದುಃಖವನ್ನು ಪ್ರವಾದಿ ಮುಹಮ್ಮದ(ಸ)ರ ಮುಂದೆ ನಿವೇದಿಸಿಕೊಂಡರು. ಪ್ರವಾದಿ(ಸ)ಯವರು ಧರ್ಮ ಮತ್ತು ಒಳಿತಿನ ಅರ್ಥವ್ಯಾಪ್ತಿ ಮತ್ತು ನಿಯಮಗಳನ್ನು ವಿವರಿಸುತ್ತಾ, ಅದನ್ನು ಮಾಡುವ ಮೂಲಕ ಯಾವ ರೀತಿಯಲ್ಲಿ ಪುಣ್ಯಗಳಿಸಲು ಮತ್ತು ಶ್ರೇಷ್ಠರಾಗಿ ಅತ್ಯುನ್ನತ ಸ್ಥಾನಕ್ಕೇರಲು ಸಾಧ್ಯ ಎಂಬುದನ್ನು ತಿಳಿಸಿಕೊಟ್ಟರು. ಈ ವಿಶಾಲವಾದ ಮಾರ್ಗದ ಮೂಲಕ ಅಪಾರವಾದ ಅವಕಾಶವು ಪ್ರತಿಯೊಬ್ಬರಿಗೂ ನೀಡಲ್ಪಟ್ಟಿದೆ. ಅದನ್ನು ಮನದಟ್ಟು ಮಾಡಿಸುವ ಕೆಲಸವನ್ನು ಇಲ್ಲಿ ಮಾಡಲಾಗಿದೆ.

ಧನಿಕರು ತಮ್ಮ ಸಂಪತ್ತಿನಿಂದ ನೀಡುವ ಭಿಕ್ಷೆ ಮಾತ್ರವಲ್ಲ, ದಾನಧರ್ಮವೂ ಮನುಷ್ಯ ತನ್ನ ಅಧೀನದಲ್ಲಿರುವ ಸಂಪತ್ತು, ಅಧಿಕಾರ, ಜ್ಞಾನವನ್ನು ಒಳ್ಳೆಯ ಮಾರ್ಗದಲ್ಲಿ ವ್ಯಯಿಸಿದಾಗ ಅವೆಲ್ಲವೂ ದಾನವೆನಿಸುತ್ತದೆ. ಸಂಪತ್ತಿಲ್ಲದವರಿಗೆ ಹಣದೊಂದಿಗೆ ಮಾಡುವ ದಾನವನ್ನು ಮಾತ್ರ ಮಾಡಲಿಕ್ಕೆ ಸಾಧ್ಯವಿಲ್ಲ, ಸಾಮರ್ಥ್ಯವಿರುವ ಧಾರಾಳ ಬೇರೆ ಕೆಲಸಗಳಿವೆ.

ದಾನಧರ್ಮಗಳೂ ಇವೆ. ದರಿದ್ರರಿಗೆ ಸಾಧ್ಯವಿರುವ ಕೆಲವು ದಾನಗಳನ್ನು ಮಾಡಲು ಧನಿಕರಿಗೆ ಸಾಧ್ಯವಾಗಬೇಕೆಂದಿಲ್ಲ. ಯಾವುದಾದರೂ ಕೆಲವು ಅನಾನುಕೂಲತೆಗಳು ಎಲ್ಲರಿಗೂ ಇವೆ. ಆಗ ಆ ಸೌಕರ್ಯವನ್ನು ಉಪಯೋಗ ಮಾಡಬಹುದಾದ ಒಳಿತುಗಳನ್ನು ಮಾಡಲು ಸಾಧ್ಯವಾಗದಿರುವುದು ಸ್ವಾಭಾವಿಕವಾಗಿದೆ. ಅದಕ್ಕೆ ಯಾರೂ ವ್ಯಥೆ ಪಡಬೇಕಾಗಿಲ್ಲ.

ಒಬ್ಬ ವ್ಯಕ್ತಿಗೆ ಅವನ ಸಾಮರ್ಥ್ಯ ಮತ್ತು ಸೌಕರ್ಯವಿಲ್ಲದ ಕೆಲಸಗಳಲ್ಲಿ ಪುಣ್ಯ ಮತ್ತು ಪ್ರತಿಫಲವಿರುವುದಲ್ಲ ಬದಲಾಗಿ ಅವನಿಗೆ ಸಾಮರ್ಥ್ಯವಿರುವ ಮತ್ತು ಸೌಕರ್ಯವಿರುವ ಕೆಲಸಗಳಲ್ಲೇ ಪುಣ್ಯವಿದೆ. ತನ್ನ ಸಾಮರ್ಥ್ಯಕ್ಕೆ ಮೀರಿದ ಯಾವುದೇ ಕೆಲಸಕ್ಕೆ ಸಂಬಂಧಿಸಿ ಯಾರಿಗೂ ಯಾವುದೇ ಹೊಣೆಗಾರಿಕೆಯಿಲ್ಲ. ಯಾರ ಮೇಲೂ ಅವರ ಸಾಮರ್ಥ್ಯಕ್ಕೆ ಮೀರಿದ ಹೊಣೆಯನ್ನು ವಹಿಸುವುದಿಲ್ಲವೆಂದು ಪವಿತ್ರ ಕುರ್‌ಆನ್ ಪ್ರಬಲವಾಗಿ ಪ್ರತಿಪಾದಿಸಿದೆ.

ಹತ್ತು ಲಕ್ಷ ರೂಪಾಯಿ ಒಬ್ಬನ ಬಳಿ ಇದ್ದರೆ, ಅದರಿಂದ ಒಂದು ಲಕ್ಷ ರೂಪಾಯಿ ದಾನ ಮಾಡುವುದು ಶ್ರೇಷ್ಠವಾದ ಪುಣ್ಯಕರ್ಮವಾಗಿದೆ. ಆದರೆ ಹತ್ತು ರೂಪಾಯಿ ಮಾತ್ರ ತನ್ನ ಬಳಿಯಲ್ಲಿರುವ ವ್ಯಕ್ತಿಗೆ ಒಂದು ಲಕ್ಷ ರೂಪಾಯಿ ದಾನ ಮಾಡುವುದು ಪುಣ್ಯ ಕರ್ಮವಲ್ಲ. ಪರಿಸ್ಥಿತಿ ಬಯಸುವುದಾದರೆ ಆ ಹತ್ತು ರೂಪಾಯಿಯಿಂದಲೇ ಒಂದೋ, ಎರಡೋ ರೂಪಾಯಿಗಳನ್ನು ದಾನ ನೀಡುವುದೇ ಆ ವ್ಯಕ್ತಿಗೆ ಪುಣ್ಯಕರ್ಮ. ಹತ್ತು ಲಕ್ಷವಿರುವವನು ಒಂದು ಲಕ್ಷ ರೂಪಾಯಿ ದಾನ ನೀಡುವುದು ಮತ್ತು ಹತ್ತು ರೂಪಾಯಿ ಇರುವವನು ಒಂದು ರೂಪಾಯಿ ದಾನ ಮಾಡುವುದು ಸಮಾನವಾಗಿದೆ.

ಒಬ್ಬ ವ್ಯಕ್ತಿಯ ಬಳಿ ದಾನ ನೀಡಲು ಒಂದು ಪೈಸೆಯೂ ಇಲ್ಲ ಎಂದಿಟ್ಟುಕೊಳ್ಳಿ. ಆ ವ್ಯಕ್ತಿ ನಿರಾಶನಾಗಬೇಕಾಗಿಲ್ಲ. ಆ ವ್ಯಕ್ತಿಗೆ ಸಂಬಂಧಿಸಿ ಹಣವನ್ನು ದಾನ ಮಾಡುವುದು ಒಂದು ಪುಣ್ಯ ಕರ್ಮವಲ್ಲ. ಅವನಿಗೆ ವಿದ್ಯೆಯಿದ್ದರೆ ಅದನ್ನು ಬೇರೆಯವರಿಗೆ ಕಲಿಸಿಕೊಡಬೇಕು. ಅದು ಅವನ ದಾನವಾಗಿರುತ್ತದೆ. ಆರೋಗ್ಯವಿದ್ದರೆ ಒಳ್ಳೆಯ ಕೆಲಸಗಳನ್ನು ಮಾಡಲು ಪರಿಶ್ರಮ ಪಡುವುದು ಅವನ ದಾನ. ಕನಿಷ್ಠ ಮನುಷ್ಯರು ನಡೆದಾಡುವ ದಾರಿಯನ್ನು ಸರಿಪಡಿಸಲು ಸಾಧ್ಯವಾಗುವುದಿದ್ದರೆ ಅದನ್ನು ಮಾಡಬಹುದು. ಇದು ಕೂಡಾ ದೇವನಿಂದ ಪ್ರತಿಫಲ ಸಿಗುವ ಪುಣ್ಯ ಕರ್ಮವಾಗಿದೆ. ಇದಕ್ಕೂ ಸಾಮರ್ಥ್ಯವಿಲ್ಲದವರು ಕೆಡುಕಿನಿಂದ ದೂರ ಉಳಿಯುವುದು, ಏಕಾಂತದಲ್ಲಿ ಅಲ್ಲಾಹನನ್ನು ಸ್ತುತಿಸುವುದು, ಕೀರ್ತನೆ ಮಾಡುವುದು ಇದುವೇ ಅವರ ಪಾಲಿನ ಧರ್ಮವಾಗಿದೆ.

ಧರ್ಮದ ಕೆಲಸಗಳೆಂದರೆ ಮನುಷ್ಯನು ಸ್ವರ್ಗಕ್ಕೆ ಹೋಗಿ ತಲುಪಲಿಕ್ಕಿರುವ ದಾರಿಗಳಾಗಿವೆ. ಸ್ವರ್ಗಕ್ಕೆ ಹೋಗಲಿಕ್ಕಿರುವ ದಾರಿ ಎಲ್ಲರಿಗೂ ಒಂದೇ ಆಗಿರಬೇಕೆಂದೇನಿಲ್ಲ. ಧನಿಕರಿಗೆ ಧನವು ಒಂದು ಮಾರ್ಗ. ಜ್ಞಾನ ಮಾತ್ರ ಉಳ್ಳವರಿಗೆ ಸಂಪತ್ತು ಎಂಬ ಮಾರ್ಗವಿಲ್ಲ. ಅವರದು ಜ್ಞಾನದ ಮಾರ್ಗ. ಆದರೆ ಅದು ಕೂಡಾ ಧನಿಕನ ಸಂಪತ್ತಿನಂತೆ ವಿಶಾಲವಾಗಿರುವುದು. ಕಲೆಯ ಅಭಿರುಚಿಯಿರುವವರಿಗೆ ಅದುವೇ ಮಾರ್ಗ. ಇದ್ಯಾವುದೂ ಇಲ್ಲದವರಿಗೆ ಹೃದಯದಲ್ಲಿರುವ

ಸತ್ಯವಿಶ್ವಾಸ ಮತ್ತು ಪ್ರಾರ್ಥನೆಯೇ ಮಾರ್ಗವಾಗಿರುವುದು. ಒಬ್ಬ ವ್ಯಕ್ತಿಯ ಸಾಮರ್ಥ್ಯದಲ್ಲಿ ಎಲ್ಲದಕ್ಕಿಂತ ಹೆಚ್ಚು ಒಳ್ಳೆಯ ಕೆಲಸ ಯಾವುದೋ ಅದುವೇ ಆ ವ್ಯಕ್ತಿಗೆ ಬಹಳ ಉತ್ತಮ. ಧರ್ಮವೇ ಅವರ ಪಾಲಿಗೆ ಸ್ವರ್ಗಕ್ಕಿರುವ ಅತಿ ವಿಶಾಲವಾದ ದಾರಿ. ಪ್ರತಿಯೊಬ್ಬರೂ ತಮ್ಮ ತಮ್ಮ ಮಾರ್ಗದಲ್ಲಿ ಅತ್ಯುತ್ತಮರಾಗಿ ಮುಂದುವರಿಯಬೇಕು. ಆಗ ಸ್ವರ್ಗದ ಅದೇ ಪದವಿಗೆ ಎಲ್ಲರೂ ಹೋಗಿ ಸೇರುತ್ತಾರೆ. ಈ ವಾಸ್ತವಿಕತೆಯನ್ನು ಪ್ರವಾದಿಯವರು ಬೇರೆ ಕೆಲವು ಹದೀಸ್‌ಗಳ ಮೂಲಕವೂ ಕಲಿಸಿಕೊಟ್ಟಿರುವರು.

ಅಬೂ ಮೂಸಾ(ರ) ಉಲ್ಲೇಖಿಸಿರುವ ಬುಖಾರಿ ಮತ್ತು ಮುಸ್ಲಿಮ್ ವರದಿ ಮಾಡಿರುವ ಪ್ರವಾದಿ ವಚನ ಹೀಗಿದೆ. ಪ್ರವಾದಿ(ಸ) ಹೇಳಿದರು– 'ಪ್ರತಿಯೊಬ್ಬ ಮುಸ್ಲಿಮನಿಗೂ ಸದಕಾ ಕಡ್ಡಾಯವಾಗಿದೆ.' ಅಬೂ ಮೂಸಾ ಪ್ರಶ್ನಿಸಿದರು. 'ಅದಕ್ಕೆ ಕೈಯಲ್ಲಿ ಏನೂ ಇಲ್ಲದೆ ಇದ್ದರೆ?' ಪ್ರವಾದಿ(ಸ) ಹೇಳಿದರು– 'ಅವರು ಪರಿಶ್ರಮ ಪಟ್ಟು ಕೆಲಸ ಮಾಡಿ ಸ್ವತಃ ಉಪಯೋಗಿಸಬೇಕು. ಜೊತೆಗೆ ದಾನವನ್ನೂ ಮಾಡಬೇಕು.' 'ಅದಕ್ಕೂ ಸಾಮರ್ಥ್ಯವಿಲ್ಲದಿದ್ದರೆ ಎಂದು ಪ್ರಶ್ನಿಸಲಾಯಿತು.' ಪ್ರವಾದಿ(ಸ) ಹೇಳಿದರು– ಯಾರಿಗೆ ಸಹಾಯದ ಅಗತ್ಯವಿದೆಯೋ ಅಂತಹ ಸಂಕಷ್ಟಕ್ಕೀಡಾದವರಿಗೆ ಸಹಾಯ ಮಾಡಬೇಕು. ಅದಕ್ಕೂ ಸಾಮರ್ಥ್ಯವಿಲ್ಲದಿದ್ದರೆ? ಪ್ರಶ್ನಿಸಲಾಯಿತು. ಪ್ರವಾದಿ(ಸ) ಹೇಳಿದರು– ''ಅವನು ಕೆಡುಕುಗಳಿಂದ ದೂರ ಉಳಿಯಬೇಕು, ನಿಶ್ಚಯವಾಗಿಯೂ ಅದೊಂದು ದಾನವಾಗಿದೆ.'' ಪ್ರವಾದಿ(ಸ) ಹೇಳಿರುವುದಾಗಿ ಇಬ್ನು ಮರ್ದವೈಹಿ ಇಬ್ನು ಉಮರ್ ಉಲ್ಲೇಖಿಸಿರುವರು. ''ಧನಿಕನು ತನ್ನ ಸಂಪತ್ತಿನಿಂದ ದಾನ ಮಾಡಲಿ, ಶಕ್ತಿಯುಳ್ಳವನು ತನ್ನ ಶಕ್ತಿಯಿಂದ ದಾನ ಮಾಡಲಿ. ಜ್ಞಾನಿಯು ತನ್ನ ಜ್ಞಾನದಿಂದ ದಾನ ಮಾಡಲಿ.''

ಈ ಹದೀಸ್ ಕಲಿಸುವ ಎರಡನೆಯ ಮಹತ್ವವುಳ್ಳ ವಿಷಯ ನೈತಿಕತೆ ಮತ್ತು ಪುಣ್ಯಗಳು ಜೀವನದ ಪ್ರತಿಯೊಂದು ಕೆಲಸದಲ್ಲೂ ಅಡಕವಾಗಿರುತ್ತದೆ. ನಮಾಝ್, ಉಪವಾಸ, ದಾನಧರ್ಮ, ದಿಕ್ರ್, ತಸ್ಬೀಹ್‌ಗಳು ಮಾತ್ರ ಪುಣ್ಯ ಕೆಲಸಗಳು. ಪಾರತ್ರಿಕ ಪ್ರತಿಫಲವು ಇದರಿಂದ ಮಾತ್ರ ಸಿಗುತ್ತದೆ ಎಂಬುದು ಒಂದು ತಪ್ಪು ಕಲ್ಪನೆಯಾಗಿದೆ. ಪುಣ್ಯ ಮತ್ತು ಪ್ರತಿಫಲ ಸಿಗಲಿಕ್ಕಿರುವ ಮುಖ್ಯ ಮಾರ್ಗ ಅದುವೇ ಎಂಬುದು ನಿಸ್ಸಂಶಯ. ಮಾತ್ರವಲ್ಲ ಇವುಗಳನ್ನೆಲ್ಲಾ ತೊರೆದು ಯಾರಿಗೂ ಪುಣ್ಯವನ್ನು ಸಂಪಾದಿಸಲು ಸಾಧ್ಯವಿಲ್ಲ, ಆದರೆ ಇವುಗಳಿಂದ ಮಾತ್ರ ಪುಣ್ಯವನ್ನೆಲ್ಲಾ ಶೇಖರಿಸಬಹುದು ಎಂದು ತಿಳಿಯಬಾರದು. ಮನುಷ್ಯ ಜೀವನದ ಪ್ರತಿಯೊಂದು ವ್ಯವಹಾರದಲ್ಲೂ ಪುಣ್ಯ ಮತ್ತು ಪಾಪಗಳಿವೆ. ಒಂದು ಕೆಲಸವನ್ನು ಮಾಡುವಾಗ ಅಲ್ಲಾಹನನ್ನು ನೆನಪಿಸಿಕೊಂಡು ಅವನ ನಿಯಮ ನಿರ್ದೇಶನಗಳಿಗೆ ಅನುಸಾರವಾಗಿ ಕೆಲಸ ನಿರ್ವಹಿಸಿದರೆ ಅದೊಂದು ಪುಣ್ಯ ಮತ್ತು ಇಬಾದತ್ ಆಗಿ ಮಾರ್ಪಡುವುದು. ಒಂದು ಕೆಲಸವನ್ನು ಮಾಡುವಾಗ ಅಲ್ಲಾಹನ ನಿರ್ದೇಶನಗಳನ್ನು ಧಿಕ್ಕರಿಸಿ ಮಾಡಿದರೆ ಅದು ಪಾಪವಾಗಿ ಪರಿಣಮಿಸುವುದು.

ಮನುಷ್ಯನ ಲೈಂಗಿಕ ಬಯಕೆಯ ಈಡೇರಿಕೆಯನ್ನು ಆಧ್ಯಾತ್ಮಿಕ ಮತ್ತು ಪಾರತ್ರಿಕ ಜೀವನದೊಂದಿಗೆ ಯಾವುದೇ ಸಂಬಂಧವಿಲ್ಲದ ಒಂದು ಕೆಲಸವೆಂದು ನಾವು ಪರಿಗಣಿಸುತ್ತೇವೆ. ಆಧ್ಯಾತ್ಮಿಕ ಉನ್ನತಿಗೆ ಅಪಾಯ ಕಾರಿಯಾದ ಲೈಂಗಿಕ ಇಚ್ಛೆಯನ್ನು ಶಮನಗೊಳಿಸುವುದು ಕೆಟ್ಟ ಕೆಲಸವೆಂದು ಕೆಲವು ಮತಧರ್ಮಗಳ ಸನ್ಯಾಸಿಗಳು ಮತ್ತು ಪುರೋಹಿತರು ಇದನ್ನು ಸಂಪೂರ್ಣವಾಗಿ ವರ್ಜಿಸುತ್ತಾರೆ. ಆದರೆ ಇಸ್ಲಾಮಿನ ದೃಷ್ಟಿಯಲ್ಲಿ ಲೈಂಗಿಕ ಬಯಕೆಯ ಈಡೇರಿಕೆಯೂ ಪ್ರತಿಫಲಾರ್ಹ ಪುಣ್ಯ ಕೆಲಸವಾಗಿದೆ ಎಂದು ಪ್ರವಾದಿ ಮುಹಮ್ಮದ್‌ರು(ಸ) ಕಲಿಸಿರುವರು. ಆರಾಧನಾ ಕರ್ಮಗಳು, ದಾನಧರ್ಮಗಳು ಮುಂತಾದವುಗಳಲ್ಲಿ ಮಾತ್ರ ಪುಣ್ಯವಿರುವುದೆಂದು ಭಾವಿಸಿಕೊಂಡಿದ್ದ ಸಹಾಬಿಗಳಿಗೆ ಸಹಜವಾಗಿ ಅದ್ಭುತವೆನಿಸಿತು. ಒಬ್ಬನಿಗೆ ಲೈಂಗಿಕ ಆಸಕ್ತಿಯುಂಟಾಗಿ, ಅವನದನ್ನು ಪೂರ್ಣಗೊಳಿಸಿದರೆ ಅದಕ್ಕೂ ಅಲ್ಲಾಹನಿಂದ ಪ್ರತಿಫಲ ಲಭಿಸುವುದೇ? ಪ್ರವಾದಿ(ಸ) ಇದಕ್ಕೆ ಎಷ್ಟು ಸಮರ್ಪಕವಾದ ಮತ್ತು ಸುಲಭವಾಗಿ ಗ್ರಹಿಸಬಹುದಾದ ಉತ್ತರವನ್ನು ನೀಡಿರುವರು ಎಂಬುದನ್ನು ನೋಡಿರಿ. ನೀವು ನಿಮ್ಮ ವಿಷಯಾಸಕ್ತಿಗಳನ್ನು ಕೆಟ್ಟ ಮಾರ್ಗದಲ್ಲಿ ಪೂರ್ತಿಗೊಳಿಸಿದ್ದರೆ ಅದು ಶಿಕ್ಷಾರ್ಹ ಅಪರಾಧವಾಗುತ್ತಿರಲಿಲ್ಲವೇ? ಅದೇ ರೀತಿ ಸರಿಯಾದ ರೀತಿಯಲ್ಲಿ ಅದನ್ನು ಪೂರ್ಣಗೊಳಿಸಿದರೆ ಪ್ರತಿಫಲಾರ್ಹವಾದ ಉತ್ತಮ ಕೆಲಸ ಎನಿಸಿಕೊಳ್ಳುತ್ತದೆ.

ಈ ಹದೀಸನ್ನು ವ್ಯಾಖ್ಯಾನಿಸುತ್ತಾ ಸಹೀಹ್ ಮುಸ್ಲಿಮ್‌ನ ವ್ಯಾಖ್ಯಾನಕಾರರಾದ ಇಮಾಮ್ ನವವಿ ಬರೆಯುತ್ತಾರೆ.

''ಅನುಮತಿ ಇರುವ ಕೆಲಸಗಳು, ಅವುಗಳನ್ನು ನಿರ್ವಹಿಸುವುದರಲ್ಲಿರುವ ಉದ್ದೇಶದ ಪಾವಿತ್ರ್ಯತೆಯ ಕಾರಣದಿಂದ ಅನುಸರಣೆ (ಪುಣ್ಯ ಕರ್ಮಗಳು) ಆಗುತ್ತದೆ ಎಂಬುದಕ್ಕೆ ಈ ಹದೀಸಿನಲ್ಲಿ ಆಧಾರಗಳಿವೆ. ಆದುದರಿಂದ ಸಂಸರ್ಗ ಕೂಡಾ ಒಂದು ಇಬಾದತ್ ಆಗಿರುತ್ತದೆ. ಅಲ್ಲಾಹನು ಆದೇಶಿಸಿರುವ ಪತ್ನಿಯೊಂದಿಗಿನ ಉತ್ತಮ ವರ್ತನೆ, ಅವಳ ಅಗತ್ಯವನ್ನು ಪೂರೈಸುವುದು ಅಥವಾ ಉತ್ತಮ ಸಂತಾನಕ್ಕಾಗಿ ಪ್ರಯತ್ನಿಸುವುದು, ತನ್ನ ಮತ್ತು ಪತ್ನಿಯ ಚಾರಿತ್ರ್ಯದ ಸಂರಕ್ಷಣೆ, ಇಬ್ಬರೂ ನಿಷಿದ್ಧವಾದವುಗಳನ್ನು ನೋಡುವುದರಿಂದ, ಆಲೋಚಿಸುವುದರಿಂದ, ಅದನ್ನು ಮೋಹಿಸುವುದರಿಂದ ದೂರ ಉಳಿಯುವುದನ್ನು ಇದರಿಂದ ಉದ್ದೇಶಿಸಿರುವುದಾದರೆ ಸಂಸರ್ಗ ಕೂಡಾ ಇಬಾದತ್ ಆಗುತ್ತದೆ.

(ಶರ್‌ಹು ಮುಸ್ಲಿಮ್ ಭಾಗ-7 ಪುಟ ಸಂಖ್ಯೆ 92)

ಸಾಮಾನ್ಯವಾಗಿ ಕೇವಲ ದೇಹೇಚ್ಛೆ ಎಂದು ಪರಿಗಣಿಸಲ್ಪಡುವ ಲೈಂಗಿಕ ಕ್ರಿಯೆಯ ವಿಷಯವೇ ಹೀಗಾದರೆ, ಕೃಷಿ, ವ್ಯಾಪಾರ, ಉದ್ಯೋಗ ಮುಂತಾದ ಇತರ ಜೀವನಾವಶ್ಯಕತೆಗಳ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ ಅಲ್ಲವೇ? ಎಲ್ಲದರಲ್ಲೂ ಪಾಪ ಮತ್ತು ಪುಣ್ಯಗಳಿವೆ. ಯಾವುದೇ ಕೆಲಸದಲ್ಲಿ ಪುಣ್ಯವನ್ನು ಮಾಡಿದರೆ ಅಲ್ಲಾಹನ ಕಡೆಯಿಂದ ಪ್ರತಿಫಲ, ಪಾಪಕಾರ್ಯವೆಸಗಿದರೆ ಶಿಕ್ಷೆಯು ಸಿಗುವುದು. ಅದನ್ನು ಯಾವ ರೀತಿಯಿಂದ

ಮಾಡಲಾಗಿದೆ ಎಂಬುದನ್ನು ಅನುಸರಿಸಿ ಪ್ರತಿಯೊಂದು ಕೆಲಸವು ಪಾಪ ಮತ್ತು ಪುಣ್ಯಗಳಾಗಿ ಪರಿಗಣಿಸಲ್ಪಡುತ್ತದೆ. ಅವುಗಳಲ್ಲಿ ಕೆಲವು ವಿಧಾನಗಳು ಅಲ್ಲಾಹನು ಇಷ್ಟಪಡುವವುಗಳಾಗಿವೆ. ಇನ್ನು ಕೆಲವು ಅಲ್ಲಾಹನು ದ್ವೇಷಿಸುವಂತಹವುಗಳಾಗಿವೆ. ಕೆಲಸ ಯಾವುದೇ ಆಗಿರಲಿ, ನಮಾಝ್, ದಾನಧರ್ಮ, ಸಂಸರ್ಗ ಆಗಿರಲಿ ಅದನ್ನು ಅಲ್ಲಾಹನು ಇಷ್ಟ ಪಡುವ ರೀತಿಯಲ್ಲಿ ಅಥವಾ ಅವನ ನಿಯಮ ನಿರ್ದೇಶನಗಳನ್ನು ಅನುಸರಿಸಿ ಮಾಡುವುದಾದರೆ ಅದು ಪುಣ್ಯ ಕೆಲಸವಾಗುತ್ತದೆ. ಮಾತ್ರವಲ್ಲ ಆ ರೀತಿ ಮಾಡಿದರೆ ಮಾತ್ರ ಪುಣ್ಯ ಕೆಲಸವೆನಿಸುತ್ತದೆ. ಯಾವುದೇ ಕೆಲಸವಾಗಲಿ ಅದು ಉಪವಾಸ ವ್ರತವಾಗಿರಲಿ, ಕುರ್‌ಆನ್ ಪಾರಾಯಣವಾಗಿರಲಿ, ಆಡಳಿತ ನಡೆಸುವುದಾಗಿರಲಿ ಅಲ್ಲಾಹನನ್ನು ಗೌರವಿಸದೆ, ಅವನ ವಿಧಿ ನಿಷೇಧಗಳನ್ನು ಧಿಕ್ಕರಿಸಿ ನಿರ್ವಹಿಸಿದರೆ ಅದು ಪಾಪ ಕಾರ್ಯವಾಗುತ್ತದೆ. ಅಲ್ಲಾಹನೊಂದಿಗೆ ಇರುವ ಭಯ-ಭಕ್ತಿ ಮತ್ತು ಅವನ ವಿಧಿ ನಿಷೇಧಗಳ ಅನುಸರಣೆ ಇದುವೇ ಪಾಪ ಮತ್ತು ಪುಣ್ಯದ ಮಾನದಂಡವಾಗಿದೆ.



# 21. ಮೂರು ಮೌಲ್ಯಗಳು

عن ابي ايوب الانصارى قال جاءَ رَجُلٌ إِلَى النَّبِيِّ ﷺ عِظْنِي وَاَوْجِزْ فَقَالَ إِذَا قُمْتَ فِي صَلَوتِكَ فَصَلِّ صَلاَةَ مُوَدِّعٍ وَلا تَكَلَّمْ بِكَلاَمٍ تَعْذِرُ مِنْهُ غَدًا وَاجْمَعَ اَلاِيَاسَ مِمَّا فِي أَيْدِي النَّاسِ. (مشكوة)

ಅಬೂ ಅಯ್ಯೂಬ್ ಅನ್ಸಾರಿ(ರ) ಉಲ್ಲೇಖಿಸುತ್ತಾರೆ, ಒಬ್ಬ ವ್ಯಕ್ತಿ ಪ್ರವಾದಿ ಮುಹಮ್ಮದ್(ಸ)ರನ್ನು ಭೇಟಿಯಾಗಿ ಹೇಳುತ್ತಾರೆ- ''ತಾವು ನನಗೆ ಉಪದೇಶಿಸಿರಿ'' ಪ್ರವಾದಿ(ಸ) ಈ ರೀತಿ ಉಪದೇಶಿಸಿದರು- ''ನೀವು ನಮಾಝ್ ನಿರ್ವಹಿಸುವಾಗ ವಿದಾಯ ಕೋರುವವನ ರೀತಿಯಲ್ಲಿ ನಮಾಝ್ ನಿರ್ವಹಿಸಿರಿ. ನಾಳೆ ಕ್ಷಮೆ ಕೇಳಬೇಕಾಗಿ ಬರುವ ರೀತಿ ಯಲ್ಲಿ ಯಾವುದೇ ಮಾತುಗಳನ್ನಾಡದಿರಿ. ಜನರ ಕೈವಶದಲ್ಲಿರುವವುಗಳಿಗೆ ಆಶೆ ಪಡದಿರಿ.

(ಮಿಶ್ಕಾತ್)

ತನ್ನ ಜೀವನವು ಯಶಸ್ವಿಯಾಗಬೇಕು, ಅರ್ಥಪೂರ್ಣವಾಗಿರಬೇಕು. ಅದಕ್ಕೆ ಅಗತ್ಯವಾದ ನಿರ್ದೇಶನಗಳನ್ನು ಸಂಕ್ಷಿಪ್ತ ವಾಕ್ಯಗಳ ಮೂಲಕ ಮನವರಿಕೆ ಮಾಡಿಸಿ ಕೊಡಬೇಕೆಂದು ಅಪೇಕ್ಷಿಸಿ ಓರ್ವ ಪ್ರವಾದಿ(ಸ)ಯವರ ಬಳಿ ಬಂದಾಗ ಪ್ರವಾದಿಯವರು(ಸ) ನೀಡಿದ ಉಪದೇಶವಿದು. ಈ ವಚನವು ಬಹಳ ಪ್ರಾಮುಖ್ಯವಾದ ಮೂರು ವಿಷಯಗಳನ್ನು ಒಳಗೊಂಡಿದೆ. ಒಂದನೆಯದು ಜೀವನದ ಅನಿಶ್ಚಿತತೆ. ಎರಡನೆಯದು ನಾಲಗೆಯನ್ನು ಜಾಗರೂಕತೆಯಿಂದ ಉಪಯೋಗಿಸುವುದು. ಮೂರನೇಯದು ಅನ್ಯರ ಕೈಯಲ್ಲಿರುವುದನ್ನು ಆಶಿಸದಿರುವುದು. ಜೀವನದ ಯಶಸ್ಸಿನ ಅಡಿಗಲ್ಲು ಈ ಮೂರು ವಿಷಯಗಳಲ್ಲಿ ಅಡಕವಾಗಿದೆ ಎಂಬುದನ್ನು ಸ್ವಲ್ಪ ಆಲೋಚಿಸಿದರೆ ಎಲ್ಲರಿಗೂ ಮನವರಿಕೆಯಾಗುತ್ತದೆ.

ನಮಾಝ್ ಮಾಡುವಾಗ ವಿದಾಯ ಕೋರುವವನ ರೀತಿಯಲ್ಲಿ ನಮಾಝ್ ನಿರ್ವಹಿಸಿರಿ ಎಂದು ಪ್ರವಾದಿ(ಸ) ಒಂದನೆಯದಾಗಿ ಉಪದೇಶಿಸಿರುವರು. ಪ್ರತಿಯೊಂದು ನಮಾಝುನ್ನು ನಿರ್ವಹಿಸುವಾಗಲು ಇದು ನನ್ನ ಜೀವನದ ಕೊನೆಯ ನಮಾಝ್ ಆಗಿರುವುದು ಎಂಬ ರೀತಿಯಲ್ಲಿ ನಿರ್ವಹಿಸಬೇಕು. ಈ ರೀತಿಯಲ್ಲಿ ನಮಾಝ್ ಮಾಡುವಾಗ

ಅದು ಹೆಚ್ಚು ಭಯಭಕ್ತಿ ಮತ್ತು ವಿನಯದಿಂದ ತುಂಬಿರುವುದು. ಇನ್ನು ಅನೇಕ ಬಾರಿ ಪುನರಾವರ್ತಿಸಲಿಕ್ಕಿರುವುದಲ್ಲವೇ ಎಂಬ ರೀತಿಯಲ್ಲಿ ನಮಾಝ್ ನಿರ್ವಹಿಸುವಾಗ ಅದು ಆಲಸ್ಯದಿಂದ ತುಂಬಿದ್ದು, ಅಪೂರ್ಣವಾಗಿಯೂ, ಭಯಭಕ್ತಿಯಿಲ್ಲದ್ದೂ ಆಗಿರುತ್ತದೆ. ಈ ರೀತಿಯ ಧೋರಣೆಯೇ ಒಂದು ದೊಡ್ಡ ಅವಿವೇಕತನವಾಗಿದೆ. ಮನುಷ್ಯನ ಆಯುಷ್ಯವು ಸೀಮಿತವಾಗಿದೆ. ಅದರ ಕೊನೆ ಎಲ್ಲಿದೆ ಎಂದು ಯಾರಿಗೂ ತಿಳಿದಿಲ್ಲ. ಜೀವನವನ್ನು ಸಾರ್ಥಕಗೊಳಿಸ ಬಯಸುವವರು ಪ್ರತಿ ಕ್ಷಣವೂ ಮರಣಕ್ಕೆ ಸಿದ್ಧರಾಗಿರಬೇಕು. ಪ್ರತಿಯೊಂದು ಕರ್ತವ್ಯವನ್ನು, ಹಕ್ಕುಗಳನ್ನು ಪೂರ್ತಿಗೊಳಿಸಬೇಕು. ಯಾವುದೇ ಕೆಲಸ ಮಾಡುವುದಿದ್ದರೂ ಪರಿಪೂರ್ಣ ರೀತಿಯಲ್ಲಿ ನಿರ್ವಹಿಸಬೇಕು. ಇಲ್ಲಿ ನಮಾಝನ್ನು ಉದಾಹರಣೆಯ ರೂಪದಲ್ಲಿ ಪ್ರಸ್ತಾಪಿಸಿರುವುದು ಗಮನಾರ್ಹವಾಗಿದೆ. ನಮಾಝ್ ಅಲ್ಲಾಹನೊಂದಿಗಿರುವ ಹಕ್ಕಾಗಿದೆ. ಮನುಷ್ಯನಿಗೆ ಬಹಳ ಶ್ರೇಷ್ಠವಾದ ಮತ್ತು ಪ್ರಧಾನವಾದ ಹಕ್ಕುಗಳಿರುವುದು ಅಲ್ಲಾಹನೊಂದಿಗಾಗಿದೆ. ಅವುಗಳನ್ನೇ ಮೊದಲು ನಿರ್ವಹಿಸಬೇಕು. ನಮಾಝ್ ಎಂಬುದು ಜೀವನದಲ್ಲಿ ಅನೇಕ ಬಾರಿ ಪುನರಾವರ್ತನೆಯಾಗುವಂತಹದ್ದಾಗಿದೆ. ಅದನ್ನು ಪ್ರತಿಬಾರಿ ನಿರ್ವಹಿಸುವಾಗಲೂ ಇದು ಕೊನೆಯದಾಗಿರಬಹುದು ಎಂಬ ಮನೋಭಾವದೊಂದಿಗೆ ನಿರ್ವಹಿಸಬೇಕು. ಪುನರಾವರ್ತನೆಯಾಗುವಂತಹದ್ದಾಗಿದ್ದರೂ ಪ್ರತಿ ಬಾರಿಯೂ ಪ್ರತಿಯೊಂದು ಕೆಲಸವನ್ನು ಉತ್ತಮ ರೀತಿಯಲ್ಲಿ ಪರಿಪೂರ್ಣವಾಗಿ ನೆರವೇರಿಸಬೇಕು ಎಂಬುದನ್ನು ಇದು ನಮಗೆ ಕಲಿಸುತ್ತದೆ.

ಇತರ ಮನುಷ್ಯರೊಂದಿಗಿನ ಸಂಬಂಧದ ರೀತಿಯನ್ನು ನಿರ್ಣಯಿಸುವುದು ನಾಲಗೆಯಾಗಿದೆ. ಜನರಿಗೆ ಮಿತ್ರರನ್ನು ಶತ್ರುಗಳನ್ನು ಉಂಟು ಮಾಡುವ ಶಕ್ತಿ ಮಾತಿಗಿದೆ. ನಾಳೆ ಕ್ಷಮೆ ಕೇಳಬೇಕಾಗಿ ಬರುವ ರೀತಿಯಲ್ಲಿ ಯಾವುದೇ ಮಾತನ್ನು ಆಡುವುದಿಲ್ಲವೆಂಬ ದೃಢ ನಿರ್ಧಾರ ತೆಗೆದುಕೊಳ್ಳಬೇಕೆಂದು ಪ್ರವಾದಿಯವರು(ಸ) ಇಲ್ಲಿ ಆದೇಶಿಸಿರುವರು. ಈ ರೀತಿಯ ತೀರ್ಮಾನ ಕೈಗೊಳ್ಳುವವರಿಗೆ ಯಾರೂ ಶತ್ರುಗಳಿರುವುದಿಲ್ಲ, ಎಲ್ಲರೂ ಮಿತ್ರರೇ ಆಗಿರುವರು. ನಾಲಗೆಯ ಕಾರಣದಿಂದ ಇಹಲೋಕದಲ್ಲಿ ಕ್ಷಮೆ ಕೇಳಬೇಕಾಗಿ ಬರದ ವ್ಯಕ್ತಿಗಳಿಗೆ ನಾಳೆ ಪರಲೋಕದಲ್ಲೂ ಈ ಕಾರಣಕ್ಕೆ ಕ್ಷಮೆ ಕೇಳಬೇಕಾಗಿ ಬರುವುದಿಲ್ಲ. ಇಲ್ಲಿ ಜನರ ಬೆನ್ನ ಹಿಂದೆ ಮಾತನಾಡಬಾರದೆಂದು, ಸುಳ್ಳು ಹೇಳಬಾರದೆಂದು ಪ್ರವಾದಿಯವರು(ಸ) ಉಪದೇಶಿಸಿರುವುದಲ್ಲ, ಕ್ಷಮೆ ಕೇಳಬೇಕಾಗಿ ಬರುವ ಯಾವುದನ್ನೂ ಮಾತನಾಡಲೇಬಾರದು ಎಂದು ಆದೇಶಿಸಲಾಗಿದೆ. ಅಂದರೆ ಬೈಗುಳ, ಕೆಟ್ಟ ಮಾತುಗಳಲ್ಲದಿದ್ದರೂ ಕೆಲವು ಮಾತುಗಳು ಇತರರನ್ನು ಅಪಮಾನಿಸುವ, ನಿಂದ್ಯರಾಗಿಸುವ ಸಾಧ್ಯತೆಯಿರುತ್ತದೆ. ಸುಳ್ಳಲ್ಲದ ಮಾತುಗಳೆಲ್ಲ ನ್ಯಾಯಯುತ ಮಾತುಗಳಾಗಿರಬೇಕೆಂದೇನಿಲ್ಲ. ನೀವು ಜನರೊಂದಿಗೆ ಮಾತನಾಡುವಾಗ ಹೇಳುತ್ತಿರುವಂತಹದ್ದು ಸಭ್ಯ ಮತ್ತು ಸತ್ಯವಾದದ್ದು ಎಂದು ಮಾತ್ರ ನೋಡಿಕೊಂಡರೆ ಸಾಲದು. ಅದು ಇತರರ ಚಾರಿತ್ರ್ಯವನ್ನು ಕೆಡಿಸುವಂತಹದ್ದೋ, ಅಭಿಮಾನಕ್ಕೆ ಕುಂದು ತರುವಂತಹದ್ದೋ

ಎಂಬುದನ್ನೂ ನೋಡಬೇಕು. ಇತರರ ಗೌರವ ಮತ್ತು ಚಾರಿತ್ರ್ಯವನ್ನು ಕೆಡಿಸುವಂತಹ ಸತ್ಯವಾದ, ಸಭ್ಯವಾದ ಮಾತನ್ನು ಹೇಳಬಾರದು. ಇತರರನ್ನು ನೋಯಿಸಿ, ಕೆರಳಿಸಿ ಬಳಿಕ ಕ್ಷಮೆ ಕೇಳುವುದಕ್ಕಿಂತ ಯಾರನ್ನೂ ನೋಯಿಸದೆ ಇರುವುದು ಉತ್ತಮ ಎಂದು ಈ ಹದೀಸ್ ವಚನವು ನಮಗೆ ಕಲಿಸಿಕೊಡುತ್ತದೆ. ಕ್ಷಮೆಯನ್ನೂ ಕೆಲವೊಂದು ಸಂದರ್ಭದಲ್ಲಿ ಸ್ವೀಕರಿಸಬೇಕೆಂದೇನಿಲ್ಲ, ಸ್ವೀಕರಿಸಿದರೂ ಅದು ಹೃದಯಾಂತರಾಳದಿಂದ ಸ್ವೀಕರಿಸಲ್ಪಟ್ಟಿದೆ ಎನ್ನುವಂತಿಲ್ಲ, ಖಡ್ಗದಿಂದ ಉಂಟಾದ ಗಾಯವು ಔಷಧದಿಂದ ಗುಣವಾಗುತ್ತದೆ. ಆದರೆ ಮಾತಿನ ಗಾಯಕ್ಕೆ ಔಷಧವಿಲ್ಲ,

ಇತರರ ಅಧೀನದಲ್ಲಿರುವುದನ್ನು ಆಶಿಸಬಾರದು ಎಂಬುದು ಮೂರನೆಯ ಉಪದೇಶವಾಗಿದೆ, ಅವರವರ ಸಾಮರ್ಥ್ಯ, ಸ್ಥಾನಮಾನಕ್ಕೆ ತಕ್ಕುದಾದುದನ್ನೇ ಬಯಸಬೇಕು. ಜನರೊಂದಿಗಿರುವುದೆಲ್ಲ ನನಗೂ ಸಿಗಬೇಕು. ನೆರೆಮನೆಯಲ್ಲಿರುವುದೆಲ್ಲವೂ ತನ್ನ ಮನೆಯಲ್ಲೂ ಇರಬೇಕು ಎಂದು ಬಯಸಿ ಅದರ ಹಿಂದೆ ಓಡುತ್ತಾ ಇರುವ ವ್ಯಕ್ತಿಗೆ ಸ್ವಂತವಾದ ಜೀವನ ಎಂಬುದಿರುವುದಿಲ್ಲ, ಭೌತಿಕ ವಸ್ತುಗಳ ಗುಲಾಮರವರು. ಕಣ್ಣಿಗೆ ಕಾಣಿಸಿದುದೆಲ್ಲವನ್ನೂ ತನ್ನದಾಗಿಸಿಕೊಳ್ಳಬೇಕೆಂಬ ಓಡಾಟದಲ್ಲಿ ಅವರಿಗೆ ಹಲಾಲ್ ಹರಾಮ್‌ಗಳ ಪ್ರಜ್ಞೆ ಇರುವುದಿಲ್ಲ, ಹೀಗೆ ಓಡಾಡುವವರು ಎಂದಿಗೂ ತಮ್ಮ ಗುರಿಯನ್ನು ತಲುಪುವುದಿಲ್ಲ ಎಂಬುದು ಬೇರೆ ವಿಷಯ. ಈ ರೀತಿ ಅವರು ಎರಡು ಲೋಕಗಳಲ್ಲೂ ಪರಾಜಿತರಾಗುವರು.



# 22. ಪರಿಸ್ಥಿತಿಯ ಅನಿವಾರ್ಯತೆ

عَنْ أَبِي هُرَيْرَةَ رَضِيَ اللّٰهُ عَنْهُ اَنَّ رَسُولَ اللّٰهِ ﷺ قَالَ كُلُّ مَوْلُودٍ يُولَدُ عَلَى الْفِطْرَةِ فَأَبَوَاهُ يُهَوِّدَانِهِ أَوْ يُنَصِّرَانِهِ أَوْ يُمَجِّسَانِهِ. (بخارى)

ಅಬೂಹುರ್ರೈರರು(ರ) ಪ್ರವಾದಿ(ಸ)ಯವರಿಂದ ಉಲ್ಲೇಖಿಸಿರುತ್ತಾರೆ. 'ಹುಟ್ಟುವ ಪ್ರತಿಯೊಂದು ಮಗುವೂ ಪ್ರಕೃತಿಯಲ್ಲೇ ಹುಟ್ಟುತ್ತದೆ. ಆ ಮೇಲೆ ಅದರ ಮಾತಾಪಿತರು ಅದನ್ನು ಯಹೂದಿಯಾಗಿಯೋ, ಕ್ರೈಸ್ತನಾಗಿಯೋ, ಮಜೂಸಿಯಾಗಿಯೋ (ಅಗ್ನಿ ಆರಾಧಕರು) ಮಾಡಿಬಿಡುತ್ತಾರೆ.' (ಬುಖಾರಿ)

ಧರ್ಮದ ಮೇಲಿನ ವಿಶ್ವಾಸವು ಮನುಷ್ಯನ ಪ್ರಾಕೃತಿಕ ಸ್ವಭಾವದಲ್ಲಿರುತ್ತದೆಯೇ? ಮನುಷ್ಯ ಪ್ರಕೃತಿಯಲ್ಲಿರುವ ಮೂಲಗುಣ ಒಳಿತೋ ಕೆಡುಕೋ? ಸರಿ-ತಪ್ಪುಗಳನ್ನು ಗ್ರಹಿಸುವ ಆಧ್ಯಾತ್ಮಿಕ ಸಾಮರ್ಥ್ಯದೊಂದಿಗೆ ಮನುಷ್ಯ ಶಿಶು ಜನ್ಮ ತಾಳುತ್ತದೆಯೇ? ಶಿಕ್ಷಣ ತಜ್ಞರು, ಸಮಾಜ ಶಾಸ್ತ್ರಜ್ಞರು, ತತ್ವಜ್ಞಾನಿಗಳು ಸಾಧಾರಣ ಎತ್ತಿರುವ ಪ್ರಶ್ನೆಗಳಿವು. ಈ ಪ್ರಶ್ನೆಗಳಿಗೆ ದೈವಿಕ ಮಾರ್ಗದರ್ಶನದ ಬೆಳಕಿನಲ್ಲಿ ಸುವ್ಯಕ್ತವಾದ ಉತ್ತರವನ್ನು ಪ್ರವಾದಿ(ಸ) ನಮಗೆ ಕಲಿಸಿಕೊಟ್ಟಿರುವರು. ಪ್ರತಿಯೊಂದು ಮಗುವೂ ಮೂಲ ಪ್ರಕೃತಿಯಲ್ಲಿ ಜನಿಸುತ್ತದೆ ಎಂಬುದು ಈ ಹದೀಸ್ ಕಲಿಸುವ ಮೂಲ ತತ್ವವಾಗಿದೆ. ಮನುಷ್ಯ ಪ್ರಕೃತಿ ನಿಜವಾಗಿ ರುಜುವಾಗಿರುತ್ತದೆ. ಅಶುದ್ಧವಾದ, ಕೆಟ್ಟದಾದ ಯಾವುದೂ ಅದರಲ್ಲಿರುವುದಿಲ್ಲ, ಅದೇ ರೀತಿಯಲ್ಲಿ ಅದು ಬೆಳವಣಿಗೆ ಹೊಂದುವಂತಹದ್ದೂ ಆಗಿದೆ. ಪ್ರಕೃತಿಗೆ ಪೂರಕವಾದ ಗುಣಗಳನ್ನು ಬೆಳೆಸುತ್ತ, ವಿಕಾಸ ಹೊಂದಿ ಮನುಷ್ಯ ದೇವಚರರಂತೆ ಉನ್ನತಿಗೇರಬಹುದು.

ವಿಕಾಸದ ಇನ್ನೊಂದು ಮಗ್ಗುಲು ಅಧಃಪತನವಾಗಿದೆ. ವಿಕಾಸವೆಂದು ನಾವು ಭಾವಿಸಿರುವಂತಹದ್ದು ಅಧಃಪತನವಾಗಿರಲೂ ಬಹುದು. ಮನುಷ್ಯನು ಈ ಸಾಧ್ಯತೆಗಳಲ್ಲಿ ಯಾವುದನ್ನು ಅವಲಂಬಿಸುತ್ತಾನೋ ಅದುವೇ ಅವನ ಭವಿಷ್ಯವಾಗಿರುವುದು.

ಪರಿಶುದ್ಧವಾದ ಪ್ರಕೃತಿಯಲ್ಲಿ ಜನಿಸುವ ಮನುಷ್ಯನಿಗೆ ಕೆಡುಕನ್ನು ಆಸ್ವಾದಿಸಲು ಸಾಧ್ಯವಾಗುವುದು ಹೇಗೆ? ಇಲ್ಲಿ ಮನುಷ್ಯನ ಕುಟುಂಬ ಸಂಬಂಧ ಮತ್ತು ಪರಿಸರದ

ಮಹತ್ವವು ಮನವರಿಕೆಯಾಗುವುದು. ಆಗ ತಾನೇ ಜನಿಸಿದ ಮಗುವಿನ ಮನಸ್ಸನ್ನು ಕನ್ನಡಿಗೆ ಹೋಲಿಸಬಹುದು. ಅದರಲ್ಲಿ ಕಲೆಗಳಾಗಲೀ, ಗೀರುಗಳಾಗಲಿ ಇರುವುದಿಲ್ಲ. ಕನ್ನಡಿಯ ಮುಂದೆ ತೋರಿಸಲ್ಪಡುವ ಪ್ರತಿಯೊಂದು ವಸ್ತುವಿನ ಪ್ರತಿಬಿಂಬವೂ ಅದರಲ್ಲಿ ಗೋಚರವಾಗುತ್ತದೆ. ಇದೇ ರೀತಿಯಲ್ಲಿ ಸುತ್ತಮುತ್ತಲಿನ ವಿಷಯಗಳು, ವರ್ತನೆಗಳು ಮಗುವಿನ ಮನಸ್ಸೆಂಬ ಕನ್ನಡಿಯಲ್ಲಿ ಪ್ರತಿಬಿಂಬಿತವಾಗುತ್ತದೆ.

ಸಾಧಾರಣವಾಗಿ ಮುಖ ನೋಡುವ ಕನ್ನಡಿಯಲ್ಲಿ ವಸ್ತುಗಳನ್ನು ಅದರ ಮುಂದಿನಿಂದ ತೆಗೆದುಬಿಟ್ಟರೆ ಅದರ ಪ್ರತಿಬಿಂಬವೂ ಅಪ್ರತ್ಯಕ್ಷವಾಗುವುದು. ಆದರೆ ಮಗುವಿನ ಮನಸ್ಸು ಆ ರೀತಿಯಲ್ಲ, ಅದರಲ್ಲಿ ಬೀಳುವ ಪ್ರತಿಬಿಂಬವು ಅದರ ಮುಂದಿನಿಂದ ಹೊರಟು ಹೋದ ಬಳಿಕವೂ ಉಳಿದಿರುವುದು. ಅವುಗಳಲ್ಲಿ ಕೆಲವು ಕಾಲಕ್ರಮೇಣ ಆ ಕನ್ನಡಿಯ ಭಾಗವೇ ಆಗಿಬಿಡುವುದು.

ಅಂದರೆ, ಒಳಿತನ್ನು ನೋಡುವ ಮತ್ತು ಅನುಸರಿಸುವ ಸಾಮರ್ಥ್ಯದೊಂದಿಗೆ ಮನುಷ್ಯ ಶಿಶುಗಳು ಜನ್ಮತಾಳುತ್ತವೆ. ಆದರೆ ಸುತ್ತಮುತ್ತಲಿನ ಪ್ರದೇಶದಲ್ಲಿ ಅದು ನೋಡುವುದು, ಅನುಭವಿಸುವುದು ಕೆಡುಕುಗಳನ್ನಾಗಿದ್ದರೆ, ಅದನ್ನೇ ಅದು ತಮ್ಮದಾಗಿಸುತ್ತದೆ ಮತ್ತು ಅನುಸರಿಸುತ್ತದೆ. ಒಂದು ಮಗುವಿನ ಬಗ್ಗೆ ಹೇಳುವುದಾದರೆ ಅದು ಮೊದಲು ಪರಿಚಯ ಮಾಡಿಕೊಳ್ಳುವುದು ತನ್ನ ಕುಟುಂಬವನ್ನಾಗಿದೆ. ಮಾತಾಪಿರತ ಮತ್ತು ಕುಟುಂಬದ ಸದಸ್ಯರ ಸ್ವಭಾವ, ಚಿಂತನೆಗಳನ್ನು ಅನುಸರಿಸಲು ಶ್ರಮಿಸುತ್ತದೆ. ಈ ರೀತಿಯಲ್ಲಿ ಅದಕ್ಕೆ ತಕ್ಕುದಾದ ವ್ಯಕ್ತಿತ್ವವನ್ನು ಪಡೆದುಕೊಂಡು ಬೆಳೆಯುತ್ತದೆ.

ಮುಸ್ಲಿಮ್ ಮಾತಾಪಿತರು ವಿಶೇಷವಾಗಿ ಗಮನಿಸಬೇಕಾದ ವಿಷಯಗಳಿವು. ಮಕ್ಕಳನ್ನು ಡಾಕ್ಟರ್, ಇಂಜಿನಿಯರ್, ಕಲೆಕ್ಟರ್‌ಗಳಾಗಿಸುವ ಭರಾಟೆಯಲ್ಲಿ ನಮ್ಮಲ್ಲಿ ಅನೇಕರು ತಮ್ಮ ಮಕ್ಕಳನ್ನು ಮುಸ್ಲಿಮರಾಗಿಸುವುದನ್ನು, ಮನುಷ್ಯನಾಗಿಸುವುದನ್ನು ಮರೆತು ಬಿಡುತ್ತಾರೆ. ಮಗನನ್ನು ಐ.ಎ.ಎಸ್ ಮಾಡಿಸಿದ ತಂದೆಗೆ ಅಲ್ಲಾಹನ ಮುಂದೆ ನಾನು ನನ್ನ ಮಗನ ಬಗ್ಗೆ ಇದ್ದ ಜವಾಬ್ದಾರಿಯನ್ನು ನೆರವೇರಿಸಿರುವೆ ಎಂದು ಸಮರ್ಥಿಸಲು ಸಾಧ್ಯವಿಲ್ಲ ಅಥವಾ ಈ ರೀತಿ ತಂದೆ ತನ್ನನ್ನು ಸಮರ್ಥಿಸಿಕೊಂಡರೂ, ತಾನು ತನ್ನ ಹಣವನ್ನು ಖರ್ಚು ಮಾಡಿ, ಕೂಡಿಹಾಕಿ ಬೆಳೆಸಿದ ತನ್ನ ಮಗನು ತನಗೆದುರೇ ಸಾಕ್ಷಿ ಹೇಳುವುದರ ಜೊತೆ ಅವನಿಗೆ ನೀಡಲಾಗುವ ಶಿಕ್ಷೆಯ ಇಮ್ಮಡಿ ಯಾತನೆಯನ್ನು ಮಾತಾಪಿತರಿಗೆ ನೀಡಬೇಕೆಂದು ಅಪೇಕ್ಷಿಸಬಹುದು. ತಮ್ಮ ಸಾಮರ್ಥ್ಯ ಮತ್ತು ಪ್ರಯತ್ನದ ಪರಮಾವಧಿ ಪರಿಶ್ರಮ ಪಟ್ಟು ಮಕ್ಕಳಲ್ಲಿ ಸತ್ಯವಿಶ್ವಾಸ, ಧಾರ್ಮಿಕ ಪ್ರಜ್ಞೆಗಳನ್ನು ಬೇರೂರಿಸಲು ಪ್ರಯತ್ನಿಸುವ ಹೆತ್ತವರು ಮಾತ್ರ ಅಲ್ಲಾಹನ ಮುಂದೆ ತಮ್ಮ ಜವಾಬ್ದಾರಿಯನ್ನು ನೆರವೇರಿಸಿದವರು ಎಂದೆನಿಸಿಕೊಳ್ಳುವರು.

ಮಕ್ಕಳನ್ನು ಮದ್ರಸಕ್ಕೆ, ಸ್ಕೂಲಿಗೆ ಸೇರಿಸಿದರೆ ಅವರ ತರಬೇತಿ, ಸ್ವಭಾವ, ವಿದ್ಯಾಭ್ಯಾಸದ ವಿಷಯದಲ್ಲಿ ತಮ್ಮ ಕರ್ತವ್ಯ ಮುಗಿಯಿತು. ಮುಂದೆ ಏನಾದರೂ ತಮಗದರ

ಜವಾಬ್ದಾರಿಯಿಲ್ಲವೆಂದು ಕೆಲವರು ಭಾವಿಸುತ್ತಾರೆ. ಇದು ಕೇವಲ ಮಿಥ್ಯೆಯಾಗಿದೆ. ಮಕ್ಕಳು ಪಾಠಶಾಲೆಯಲ್ಲಿ ಕಲಿಯುವ ವಿದ್ಯೆಗಿಂತ ಎಷ್ಟೋ ಪಟ್ಟು ಹೆಚ್ಚಿನದನ್ನು ಕುಟುಂಬದವರ ಒಡನಾಟದಲ್ಲಿ ಕಲಿಯುತ್ತಾರೆ. ಕುಟುಂಬ ಮತ್ತು ಸುತ್ತಲಿನ ಪರಿಸರದ ಪ್ರಭಾವದಿಂದ ಸ್ವಭಾವ ಮತ್ತು ಚಾರಿತ್ರ್ಯವನ್ನು ಮಕ್ಕಳು ಅಳವಡಿಸಿಕೊಳ್ಳುತ್ತಾರೆ. ಮಾತಾಪಿತರು ಜಾಗೃತರಾಗದೆ ಹೋದರೆ ಪಾಠಶಾಲೆಗಳಿಗೆ ಮಕ್ಕಳ ಸ್ವಭಾವವನ್ನು ರೂಪೀಕರಿಸುವಲ್ಲಿ ವಿಶೇಷವಾಗಿ ಏನನ್ನೂ ಮಾಡಲಿಕ್ಕೆ ಸಾಧ್ಯವಿಲ್ಲ. ಕುಟುಂಬದ ಹೊರಗಿರುವ ಕಲುಷಿತಗೊಂಡ ಒಡನಾಟಗಳೂ ಮಕ್ಕಳನ್ನು ಆಕರ್ಷಿಸುತ್ತದೆ. ಆ ರೀತಿಯ ಕೆಟ್ಟ ಆಕರ್ಷಣೆಯಿಂದ ಅವರನ್ನು ದೂರವಿರಿಸಲು ಹೆತ್ತವರಿಗೆ ಸಾಧ್ಯವಾಗುವಂತೆ ಬೇರೆ ಯಾರಿಗೂ ಸಾಧ್ಯವಾಗುವುದಿಲ್ಲ.

ಇಲ್ಲಿ ಒಂದು ಸಂಶಯವು ಉಂಟಾಗಬಹುದು. ಮನುಷ್ಯನ ವ್ಯಕ್ತಿತ್ವವನ್ನು ರೂಪೀಕರಿಸುವವರು ಅವರ ಹೆತ್ತವರು ಎಂದು ಹೇಳುವಾಗ ಮನುಷ್ಯನು ಪ್ರಕೃತಿಯ ಸೃಷ್ಟಿಯೆಂಬ ನಿಲುವನ್ನು ಇಸ್ಲಾಮ್ ಅಂಗೀಕರಿಸುತ್ತದೆಯಲ್ಲವೇ? ವ್ಯಕ್ತಿಯ ವ್ಯಕ್ತಿತ್ವ ರೂಪಿಸುವಲ್ಲಿ ಪ್ರಕೃತಿಗೂ ಸಾಮರ್ಥ್ಯವಿದೆ ಎಂಬ ವಾಸ್ತವಿಕತೆಯನ್ನು ಒಂದು ತಾಕೀತೆಂಬ ನೆಲೆಯಲ್ಲಿ ಇಸ್ಲಾಮ್ ಮೊದಲೇ ಹೇಳಿರುತ್ತದೆ. ಪರಿಸ್ಥಿತಿಯು ಹೇಗಿದ್ದರೂ ಪ್ರತಿಯೊಬ್ಬ ಮನುಷ್ಯನು ಜನ್ಮತಃ ಪರಿಶುದ್ಧನು. ಒಳಿತುಗಳನ್ನು ಅಳವಡಿಸಿಕೊಳ್ಳಲು ಸಾಮರ್ಥ್ಯವುಳ್ಳವನಾಗಿ ಸೃಷ್ಟಿಸಲ್ಪಟ್ಟಿದ್ದಾನೆ. ಪ್ರತಿಯೊಬ್ಬ ಮನುಷ್ಯನಿಗೂ ಒಳಿತು-ಕೆಡುಕುಗಳನ್ನು ಬೇರ್ಪಡಿಸಿ ತಿಳಿಯುವ ವಿವೇಕ ಶಕ್ತಿಯೂ ಇದೆ. ಪರಿಸ್ಥಿತಿಯ ಪ್ರತಿಕೂಲತೆಯಿಂದಾಗಿ ದಾರಿ ತಪ್ಪಿದ ಮನುಷ್ಯನೂ ಸ್ವಂತ ವಿವೇಕ ಶಕ್ತಿಯನ್ನು, ಒಳಿತನ್ನು ಅಳವಡಿಸಿಕೊಳ್ಳುವ ಸಾಮರ್ಥ್ಯವನ್ನು ಪ್ರಯೋಜನ ಪಡಿಸದ ಕಾರಣದಿಂದ ಪಾಪಿಯೆನಿಸಿಕೊಳ್ಳುತ್ತಾನೆ. ಆದುದರಿಂದ ಆ ವ್ಯಕ್ತಿ ವಿಚಾರಣೆಗೆ ಒಳಪಡುವನು. ಆ ವ್ಯಕ್ತಿಯನ್ನು ದಾರಿ ತಪ್ಪಿಸುವಲ್ಲಿ ಸಹಾಯ ಮಾಡಿದ ಕೆಟ್ಟ ಪರಿಸ್ಥಿತಿಯನ್ನು ನಿರ್ಮಿಸಿದವರೂ ಶಿಕ್ಷಿಸಲ್ಪಡುವರು. ಪರಿಸ್ಥಿತಿಯ ಪ್ರತಿಕೂಲತೆಯಿಂದ ಸಂತಾನಗಳಿಗೆ, ಸಂತಾನದ ಬುದ್ಧಿ, ವಿವೇಕ ಶಕ್ತಿಗೆ ಪ್ರಯೋಜನವನ್ನುಂಟು ಮಾಡಲಾಗಲಿಲ್ಲ ಎಂಬ ಹೆಸರಿನಲ್ಲಿ ರಕ್ಷಕರು ರಕ್ಷಣೆ ಹೊಂದಲು ಸಾಧ್ಯವಿಲ್ಲ.



## 23. ಅಲ್ಲಾಹ್ ಮತ್ತು ದಾಸರು

عن أبي ذر رضي الله عنه قال رسول الله ﷺ

يَقُولُ اللَّهُ عزوجل أَنَا عِنْدَ ظَنِّ عَبْدِي بِي وَأَنَا مَعَهُ إِذَا ذَكَرَنِي فَإِنْ ذَكَرَنِي فِي نَفْسِهِ ذَكَرْتُهُ فِي نَفْسِي وَإِنْ ذَكَرَنِي فِي مَلَإٍ ذَكَرْتُهُ فِي مَلَإٍ خَيْرٍ مِنْهُمْ وَإِنْ تَقَرَّبَ إِلَيَّ بِشِبْرٍ تَقَرَّبْتُ إِلَيْهِ ذِرَاعًا وَإِنْ تَقَرَّبَ إِلَيَّ ذِرَاعًا تَقَرَّبْتُ إِلَيْهِ بَاعًا وَإِنْ أَتَانِي يَمْشِي أَتَيْتُهُ هَرْوَلَةً. (بخاری، مسلم، مسند أحمد)

ಅಬೂದರ್(ರ) ಉಲ್ಲೇಖಿಸಿರುತ್ತಾರೆ. ಪ್ರವಾದಿ(ಸ) ಹೇಳಿದರು- ಅಜೇಯನೂ ಪ್ರತಾಪಶಾಲಿಯೂ ಆದ ಅಲ್ಲಾಹನು ಹೀಗೆ ಹೇಳುತ್ತಾನೆ: 'ನನ್ನ(ಸತ್ಯವಿಶ್ವಾಸಿ) ದಾಸನು ನನ್ನ ಬಗ್ಗೆ ಯಾವ ರೀತಿಯ ನಂಬಿಕೆ ಇರಿಸುತ್ತಾನೋ ನನ್ನನ್ನು ಹಾಗೆಯೇ ಕಾಣುವನು. ಅವನು ನನ್ನನ್ನು ಸ್ಮರಿಸುವಾಗ ನಾನು ಅವನ ಜೊತೆಗಿರುತ್ತೇನೆ. ಅವನು ನನ್ನನ್ನೂ ಏಕಾಂತದಲ್ಲಿ (ರಹಸ್ಯವಾಗಿ) ಸ್ಮರಿಸುವಾಗ ನಾನೂ ಅವನನ್ನು ಏಕಾಂತದಲ್ಲಿ ಸ್ಮರಿಸುತ್ತೇನೆ. ಅವನು ನನ್ನನ್ನು ಜನರ ಗುಂಪಿನಲ್ಲಿ ಸ್ಮರಿಸುವಾಗ ನಾನು ಅವನನ್ನು ಮಾನವರಿಗಿಂತ ಉತ್ತಮರಾದವರ ಗುಂಪಿನಲ್ಲಿ ಸ್ಮರಿಸುತ್ತೇನೆ. (ಅಂದರೆ ದೇವಚರರ ಗುಂಪಿನಲ್ಲಿ ಅವನ ಬಗ್ಗೆ ಪ್ರಸ್ತಾಪಿಸುತ್ತೇನೆ) ಅವನು ನನ್ನತ್ತ ಒಂದು ಗೇಣಿನಷ್ಟು ಹತ್ತಿರವಾಗುವಾಗ ನಾನು ಅವನತ್ತ ಒಂದು ಕೈಯಷ್ಟು ಹತ್ತಿರವಾಗುತ್ತೇನೆ. ಅವನು ನನ್ನತ್ತ ನಡೆದುಕೊಂಡು ಬರುವಾಗ ನಾನು ಅವನತ್ತ ಓಡಿಕೊಂಡು ಹೋಗುತ್ತೇನೆ.'

(ಬುಖಾರಿ, ಮುಸ್ಲಿಮ್, ಮುಸ್ನದ್ ಅಹ್ಮದ್)

ಅಲ್ಲಾಹನ ಬಗ್ಗೆ ಅಲ್ಲಾಹನ ದಾಸರಾದ ಮನುಷ್ಯರಿಗೆ ಯಾವ ರೀತಿಯ ನಂಬಿಕೆ ಇರಬೇಕು? ಅವನಿಗೆ ಅವನ ದಾಸರ ಬಗ್ಗೆ ಯಾವ ದೃಷ್ಟಿಕೋನವಿದೆ ಎಂಬುದನ್ನೆಲ್ಲ ಬಹಳ ಸರಳವಾಗಿ ಈ ಹದೀಸಿನ ಮೂಲಕ ವಿವರಿಸಲಾಗಿದೆ. ಇದು ಪ್ರವಾದಿಯವರ(ಸ) ಸ್ವಂತ ಹೇಳಿಕೆಯಲ್ಲ, ಅಲ್ಲಾಹನು ಈ ರೀತಿ ಹೇಳಿರುತ್ತಾನೆ ಎಂದು ಪ್ರವಾದಿ(ಸ)ಯವರು ಹೇಳಿರುವ ವಿಷಯಗಳಿವು. ಈ ಮುನ್ನುಡಿಯು ಈ ವಚನದ ಮಹತ್ವ ಮತ್ತು ಮೌಲ್ಯವನ್ನು ಇಮ್ಮಡಿಗೊಳಿಸುತ್ತದೆ.

ಆರಂಭದಲ್ಲಿ ದಾಸನು ನನ್ನ ಬಗ್ಗೆ ಯಾವ ರೀತಿಯ ನಂಬಿಕೆ ಇರಿಸುತ್ತಾನೋ, ಅವನಿಗೆ ಸಂಬಂಧಿಸಿದಂತೆ ನಾನು ಅವನು ತಿಳಿದಂತೆಯೇ ಇರುತ್ತೇನೆ ಎಂದು ಅಲ್ಲಾಹನು ಹೇಳುತ್ತಾನೆ. ಅಂದರೆ ಅಲ್ಲಾಹನು ಕರುಣಾಳು, ದಯಾಮಯಿ, ಉದಾರಿ ಎಂದು ನಂಬುವುದಾದರೆ ಅವರಿಗೆ ಸಂಬಂಧಪಟ್ಟಂತೆ ಅಲ್ಲಾಹನು ಅದೇ ರೀತಿ ಆಗಿರುತ್ತಾನೆ. ಯಾರಾದರೂ ಅಲ್ಲಾಹನ ಬಗ್ಗೆ ಅವನು ಕಠಿಣನು, ನಿಷ್ಠುರನು, ಕ್ರೂರನು ಎಂದು ನಂಬುವುದಾದರೆ ಅವನ ಜೊತೆ ಅಲ್ಲಾಹನ ವರ್ತನೆಯು ಅದೇ ರೀತಿ ಆಗಿರುವುದು. ಕಾರಣವೇನೆಂದರೆ ಅಲ್ಲಾಹನನ್ನು ಅರಿಯಬೇಕಾದ ರೀತಿಯಲ್ಲಿ ಅರಿತುಕೊಂಡವರಿಗೆ ಮಾತ್ರ ಅವನ ಪ್ರೀತಿ ಮತ್ತು ಕರುಣೆಯ ಬಗ್ಗೆ ತಿಳಿಯಲು ಸಾಧ್ಯವಾಗುತ್ತದೆ. ಅಲ್ಲಾಹನನ್ನು ತಪ್ಪಾಗಿ ಅರಿತುಕೊಂಡವರು ಮತ್ತು ಅದನ್ನು ಅನುಸರಿಸಿ ಜೀವಿಸುವವರು ಅಲ್ಲಾಹನನ್ನು ಕಠಿಣ ಮತ್ತು ಕ್ರೂರನೆಂದು ತಿಳಿಯುತ್ತಾರೆ.

'ಅಲ್ಲಾಹ್' ಮನುಷ್ಯರನ್ನು ಹಿಡಿದು ನರಕದಲ್ಲಿ ಹಾಕಲು ಶ್ರಮಿಸುವ ಶಕ್ತಿಯಾಗಿದ್ದಾನೆ ಎಂದು ಕೆಲವು ವಿಶ್ವಾಸಿಗಳು ಭಾವಿಸಿಕೊಂಡಿದ್ದಾರೆ. ಅವನು ಅತಿ ಭಯಾನಕವಾದ ನರಕದಲ್ಲಿ ಭಯಂಕರ ಕಿಂಕರರನ್ನು ಸೃಷ್ಟಿಸಿರುವನು. ಮನುಷ್ಯನು ಪಾಲಿಸಲು ಕಷ್ಟವಿರುವ ಅನೇಕ ವಿಧಿ ನಿಷೇಧಗಳನ್ನು ಅವರ ಮೇಲೆ ಹೇರಿರುವನು. ಅದರ ಜೊತೆಗೆ ಅದನ್ನು ಉಲ್ಲಂಘಿಸಲು ಪ್ರೇರೇಪಿಸುವ ಅತಿ ಸಮರ್ಥರಾದ ಶೈತಾನರನ್ನು ಬಿಟ್ಟಿರುವನು. ಬಳಿಕ ಮನುಷ್ಯರು ಈ ವಿಧಿ ನಿಷೇಧಗಳನ್ನು ಅಣು ಗಾತ್ರದಷ್ಟಾದರೂ ಉಲ್ಲಂಘಿಸುತ್ತಿದ್ದಾರೆಯೇ ಎಂದು ಸದಾ ನೋಡುತ್ತಿರಲು ಇಬ್ಬರು ದೇವಚರರನ್ನು ನಿಯೋಗಿಸಿರುವನು. ಅವರು ಅವನ ಪ್ರತಿಯೊಂದು ಕೆಡುಕುಗಳನ್ನು ದಾಖಲಿಸುತ್ತಿರುವರು. ಮರಣಾನಂತರ ಅಲ್ಲಾಹನು ಮನುಷ್ಯನು ಜನಿಸಿದ ಸಮಯದಿಂದ ಮರಣದ ವರೆಗೆ ಮಾಡಿದ ಪ್ರತಿಯೊಂದು ಕೆಲಸಗಳ ಕುರಿತು ವಿಚಾರಣೆ ನಡೆಸುವನು. ಸಣ್ಣ ಮತ್ತು ದೊಡ್ಡದಾದ ಪ್ರತಿಯೊಂದು ತಪ್ಪಿಗೆ ಅವನನ್ನು ಹಿಡಿದು ನರಕದಲ್ಲಿ ಹಾಕಲಾಗುವುದು. ಜೀವನ ಪರ್ಯಂತ ಲೋಕ ವಿರಕ್ತದಂತೆ ದೇವನ ಆರಾಧನೆಯಲ್ಲಿ ನಿರತರಾಗುವ ಕೆಲವು ಸೀಮಿತ ಜನರಿಗೆ ಮಾತ್ರ ಅಲ್ಲಾಹನ ವಿಚಾರಣೆಯಿಂದ, ಶಿಕ್ಷೆಯಿಂದ ರಕ್ಷಣೆ ಹೊಂದಲು ಸಾಧ್ಯವೆಂದು ಕೆಲವರು ಭಾವಿಸಿಕೊಂಡಿದ್ದಾರೆ.

ಆದರೆ, ಈ ರೀತಿಯ ನಂಬಿಕೆಯು ಒಂದು ದೊಡ್ಡ ತಪ್ಪು ಕಲ್ಪನೆಯಾಗಿದೆ. ಅಲ್ಲಾಹನು ನರಕ ಇತ್ಯಾದಿಗಳನ್ನು ಸೃಷ್ಟಿಸಿರುವುದು ಅಲ್ಲಾಹನಿಗೆ ಮನುಷ್ಯರನ್ನು ನರಕಕ್ಕೆ ಹಾಕುವುದು ಇಷ್ಟ ಮತ್ತು ಸಂತೋಷದ ಕೆಲಸ ಎಂಬ ಕಾರಣಕ್ಕಲ್ಲ, ಅದು ಸ್ವರ್ಗದ ವಿರುದ್ಧವಾಗಿದೆ. ಸ್ವರ್ಗವು ಮನುಷ್ಯರೊಂದಿಗಿನ ಅಲ್ಲಾಹನ ಮೇರೆಗಳಿಲ್ಲದ ಪ್ರೀತಿ ಮತ್ತು ಕರುಣೆಯ ಕಾರಣದಿಂದಾಗಿ ಸೃಷ್ಟಿಸಲ್ಪಟ್ಟಿದೆ. ಅವನು ಮನುಷ್ಯರ ಮೇಲೆ ವಿಧಿ ನಿಷೇಧಗಳನ್ನು ಹೇರಿರುವುದು ಮನುಷ್ಯನ ಬಗ್ಗೆ ದೇವನಿಗಿರುವ ಕರುಣೆಯ ಕಾರಣದಿಂದಾಗಿದೆ. ಅಲ್ಲಾಹನ ನಿರ್ದೇಶನಗಳ ಸರಿಯಾದ ಪಾಲನೆಯೇ ಮನುಷ್ಯ ಪಿಶಾಚಿಯ ವಂಚನೆಯಿಂದ ರಕ್ಷಣೆ ಹೊಂದಲಿಕ್ಕಿರುವ ಏಕೈಕ ಉಪಾಧಿಯಾಗಿದೆ. ಇಲ್ಲದೆ ಹೋಗಿದ್ದರೆ ಮನುಷ್ಯನಿಗೆ ಪಿಶಾಚಿಯ ವಂಚನೆಗೊಳಗಾಗಿ

ಸಂಪೂರ್ಣ ನಾಶ ಹೊಂದಿ ಬಿಡುತ್ತಿದ್ದನು. ಹಾಗೆ ನೋಡಿದರೆ ಮನುಷ್ಯನು ಅಸಹ್ಯವೆಂದು, ಅನಗತ್ಯವೆಂದು ಗೊತ್ತಾಗುತ್ತದೆ. ಅಲ್ಪಜ್ಞಾನಿ ಮತ್ತು ದೂರದೃಷ್ಟಿಯಿಲ್ಲದವರಿಗೆ ಮಾತ್ರ ಇದನ್ನು ಬೇಗನೇ ಅರ್ಥ ಮಾಡಿಕೊಳ್ಳಲಿಕ್ಕೆ ಸಾಧ್ಯವಾಗುವುದಿಲ್ಲ ಎಂಬುದು ವಾಸ್ತವ. ವಸ್ತುಗಳು ಮತ್ತು ಪರಿಸ್ಥಿತಿಯನ್ನು ಉಂಟು ಮಾಡಿರುವ ಹಿಂದಿರುವ ಉದ್ದೇಶ ಯಾವಾಗಲೂ ವಿಶಿಷ್ಟ ಕರುಣೆಯಿಂದ ಕೂಡಿರುತ್ತದೆ. ಅವುಗಳ ಜೊತೆ ಮನುಷ್ಯನ ವರ್ತನೆ ಕೆಟ್ಟು ಹೋದಾಗ ಅವುಗಳ ಪರಿಣಾಮವೂ ಕೆಟ್ಟದಾಗುತ್ತದೆ.

''ನಾನು ನನ್ನ ದಾಸನು ನನ್ನ ಬಗ್ಗೆ ಇಟ್ಟಿರುವ ನಂಬಿಕೆಯ ಹಾಗೆಯೇ ಇರುವೆನು'' ಎಂಬುದು ಈ ವಚನದ ಪ್ರಥಮ ವಾಕ್ಯದ ಪದಾನುಪದ ಅನುವಾದ. ಯಾರು ಅಲ್ಲಾಹನನ್ನು ಸ್ಮರಿಸುತ್ತಾರೋ ಅವರೊಂದಿಗೆ ಅಥವಾ ಅವನ ಜೊತೆ ಅಲ್ಲಾಹನಿದ್ದಾನೆ ಎಂಬ ಆಶಯವನ್ನು ಈ ಪದಗಳು ಒಳಗೊಂಡಿವೆ. ಅಂದರೆ ಒಬ್ಬ ಮನುಷ್ಯ ಅಲ್ಲಾಹನನ್ನು ಸ್ಮರಿಸುವಾಗ ಅಲ್ಲಾಹನು ಆ ಮನುಷ್ಯನ ಬಗ್ಗೆ ಅಶ್ರದ್ಧನಾಗಿರುವುದಿಲ್ಲ, ನೆನಪಿಸದಿರುವುದಿಲ್ಲ, ಅವನಿಂದ ದೂರ ಉಳಿಯುವವನಲ್ಲ, ಆ ಇಷ್ಟ ದಾಸನನ್ನು ಸ್ಮರಿಸುತ್ತಾ, ಅವನನ್ನು ಆಲಿಸುತ್ತಾ ಅಲ್ಲಾಹನು ಅವನ ಸಮೀಪವೇ ಇರುವನು. ಅಲ್ಲಾಹನನ್ನು ಸ್ಮರಿಸದವರಿಗೆ ಅಲ್ಲಾಹನ ಸಾಮೀಪ್ಯವೆಂಬ ಅನುಗ್ರಹವು ಲಭಿಸುವುದಿಲ್ಲ ಎಂದು ಕೂಡಾ ಈ ವಾಕ್ಯವು ಮನದಟ್ಟು ಮಾಡಿಸುತ್ತದೆ. ಈ ವಿಷಯವನ್ನು ದೃಢೀಕರಿಸುತ್ತಾ ಮುಂದುವರಿದು ಈ ರೀತಿ ಹೇಳಲಾಗಿದೆ. 'ಅವನು ನನ್ನನ್ನು ಸ್ಮರಿಸುವಾಗ ನಾನು ಅವನ ಜೊತೆಗಿರುತ್ತೇನೆ.'

'ಅವನು ನನ್ನತ್ತ ಒಂದು ಗೇಣು ಹತ್ತಿರವಾಗುವಾಗ ನಾನು ಅವನತ್ತ ಒಂದು ಕೈಯಷ್ಟು ಹತ್ತಿರವಾಗುತ್ತೇನೆ' ಎಂದು ಆರಂಭವಾಗುವ ಮಾತುಗಳು ಅಲ್ಲಾಹನಿಗೆ ಮನುಷ್ಯರೊಂದಿಗಿರುವ ಅಪಾರವಾದ ಪ್ರೀತಿ ಮತ್ತು ಕರುಣೆಯನ್ನು ಪ್ರಕಟ ಪಡಿಸುತ್ತದೆ. ಅಲ್ಲಾಹನು ಇಚ್ಛಿಸದೆ ಮನುಷ್ಯನು ಎಷ್ಟು ಪ್ರಯತ್ನಿಸಿದರೂ ಒಂದಿಂಚೂ ಅಲ್ಲಾಹನ ಸಮೀಪ ಹೋಗಲು ಸಾಧ್ಯವಿಲ್ಲ. ಅಂದರೆ ಅಲ್ಲಾಹನು ತನ್ನ ಸಾಮೀಪ್ಯ ಗಳಿಸಬಯಸುವ ದಾಸರ ಆಗ್ರಹ ಮತ್ತು ಪರಿಶ್ರಮಗಳನ್ನು ಇಷ್ಟ ಪಡದವನಲ್ಲ, ಉದಾಸೀನತೆಯಿಂದ ಅದನ್ನು ಉಪೇಕ್ಷಿಸುವವನೂ ಅಲ್ಲ. ಮನುಷ್ಯನಿಗೆ ಅಲ್ಲಾಹನ ಸಾಮೀಪ್ಯ ಗಳಿಸಬೇಕೆಂಬ ಆತುರತೆ ಮತ್ತು ಅಪೇಕ್ಷೆ ಇರುವುದಕ್ಕಿಂತ ಅಧಿಕ ಮನುಷ್ಯರಿಗೆ ಹತ್ತಿರವಾಗುವ ಹಂಬಲ ಅಲ್ಲಾಹನಿಗಿದೆ. ಕಾರಣವೇನೆಂದರೆ ಮನುಷ್ಯನು ಅಲ್ಲಾಹನನ್ನು ಪ್ರೀತಿಸುವುದಕ್ಕಿಂತ ಎಷ್ಟೋ ಪಾಲು ಅಧಿಕ ಅಲ್ಲಾಹನು ಮನುಷ್ಯನನ್ನು ಪ್ರೀತಿಸುತ್ತಾನೆ.

ಅಜ್ಞಾನದ ಕಾರಣದಿಂದ ಅಶ್ರದ್ಧೆಯ ಕಾರಣದಿಂದ, ಕಳೆದುಹೋದ ದಿನಗಳಲ್ಲಿ ತಪ್ಪಾಗಿ ಜೀವನ ಸಾಗಿಸಿ ಬಳಿಕ ತಪ್ಪಿನ ಅರಿವಾಗಿ ಮರಳಿ ಸತ್ಯದೆಡೆಗೆ ಬರಲು ಆಗ್ರಹಿಸುವ ಜನರಿಗೆ ಒಂದು ಸುವಾರ್ತೆಯ ರೂಪದಲ್ಲಿ ಇದೆ ಇದು. ನೀವು ಈ ಹಿಂದೆ ಮಾಡಿದ ತಪ್ಪುಗಳ ಹೆಸರಿನಲ್ಲಿ ಅವನು ನಿಮ್ಮನ್ನು ನಿರ್ಲಕ್ಷಿಸಿ ಬಿಡುವುದಿಲ್ಲ, ನಿಮಗೆ ಬೆನ್ನು ತೋರಿಸುವುದೂ ಇಲ್ಲ. ನೀವು ಒಂದು

ಗೇಣಿನಷ್ಟು ಅವನಿಗೆ ಹತ್ತಿರವಾದರೆ ಅವನು ಒಂದು ಕೈಯಷ್ಟು ನಿಮಗೆ ಹತ್ತಿರವಾಗುತ್ತಾನೆ. ಪಿಶಾಚಿಯ ಪ್ರೇರಣೆಯನ್ನು ನಿರ್ಲಕ್ಷಿಸಿ ನೀವು ಅವನೆಡೆಗೆ ನಡೆಯುವಾಗ ಅವನು ನಿಮ್ಮೆಡೆಗೆ ಓಡಿಕೊಂಡು ತಲುಪುತ್ತಾನೆ. ಬಹಳ ಧಾವಂತದಿಂದ ಕೂಡಿದ ಇಂದಿನ ದಿನಗಳಲ್ಲಿ ನಾವು ಎಷ್ಟು ಹೊತ್ತು ಅಲ್ಲಾಹನ ಜೊತೆಗಿರುತ್ತೇವೆ? ಅಥವಾ ಅಲ್ಲಾಹನು ನಮ್ಮ ಜೊತೆಗಿರುತ್ತಾನೆ? ಅಲ್ಲಾಹನು ನಮ್ಮೆಡೆಗೆ ನಡೆದು ಬರುವ ರೀತಿಯಲ್ಲಿ ನಮ್ಮ ಜೀವನ ಇದೆಯೇ? ಪ್ರತಿಯೊಬ್ಬ ಸತ್ಯವಿಶ್ವಾಸಿ ತನ್ನೊಂದಿಗೆ ಕೇಳಬೇಕಾದ ಪ್ರಶ್ನೆಗಳಿವು.



# 24. ಜೀವನದ ಐದು ಮಾನದಂಡಗಳು

عَنْ أَبِي هُرَيْرَةَ رَضِيَ اللّٰهُ عَنْهُ قَالَ قَالَ رَسُولُ اللّٰهِ ﷺ مَنْ يَأْخُذُ عَنِّي هٰؤُلَاءِ الْكَلِمَاتِ فَيَعْمَلُ بِهِنَّ أَوْ يُعَلِّمُ مَنْ يَعْمَلُ بِهِنَّ. قُلْتُ أَنَا يَا رَسُولَ اللّٰهِ فَأَخَذَ بِيَدِي فَعَدَّ خَمْسًا وَقَالَ اتَّقِ الْمَحَارِمَ تَكُنْ أَعْبَدَ النَّاسِ وَارْضَ بِمَا قَسَمَ اللّٰهُ لَكَ تَكُنْ أَغْنَى النَّاسِ وَأَحْسِنْ إِلَى جَارِكَ تَكُنْ مُؤْمِنًا وَأَحِبَّ لِلنَّاسِ مَا تُحِبُّ لِنَفْسِكَ تَكُنْ مُسْلِمًا وَلَا تُكْثِرِ الضَّحِكَ فَإِنَّ كَثْرَةَ الضَّحِكِ تُمِيتُ الْقَلْبَ. (احمد، ترمذی)

ಅಬೂಹುರ್ರೈರ(ರ) ಹೇಳುತ್ತಾರೆ. ಒಂದು ಸಲ ಪ್ರವಾದಿ ಮುಹಮ್ಮದ್‌ರು(ಸ) ಪ್ರಶ್ನಿಸಿದರು– ''ನೋಡಿ, ಕೆಲವು ವಿಷಯಗಳಿವೆ. ನನ್ನಿಂದ ಅದನ್ನು ಸ್ವೀಕರಿಸಿ ಬಳಿಕ, ಅದರಂತೆ ಜೀವಿಸಿ, ಆದರ ಪ್ರಕಾರ ಜೀವಿಸ ಬಯಸುವವರಿಗೆ ಕಲಿಸಲು ನಿಮ್ಮ ಪೈಕಿ ಯಾರು ಸಿದ್ಧರಿದ್ದೀರಿ?'' ಆಗ ನಾನು ''ನಾನಿದ್ದೇನೆ ಪ್ರವಾದಿಗಳೇ'' ಎಂದು ಹೇಳಿದೆ. ಅವರು ನನ್ನ ಕೈಯನ್ನು ಹಿಡಿದು ಐದು ವಿಷಯಗಳನ್ನು ಉಪದೇಶಿಸಿದರು. ''ನಿಷಿದ್ಧ ವಸ್ತುಗಳ ಬಗ್ಗೆ ಜಾಗರೂಕನಾಗಿರು. ನೀವು ಜನರ ಪೈಕಿ ಉತ್ತಮ ಆಬಿದ್(ದೇವಾರಾಧಕ) ಆಗುವಿರಿ. ಅಲ್ಲಾಹನು ನಿಮಗೆ ನೀಡಿರುವ ಸೌಕರ್ಯದಿಂದ ಸಂತೃಪ್ತನಾಗುವಿರಿ. ಜನರ ಪೈಕಿ ಐಶ್ವರ್ಯವುಳ್ಳವನಾಗುವಿರಿ. ನೆರೆಹೊರೆಯವರಿಗೆ ಒಳಿತನನ್ನು ಮಾಡಿ, ನೀವು ಸತ್ಯವಿಶ್ವಾಸಿಯಾಗುವಿರಿ. ನಿಮಗೆ ಬಯಸುವುದನ್ನೇ ಇತರರಿಗೂ ಬಯಸಿರಿ. ನೀವು ಮುಸ್ಲಿಮನಾಗುವಿರಿ. ಅತಿಯಾಗಿ ನಗದಿರಿ. ಅಮಿತವಾದ ನಗು ಮನಸ್ಸನ್ನು ಸಾಯಿಸಿ ಬಿಡುತ್ತದೆ.'' (ಅಹ್ಮದ್, ತಿರ್ಮಿದಿ)

ಈ ಪ್ರವಾದಿ ವಚನದಲ್ಲಿ ಜೀವನದ ಸಾಕ್ಷಾತ್ಕಾರಕ್ಕಿರುವ ಐದು ಮೂಲ ಮಾನದಂಡಗಳನ್ನು ಪ್ರವಾದಿಯವರು(ಸ) ವಿವರಿಸಿದ್ದಾರೆ. ಈ ಮಾನದಂಡಗಳನ್ನು ಪ್ರಸ್ತಾಪಿಸುವುದಕ್ಕೆ ಮೊದಲು ಇದನ್ನು ಕಲಿಯಲು ಮತ್ತು ಕಲಿಸಲು, ಜೊತೆಗೆ ಆದರಂತೆ ವರ್ತಿಸಲು ತಯಾರಿರುವ ಶಿಷ್ಯನ ಕೈ ಹಿಡಿದು ಹೇಳಿರುವುದು ಇದರ ಮಹತ್ವ ಮತ್ತು ಪ್ರಾಧಾನ್ಯತೆಯನ್ನು ತೋರಿಸಿ ಕೊಡುತ್ತದೆ.

ಎಲ್ಲರಿಗಿಂತ ಉತ್ತಮ ಆಬಿದ್ ಆಗುವುದು. ಎಲ್ಲರಿಗಿಂತಲೂ ಹೆಚ್ಚು ಐಶ್ವರ್ಯವುಳ್ಳವನಾಗುವುದು, ಸತ್ಯವಿಶ್ವಾಸಿಯಾಗುವುದು, ಮುಸ್ಲಿಮನಾಗುವುದು, ಸಜೀವ ಮನಸ್ಸುಳ್ಳವ

ನಾಗುವುದು ಇವುಗಳೇ ಆ ಐದು ಪ್ರಮಾಣಗಳು. ಅತ್ಯುತ್ತಮ ಇಬಾದತ್ ಮಾಡುವವನಾಗುವುದು ಎಂದರೆ ಉಪವಾಸ, ನಮಾಝ್ ಮುಂತಾದ ಆರಾಧನೆಗಳನ್ನು ಹೆಚ್ಚಾಗಿ ಮಾಡುವುದು, ದಿಕ್ರ್, ದುವಾಗಳನ್ನು ನಿರಂತರ ಹೇಳುತ್ತಿರುವುದು ಮಾತ್ರ ಅಲ್ಲ. ಇವುಗಳೆಲ್ಲ ಮಹತ್ವಪೂರ್ಣವಾದ ಆರಾಧನೆಗಳು ಮತ್ತು ಪುಣ್ಯ ಕರ್ಮಗಳು ಹೌದು. ಆದರೆ ಈ ಪುಣ್ಯ ಕರ್ಮಗಳು ಅರ್ಥಪೂರ್ಣವಾಗಬೇಕಿದ್ದರೆ ಜೀವನವು ಸಂಸ್ಕರಿಸಲ್ಪಡಬೇಕು. ಪರಿಶುದ್ಧವಾಗಿರಬೇಕು. ಅದಕ್ಕೆ ಅಲ್ಲಾಹನು ನಿಷೇಧಿಸಿರುವ ವಿಷಯಗಳಿಂದ ದೂರ ಉಳಿಯಬೇಕು. ಬಹುದೇವಾರಾಧನೆ, ಹೆತ್ತವರನ್ನು ನೋಯಿಸುವುದು, ಕೊಲೆ, ಮದ್ಯಪಾನ, ಜೂಜಾಟ, ವ್ಯಭಿಚಾರ, ಅನಾಥರ ಸಂಪತ್ತನ್ನು ಕಬಳಿಸುವುದು, ಇತರರಿಗೆ ಅನ್ಯಾಯ ಮಾಡುವುದು, ಬಡ್ಡಿ ತಿನ್ನುವುದು, ಅಳತೆ ತೂಕಗಳಲ್ಲಿ ವಂಚನೆ ಮಾಡುವುದು ಮುಂತಾದ ಪಾಪಗಳಿಂದ ದೂರ ಉಳಿಯುವುದು ಇಲ್ಲಿ ಉದ್ದೇಶಿಸಲ್ಪಟ್ಟಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಈ ನಿಷೇಧಗಳನ್ನು ಪಾಲಿಸುವವರು ಕೇವಲ ಆಬಿದ್‌ಗಳಲ್ಲ ಅತ್ಯುತ್ತಮ ಆಬಿದ್‌ಗಳು ಎಂದು ಪ್ರವಾದಿ(ಸ) ಕಲಿಸಿರುವರು. ಇದರಿಂದ ಇಬಾದತ್ ಎಂಬ ಪದದ ಅರ್ಥವ್ಯಾಪ್ತಿಯು ಮನದಟ್ಟಾಗುತ್ತದೆ. ಅಂದರೆ ಜೀವನ ಪೂರ್ತಿ ಅಲ್ಲಾಹನ ಅನುಸರಣೆ ಮಾಡುವುದೇ ಪರಿಪೂರ್ಣವಾದ ಉತ್ಕೃಷ್ಟವಾದ ಇಬಾದತ್ ಆಗಿರುತ್ತದೆ.

ಸಂಪತ್ತು ಸೌಕರ್ಯಗಳು, ಐಶ್ವರ್ಯಗಳು ಎಂದರೆ ಚಿನ್ನ ಬೆಳ್ಳಿಗಳ ಭಂಡಾರವಲ್ಲ, ಆತ್ಮ ಸಂತೃಪ್ತಿಯಾಗಿದೆ. ಇರುವುದರಲ್ಲಿ ಸಂತೃಪ್ತನಾಗುವುದು ಸಿಗುವುದನ್ನು ತಿಂದು, ಪರಿಶ್ರಮ ಪಡದೆ, ಸಂಪತ್ತನ್ನು ಸಂಗ್ರಹಿಸದೆ ನಿಷ್ಕ್ರಿಯನಾಗಿರಬೇಕೆಂದು ಇದರರ್ಥವಲ್ಲ, ಪರಿಶ್ರಮ ಪಡಬೇಕಾದುದು ಮನುಷ್ಯನ ಕರ್ತವ್ಯವಾಗಿದೆ. ಅದಕ್ಕೆ ಪ್ರತಿಫಲ ನೀಡುವವನು ಅಲ್ಲಾಹನಾಗಿದ್ದಾನೆ. ನಾವು ನಮಗೆ ಸಾಧ್ಯವಿರುವಷ್ಟು ಪರಿಶ್ರಮ ಪಡಬೇಕು. ಅದರಿಂದ ನಮಗೆ ಯಾವ ಪ್ರತಿಫಲ ಸಿಕ್ಕಿದರೂ ಅದುವೇ ಅಲ್ಲಾಹನು ನಮಗೆ ವಿಧಿಸಿರುವ ಸೌಭಾಗ್ಯ. ಆ ಸೌಭಾಗ್ಯದಿಂದ ತೃಪ್ತಿ ಹೊಂದಬೇಕು. ತೃಪ್ತಿ ಹೊಂದದೆ ಇದ್ದರೆ ಪ್ರಯೋಜನವಿಲ್ಲ. ನಮ್ಮ ಸ್ವಾರ್ಥ ಮತ್ತು ಅಸೂಯೆಯು ನಮ್ಮ ವಿಧಿಯನ್ನು ಬದಲಾಯಿಸುವುದಿಲ್ಲ. ಇರುವ ಸಂಪತ್ತಿನಲ್ಲಿ ಸಂತೃಪ್ತರಾಗಲು ಸಾಧ್ಯವಿರುವವರು ಎಷ್ಟು ದರಿದ್ರರಾಗಿದ್ದರೂ ಸ್ವಾರ್ಥಿ ಕೋಟ್ಯಾಧಿಪತಿಗಳಿಗಿಂತ ಅಧಿಕ ಭಾಗ್ಯವಂತರಾಗಿರುತ್ತಾರೆ. ಒಂದರಿಂದ ಸಂತೃಪ್ತರಾಗದವರಿಗೆ ಹಲವು ಸಿಕ್ಕರೂ ಸಂತೃಪ್ತಿ ಉಂಟಾಗದು. ಹದಿನಾರು ಕೋಟಿ ಸಿಕ್ಕರೂ ಅವನಿಗೆ ಸಂತೃಪ್ತಿ ಇರಲಾರದು. ಹತ್ತು ರೂಪಾಯಿ ಸಿಕ್ಕರೂ ಸಂತೃಪ್ತನಾಗುವವನ ಜೀವನ ಸುಖ-ಶಾಂತಿ ನೆಮ್ಮದಿಯಿಂದ ಮುಂದೆ ಹೋಗುವುದು. ಅದೇ ವೇಳೆ ಹದಿನಾರು ಕೋಟಿ ಸಿಕ್ಕರೂ ಸಾಕಾಗದ ಮನುಷ್ಯನ ಜೀವನವು ಸ್ವಾರ್ಥ, ಅಸೂಯೆಯ ಅಗ್ನಿಯಲ್ಲಿ ಬೇಯುತ್ತಲೇ ಇರುವುದು.

ನಮ್ಮ ಸುತ್ತಮುತ್ತಲೂ ವಾಸಿಸುವ ಮತ್ತು ನಾವು ಸಾಮಾನ್ಯವಾಗಿ ಭೇಟಿಯಾಗುತ್ತಿರುವ ಜನರೇ ನಮ್ಮ ನೆರೆಕರೆಯವರು. ಅವರೊಂದಿಗಿರುವ ಒಡನಾಟವನ್ನು ಪ್ರವಾದಿ

ಮುಹಮ್ಮದ್‌ರು(ಸ) ನಮ್ಮ ವಿಶ್ವಾಸದ ಮಾನದಂಡವಾಗಿ ತೋರಿಸಿಕೊಟ್ಟಿದ್ದಾರೆ. ಸತ್ಯವಿಶ್ವಾಸಿ ತನ್ನ ಸುತ್ತು ಮುತ್ತಲಿನವರಿಗೆ ಸದಾ ಬೆಳಕು ಮತ್ತು ನೆರಳಿನಂತೆ ಇರಬೇಕು. ಅತ್ಯುತ್ತಮವಾದ ವರ್ತನೆ, ಗೌರವ ಪೂರ್ವಕ ಮಾತು, ಸೇವೆ, ಸಹಾಯ ಸಹಕಾರಗಳು ಇವುಗಳ ಮೂಲಕ ಸತ್ಯವಿಶ್ವಾಸಿ ಇತರರ ಪಾಲಿಗೆ ಬೆಳಕು ಮತ್ತು ನೆರಳು ಆಗಿರುತ್ತಾನೆ. ಈ ರೀತಿಯಲ್ಲಿ ಬೆಳಕು ಮತ್ತು ನೆರಳು ಆಗಿರದವರು ನಿಜವಾದ ಸತ್ಯವಿಶ್ವಾಸಿಗಳಲ್ಲ, ಅವರ ಜೀವನವು ಮರುಭೂಮಿಯಲ್ಲಿ ಬೆಳೆಯುವ ಹಣ್ಣುಗಳನ್ನು ನೀಡದ ಮುಳ್ಳಿನ ಮರದಂತಿರುವುದು.

ಮುಸ್ಲಿಮನಾಗಿರುವುದು ಮುಂದಿನ ಮಾನದಂಡವಾಗಿದೆ. ಮುಸ್ಲಿಮನಾಗಬೇಕಿದ್ದರೆ ಕೇವಲ ಶಹಾದತ್ ಕಲಿಮ ಹೇಳಿದರೆ ಸಾಲದು. ಮನುಷ್ಯರೊಂದಿಗೆ ಸಂಪೂರ್ಣ ಒಳಿತನ್ನು ಅಪೇಕ್ಷಿಸಬೇಕು. ಅವರಿಗೆ ಸಲಾಮ್ ಬಯಸಬೇಕು ಅಂದರೆ ರಕ್ಷಣೆ. ಹಾಗಿದ್ದರೆ ಮಾತ್ರ ಅವನು ನಿಜವಾದ ಮುಸ್ಲಿಮನಾಗುವನು. ತಮ್ಮ ಸುಖ-ಸಮೃದ್ಧಿಯ ಬಗ್ಗೆ ಮಾತ್ರ ಚಿಂತಿಸುವವರಿಗೆ, ಸ್ವಾರ್ಥವನ್ನೇ ಪೂಜಿಸುವವರಿಗೆ ಇದನ್ನು ಮಾಡಲು ಸಾಧ್ಯವಿಲ್ಲ. ನಮಗೆ ಸಿಕ್ಕಿರುವ ಅನುಗ್ರಹಗಳು ಬೇರೆಯವರಿಗೂ ಸಿಗಬೇಕೆಂದು ಬಯಸುವುದು ಯಥಾರ್ಥ ಮುಸ್ಲಿಮನ ಲಕ್ಷಣವಾಗಿದೆ. ಧನಿಕರನ್ನು ನಿಗ್ರಹಿಸುವುದರಿಂದ, ಅವರ ಸಂಪತ್ತನ್ನು ಕಿತ್ತು ತೆಗೆದು ವಿತರಣೆ ಮಾಡುವುದರಿಂದ, ಸಂಪತ್ತನ್ನು ಸರಕಾರವು ತನ್ನ ಕೈವಶ ಮಾಡಿಕೊಳ್ಳುವುದರಿಂದ ಈ ಜಗತ್ತಿನಲ್ಲಿ ಸಮಾನತೆ ಉಂಟಾಗಿಲ್ಲ ಮತ್ತು ಉಂಟಾಗಲು ಸಾಧ್ಯವಿಲ್ಲ. 'ನಾನು ನನಗಾಗಿ ಬಯಸುವುದನ್ನೇ ಇತರರಿಗಾಗಿಯೂ ಬಯಸಬೇಕು ಎಂಬುದು ನಮ್ಮ ಆಶಯವಾಗಿದ್ದರೆ ಸಮಾನತೆಯು ನಿಜವಾಗಿಯೂ ಉಂಟಾಗುತ್ತದೆ. ಇದುವೇ ಇಸ್ಲಾಮ್ ಆಗಿದೆ. ಇಸ್ಲಾಮನ್ನು ಈ ರೀತಿಯಲ್ಲಿ ಸ್ವೀಕರಿಸಿಕೊಂಡ ಮನುಷ್ಯರ ಮಧ್ಯೆ ಈ ರೀತಿಯಲ್ಲಿ ಸಮಾನತೆಯು ಏರ್ಪಟ್ಟಿದೆ. ಅನ್ಸಾರ್‌ಗಳು ಮತ್ತು ಮುಹಾಜಿರರ ಚರಿತ್ರೆಯನ್ನು ಕಲಿತವರಿಗೆ ಇದನ್ನು ನಿಷೇಧಿಸಲು ಸಾಧ್ಯವಿಲ್ಲ.

ಮನಸ್ಸನ್ನು ಜಾಗೃತಾವಸ್ಥೆಯಲ್ಲಿರಿಸುವುದು ಎಂಬುದು ಐದನೆಯ ಮಾನದಂಡವಾಗಿದೆ. ಆಳವಾದ ಮತ್ತು ವಾಸ್ತವಿಕವಾದ ಜೀವನ ವೀಕ್ಷಣೆ ಮತ್ತು ಜಾಗೃತಾವಸ್ಥೆಯೇ ಮನಸ್ಸಿನ ಜೀವನವಾಗಿದೆ. ಅಗತ್ಯವಾದ ಚಿಂತನೆ, ಮನನ ಮಾಡುವಿಕೆ ಈ ಜೀವನವನ್ನು ಬಾಕಿ ಉಳಿಸಲು ಮತ್ತು ಪೋಷಿಸಲು ಸಾಧ್ಯವಾಗುತ್ತದೆ. ಜೀವನದಲ್ಲಿ ಆಟ, ನಗು ಎಲ್ಲವೂ ಬೇಕು; ಆದರೆ ಅತಿಯಾಗಬಾರದು. ವಿನೋದ ಹಾಸ್ಯಗಳಲ್ಲೇ ತಲ್ಲೀನವಾಗಿ ಗಹಗಹಿಸಿ ನಗುವುದಕ್ಕೆ ಮಾತ್ರ ಸೀಮಿತವಾದ ಮನಸ್ಸಿಗೆ ಅರ್ಥಪೂರ್ಣವಾದ ಜೀವನ ಸಿದ್ಧಾಂತವನ್ನು ಅರಿಯಲು, ಆಳವಾದ ಜೀವನ ತತ್ವಗಳ ಕುರಿತು ಚಿಂತಿಸಲು, ತಿಳಿಯಲು ಸಾಧ್ಯವಿಲ್ಲ. ಈ ರೀತಿಯ ಮನಸ್ಸುಗಳು ಪ್ರಜ್ಞಾಶೂನ್ಯವಾಗಿರುವುದು ಮತ್ತು ಅವರ ಜೀವನವು ಅರ್ಥ ರಹಿತವಾಗಿರುವುದು.



# 25. ಉತ್ತಮ ಸ್ವಭಾವ: ಸ್ವರ್ಗಕ್ಕಿರುವ ದಾರಿ

عن زبير رضي الله عنه أنّ النّبي ﷺ قال مَنْ ضَمِنَ لِي ستًا ضَمِنْتُ لَهُ الْجَنَّةَ قَالُوا مَا هُنَّ يَا رَسُولَ اللهِ؟ قَالَ إِذَا حَدَّثَ صَدَقَ وَإِذَا وَعَدَ أَنْجَزَ وَإِذَا أُتُمِنَ أَدَّى وَمَنْ غَضَّ بَصَرَهُ وَحَفِظَ فَرْجَهُ وَكَفَّ يَدَهُ. (المصنف)

ಹ.ಝುಬೈರ್(ರ) ವರದಿ ಮಾಡುತ್ತಾರೆ- ಪ್ರವಾದಿ ಮುಹಮ್ಮದರು(ಸ) ಒಮ್ಮೆ ತಮ್ಮ ಶಿಷ್ಯರೊಂದಿಗೆ ಈ ರೀತಿ ಹೇಳಿದರು: 'ಯಾರಾದರೂ ನನಗೆ ಆರು ವಿಷಯಗಳ ಬಗ್ಗೆ ಭರವಸೆ ನೀಡಿದರೆ ನಾನು ಅವರಿಗೆ ಸ್ವರ್ಗದ ಭರವಸೆಯನ್ನು ನೀಡುತ್ತೇನೆ.' ಅನುಯಾಯಿಗಳು ಕೇಳಿದರು. ಪ್ರವಾದಿಗಳೇ ಆ ಕೆಲಸಗಳು ಯಾವುವು? ಪ್ರವಾದಿ(ಸ) ಹೇಳಿದರು- 'ಮಾತನಾಡುವಾಗ ಸತ್ಯವನ್ನು ಹೇಳಬೇಕು. ವಾಗ್ದಾನ ನೀಡಿದರೆ ಅದನ್ನು ಪೂರ್ತಿಗೊಳಿಸಬೇಕು. ಅಮಾನತ್ ನೀಡಿದರೆ ಅದನ್ನು ಸಂರಕ್ಷಿಸಬೇಕು. ದೃಷ್ಟಿಗಳನ್ನು ಕೆಳಗಿರಿಸಬೇಕು. ಗುಪ್ತಾಂಗಗಳನ್ನು ಸಂರಕ್ಷಿಸಬೇಕು. ಕೈಗಳನ್ನು ನಿಯಂತ್ರಿಸಬೇಕು.' (ಅಲ್ ಮುಸನ್ನಫ್)

ಒಬ್ಬ ಸತ್ಯವಿಶ್ವಾಸಿಗೆ ಸ್ವರ್ಗದ ಭರವಸೆಯನ್ನು ನೀಡುವ ಆರು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಈ ಆರು ವಿಷಯಗಳು ಬಹಳ ಸರಳವಾಗಿವೆ. ನಮಾಝ್, ಉಪವಾಸವ್ರತ, ಝಕಾತ್, ಹಜ್ಜ್ ಮುಂತಾದ ಇಸ್ಲಾಮಿನ ಮೂಲ ಆಧಾರಸ್ತಂಭಗಳನ್ನು, ಸ್ವರ್ಗ ಪ್ರಾಪ್ತಿಗೆ ಅನಿವಾರ್ಯವಾಗಿ ಪರಿಗಣಿಸಲ್ಪಡುವ ಕಾರ್ಯಗಳನ್ನು ಇಲ್ಲಿ ಪರಾಮರ್ಶಿಸಲಾಗಿಲ್ಲ, ಇದೇಕೆ ಹೀಗೆ ಎಂದು ಸ್ವಲ್ಪ ಗಾಢವಾಗಿ ಆಲೋಚಿಸಿದರೆ ಇಸ್ಲಾಮ್ ಧರ್ಮದ ವಾಸ್ತವಿಕತೆಯು ಮನದಟ್ಟಾಗುತ್ತದೆ. ನಮಾಝಿನಂತಹ ಆರಾಧನೆಗಳ ಅಗತ್ಯವಿಲ್ಲವೆಂದೋ ಅವುಗಳ ಮೂಲಕ ಸ್ವರ್ಗವನ್ನು ಗಳಿಸಲು ಸಾಧ್ಯವಿಲ್ಲವೆಂದೋ ಈ ಪ್ರವಾದಿವಚನ ಸೂಚಿಸುವುದಿಲ್ಲ, ಅವುಗಳು ಇಸ್ಲಾಮಿನ ಆಧಾರ ಸ್ತಂಭಗಳು. ಅವುಗಳಿಲ್ಲದೆ ಇಸ್ಲಾಮ್ ಇಲ್ಲ, ಹಾಗಾದರೆ ಅವುಗಳನ್ನು ಸರಿಯಾಗಿ ನಿರ್ವಹಿಸಿದರೆ ಇಸ್ಲಾಮ್ ಸಂಪೂರ್ಣವಾಗುತ್ತದೆಯೇ? ಈ ಪ್ರಶ್ನೆಗೆ ಮೇಲಿನ ಹದೀಸ್ ವಚನವು ಉತ್ತರವಾಗಿದೆ. ನಮಾಝ್, ಉಪವಾಸ ಮುಂತಾದ ಕಡ್ಡಾಯ ಕೆಲಸಗಳು ಅದನ್ನು ನಿರ್ವಹಿಸುವ ವ್ಯಕ್ತಿಯಲ್ಲಿ ವಿಶಿಷ್ಟವಾದ, ವಿಶೇಷವಾದ, ಸ್ವಭಾವ, ಚಾರಿತ್ರ್ಯವನ್ನು ಬೆಳೆಸಬೇಕಿದೆ.

ಒಂದು ವೇಳೆ ನಮಾಝ್, ಉಪವಾಸವ್ರತ, ಹಜ್ಜ್‌ಗಳು ಮನುಷ್ಯನ ಸ್ವಭಾವದಲ್ಲಿ ಬದಲಾವಣೆ ಉಂಟು ಮಾಡದಿದ್ದರೆ ಅವುಗಳು ನಿರ್ಜೀವವೆನಿಸುತ್ತದೆ. ಮನುಷ್ಯನು ಸತ್ಯಸಂಧನಾಗುವುದು, ಪ್ರಾಮಾಣಿಕ, ಕೆಡುಕನ್ನು ಬಯಸದವನು, ಸಚ್ಚಾರಿತ್ರ್ಯವಂತ, ಅಕ್ರಮವನ್ನು ಮಾಡದವನು ಎಂಬುದು ಸತ್ಯವಿಶ್ವಾಸ ಮತ್ತು ದೇವಾರಾಧನೆಯ ಫಲವಾಗಿದೆ. ಈ ಗುಣ ವಿಶೇಷತೆಗಳನ್ನು ಗಳಿಸಲು ಸಾಧ್ಯವಿಲ್ಲದಿದ್ದರೆ, ಎಷ್ಟು ದೊಡ್ಡ ನಮಾಝಿಯಾದರೂ, ಉಪವಾಸ ಆಚರಿಸುವವನಾದರೂ ಸ್ವರ್ಗದ ಬಾಗಿಲುಗಳು ಅವನ ಪಾಲಿಗೆ ಮುಚ್ಚಲ್ಪಟ್ಟಿರುವುದು.

ಇಲ್ಲಿ ಒಂದು ಪ್ರಶ್ನೆ ಏಳಬಹುದು. ಈ ಪ್ರವಾದಿ ವಚನದಲ್ಲಿ ಹೇಳಲಾದ ಗುಣ ವಿಶೇಷತೆಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಂಡ ವ್ಯಕ್ತಿ ನಮಾಝ್, ಉಪವಾಸಗಳಂತಹ ಕಡ್ಡಾಯ ಕರ್ಮಗಳನ್ನು ತೊರೆದರೂ ಸ್ವರ್ಗವು ಸಿಗುವುದೇ? ಇದರ ಉತ್ತರ ಇಲ್ಲ, ಸಿಗಲಾರದು ಎಂದಾಗಿದೆ. ಕಾರಣವೇನೆಂದರೆ ಪ್ರವಾದಿಯವರು(ಸ) ಈ ವಿಷಯಗಳನ್ನು ವಿವರಿಸುತ್ತಿರು ವುದು ನಮಾಝಿನಂತಹ ಕಡ್ಡಾಯ ಕರ್ಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದ ಅನುಯಾಯಿಗಳ ಸಭೆಯಲ್ಲಾಗಿತ್ತು. ನಮಾಝ್ ಮುಂತಾದ ಕರ್ಮಗಳನ್ನು ಮಾತ್ರ ನಿರ್ವಹಿಸುವುದರಿಂದ ನಿಮಗೆ ಸ್ವರ್ಗವು ಲಭಿಸುವುದೆಂದು ಭರವಸೆ ನೀಡಲು ನನಗೆ ಸಾಧ್ಯವಿಲ್ಲ. ನಾನು ಭರವಸೆ ನೀಡಬೇಕಾದರೆ ಈ ಮುಂದೆ ಹೇಳಲಾಗುವ ವಿಷಯಗಳ ಬಗ್ಗೆ ನೀವೂ ಭರವಸೆ ನೀಡಬೇಕು ಎಂಬುದು ಇದರ ಅರ್ಥವಾಗಿದೆ. ಇಷ್ಟು ಮಾತ್ರವಲ್ಲದೆ ಓರ್ವ ವ್ಯಕ್ತಿ ಮುಸ್ಲಿಮ್ ಆಗುವುದೆಂದರೆ ಅಲ್ಲಾಹ್ ಮತ್ತು ಅವನ ಪ್ರವಾದಿಯವರು(ಸ) ವಹಿಸಿರುವ ಜವಾಬ್ದಾರಿಗಳನ್ನು ನೆರವೇರಿಸುತ್ತೇನೆಂದು ಪ್ರತಿಜ್ಞೆ ಮಾಡುವುದಾಗಿದೆ. ನಮಾಝಿನಂತಹ ಕಡ್ಡಾಯ ಕರ್ಮಗಳನ್ನು ನಿರ್ಲಕ್ಷಿಸಿ ಯಾರಿಗಾದರೂ ಈ ಕೆಲಸಗಳಲ್ಲಿ ಒಂದನೆಯ ಮತ್ತು ಎರಡನೆಯದನ್ನು ನೆರವೇರಿಸಲು ಸಾಧ್ಯವಿಲ್ಲವಲ್ಲವೇ? ದೃಷ್ಟಿಗೆ ಕಣ್ಣು ಹೇಗೆ ಅನಿವಾರ್ಯವೋ ಹಾಗೆಯೇ ಆತ್ಮಶುದ್ಧಿಗೆ ದೇವವಿಶ್ವಾಸ ಮತ್ತು ಆರಾಧನೆಗಳು ಬೇಕು. ವಿಶ್ವಾಸ ಮತ್ತು ಆರಾಧನೆಗಳಿಲ್ಲದೆ ಆತ್ಮಶುದ್ಧಿ ಸಿಕ್ಕಿದೆ ಎಂದು ಹೇಳಿಕೊಳ್ಳುವುದು ಕಣ್ಣುಗಳಿಲ್ಲದವನು ನೋಡಿದ್ದೇನೆ ಎಂದು ವಾದಿಸುವುದಕ್ಕೆ ಸಮಾನವಾಗಿದೆ.

ಪ್ರವಾದಿ ಮುಹಮ್ಮದರು(ಸ) ಹೇಳಿರುವ ಆರು ಕೆಲಸಗಳ ಪೈಕಿ ಒಂದನೆಯದು ಸತ್ಯವನ್ನೇ ಹೇಳಬೇಕು ಎಂಬುದಾಗಿದೆ. ಇದರ ಮಹತ್ವವನ್ನು ವಿವರಿಸಬೇಕಾದ ಅಗತ್ಯ ವಿಲ್ಲವಲ್ಲವೇ? ವಾಗ್ದಾನ ಮಾಡಿದರೆ ಅದನ್ನು ಪೂರ್ತಿಗೊಳಿಸಬೇಕು ಎಂಬುದು ಎರಡನೆಯದಾಗಿದೆ. ಕರಾರು, ಪ್ರತಿಜ್ಞೆ, ಮಾತು ನೀಡುವುದು ಮುಂತಾದವುಗಳೆಲ್ಲ ಇದರಲ್ಲಿ ಒಳಗೊಂಡಿದೆ. ಜಗತ್ತಿನೆಲ್ಲೆಡೆ ಜನರು, ಸಮಾಜ ಮತ್ತು ವಿವಿಧ ರಾಷ್ಟ್ರಗಳು ಕೆಲವು ಕರಾರು ಮತ್ತು ಪ್ರತಿಜ್ಞೆಗಳ ಅಡಿಗಲ್ಲಿನಲ್ಲಿ ವಾಸಿಸುತ್ತಿದ್ದಾರೆ. ಈ ಕರಾರು ಮತ್ತು ಪ್ರತಿಜ್ಞೆಗಳ ಉಲ್ಲಂಘನೆಯ ಕಾರಣದಿಂದಾಗಿಯೇ ಸಣ್ಣ ಹಾಗೂ ದೊಡ್ಡ, ಪ್ರಾದೇಶಿಕ ಹಾಗೂ ಜಾಗತಿಕ, ವಿವಿಧ ದೇಶಗಳ ಮಧ್ಯೆ ಸಂಘರ್ಷ ಮತ್ತು

ಕಲಹಗಳು ನಡೆಯುತ್ತವೆ. ಶಾಂತಿಯಿಂದ ಕೂಡಿದ, ಸಂಘಟಿತವಾದ ಮನುಷ್ಯ ಜೀವನವು ಕರಾರುಗಳು ಮತ್ತು ಪ್ರತಿಜ್ಞೆಗಳ ಬಗ್ಗೆ ನಮಗಿರುವ ಬದ್ಧತೆಯನ್ನು ಅವಲಂಬಿಸಿಕೊಂಡಿರುತ್ತದೆ.

ಮೂರನೇಯ ವಿಷಯ ಪ್ರಾಮಾಣಿಕತೆಯ ಕುರಿತಾಗಿದೆ. ಮೂಲ ಹದೀಸ್‌ನಲ್ಲಿರುವ 'ಉಲ್‌ತುಮಿನ' ಎಂಬ ಪದವು ಅಮಾನತ್ ಎಂಬ ಮೂಲ ಪದದಿಂದ ಬಂದಿದೆ. ಇದಕ್ಕೆ ವಿಶಾಲವಾದ ಅರ್ಥವಿದೆ. ಮರಳಿ ಕೇಳಿದಾಗ ಹಿಂದಿರುಗಿಸುತ್ತಾರೆ ಎಂದು ವಿಶ್ವಾಸವಿಟ್ಟು ಜಾಗರೂಕತೆಯಿಂದ ತೆಗೆದಿರಿಸಲು ಹೇಳಿದ ವಸ್ತು ಒಂದು ನಿರ್ದಿಷ್ಟ ಸಮಯ ನೀಡಿ ಮರಳಿಸಬೇಕೆಂದು ನೀಡಿದ ಸಾಲ ನೆರವೇರಿಸುತ್ತಾರೆ ಎಂಬ ವಿಶ್ವಾಸದೊಂದಿಗೆ ನೀಡಿದ ಜವಾಬ್ದಾರಿ, ಬಹಿರಂಗಗೊಳಿಸುವುದಿಲ್ಲವೆಂಬ ವಿಶ್ವಾಸದಲ್ಲಿ ಹೇಳಿದಂತಹ ರಹಸ್ಯ ವಿಷಯಗಳು ಇವೆಲ್ಲವೂ ಅಮಾನತ್‌ಗಳಾಗಿವೆ. ಇವುಗಳ ಪೈಕಿ ಯಾವುದಾದರೊಂದನ್ನು ವಹಿಸಿಕೊಂಡು ಬಳಿಕ ಅವರ ವಿಶ್ವಾಸಕ್ಕೆ ವಿರುದ್ಧವಾಗಿ ವರ್ತಿಸಿದರೆ ಅವನು ವಿಶ್ವಾಸಘಾತಕನಾಗುತ್ತಾನೆ. ಸಂದಿಗ್ಧ ಪರಿಸ್ಥಿತಿಗಳಲ್ಲಿ ನೆರೆಮನೆಯವರಿಂದ, ಸಂಬಂಧಿಗಳಿಂದ, ಗೆಳೆಯರಿಂದ ಸಿಗಬಹುದೆಂದು ನಿರೀಕ್ಷೆಯಿಡುವ ಮತ್ತು ಸಂಬಂಧಿಕರು, ಗೆಳೆಯರು, ನೆರೆಹೊರೆಯವರು ನೀಡಬೇಕಾದ ಎಲ್ಲಾ ಸಹಾಯ ಸಹಕಾರಗಳು ಅಮಾನತ್‌ನಲ್ಲಿ ಒಳಗೊಂಡಿವೆ. ನಿಮ್ಮ ನೆರೆಕರೆಯವನು ದೂರದ ಪ್ರಯಾಣಕ್ಕೆ ಹೋಗುತ್ತಾರೆ. ಅವನ ಮನೆಯಲಿ ಪತ್ನಿ ಮತ್ತು ಸಣ್ಣ ಮಕ್ಕಳು ಮಾತ್ರ ಇದ್ದಾರೆ. ಮನೆಯಲ್ಲಿ ಏನಾದರೂ ಹೆಚ್ಚು ಕಡಿಮೆಯಾದರೆ ನೆರೆಮನೆಯಲ್ಲಿ ನೀವಿದ್ದೀರಿ ಎಂಬ ಧೈರ್ಯದಲ್ಲಿ ಆ ವ್ಯಕ್ತಿ ಹೋಗಿರುತ್ತಾನೆ. ಅವನ ಮನೆಯಲ್ಲಿ ಏನಾದರೂ ಅನಾಹುತ ಸಂಭವಿಸುತ್ತದೆ. ನೀವು ಅತ್ತ ತಿರುಗಿಯೂ ನೋಡುವುದಿಲ್ಲ ಎಂದಾದರೆ ಇದು ಬಹಳ ದೊಡ್ಡ ವಿಶ್ವಾಸ ಘಾತಕತನವಾಗಿದೆ. ನೆರೆಮನೆಯವನು ಹಸಿದಿರುವಾಗ ಹೊಟ್ಟೆ ತುಂಬಾ ಉಣ್ಣುವವನು ಮುಸ್ಲಿಮನಲ್ಲ ಎಂಬ ಪ್ರಸಿದ್ಧ ಪ್ರವಾದಿ ವಚನವಿದೆಯೆಲ್ಲವೇ? ಹಸಿವಿನಿಂದ ಇರುವ ನೆರೆಯವನಿಗೆ ಆಹಾರವನ್ನು ನೀಡುವುದು ಸ್ವಂತಕ್ಕೆ ತಿನ್ನಲು ಆಹಾರವಿರುವವನ ಜವಾಬ್ದಾರಿಯಾಗಿದೆ. ಕಷ್ಟದ ದಿನಗಳಲ್ಲಿ ಸಿರಿವಂತ ನೆರೆಯವನು ತನಗೆ ಸಹಾಯ ಮಾಡುತ್ತಾನೆಂದು ಅಸಹಾಯಕ ವ್ಯಕ್ತಿ ಖಂಡಿತ ನಿರೀಕ್ಷಿಸುತ್ತಾನೆ. ಧರ್ಮವು ವಹಿಸಿರುವ ಜವಾಬ್ದಾರಿಯನ್ನು, ನೆರೆ ಮನೆಯವನು ನಿರೀಕ್ಷಿಸಿರುವ ವಿಶ್ವಾಸಕ್ಕೆ ದ್ರೋಹ ಬಗೆದರೆ ಆ ವ್ಯಕ್ತಿ ಮುಸ್ಲಿಮ್ ಆಗಿರುವುದಿಲ್ಲ.

ದೃಷ್ಟಿಯನ್ನು ಕೆಳಗಿರಿಸಬೇಕು ಎಂಬ ವಾಕ್ಯದಲ್ಲಿ ಅಶ್ಲೀಲತೆಯನ್ನು ನೋಡದಿರುವುದು, ಅಹಿತವಾದುದನ್ನು ಅಪೇಕ್ಷಿಸದಿರುವುದು, ಬೇರೆಯವರ ಸಂಪತ್ತಿಗೆ ಆಶೆ ಪಡದಿರುವುದು ಮುಂತಾದ ಅರ್ಥಗಳೆಲ್ಲವೂ ಒಳಗೊಂಡಿದೆ. ಸಚ್ಚಾರಿತ್ರ್ಯದ ಮೂಲಕ ಗುಪ್ತಾಂಗಗಳನ್ನು ಸಂರಕ್ಷಿಸಬೇಕು. ಕೇವಲ ಕೆಟ್ಟ ದಾರಿಯ ಮೂಲಕ ಅದನ್ನು ಬಳಸದಿರುವುದರಿಂದ ಉದ್ದೇಶವು ಪೂರ್ತಿಯಾಗುವುದಿಲ್ಲ, ಸ್ತ್ರೀ-ಪುರುಷರು ಸಭ್ಯ ವಸ್ತ್ರಧಾರಣೆಯನ್ನು ಮಾಡದೆ, ಇತರರನ್ನು ಆಕರ್ಷಿಸುವ ರೀತಿಯಲ್ಲಿ ನಗ್ನತೆಯನ್ನು ಪ್ರದರ್ಶಿಸುವುದು ಕೂಡಾ ಸಭ್ಯತೆಗೆ ವಿರುದ್ಧವಾಗಿದೆ.

ಕೈಗಳನ್ನು ನಿಯಂತ್ರಿಸಬೇಕು ಎಂದು ಹೇಳಿರುವುದು ಯಾವ ಕೆಲಸವನ್ನೂ ಮಾಡದೆ ಸುಮ್ಮನೆ ಕುಳಿತಿರಬೇಕು ಎಂಬ ಉದ್ದೇಶದಿಂದಲ್ಲ, ಇತರರಿಗೆ ದ್ರೋಹ ಬಗೆಯುವಂತಹ ಯಾವುದನ್ನೂ ಮಾಡಬಾರದು ಎಂಬುದು ಇದರ ಉದ್ದೇಶವಾಗಿದೆ. ಕೆಲವು ವರದಿಗಳಲ್ಲಿ 'ನಾಲಗೆಯನ್ನು ನಿಯಂತ್ರಿಸಬೇಕು' ಎಂದು ಬಂದಿರುತ್ತದೆ. ಎರಡರ ಉದ್ದೇಶವೂ ಒಂದೇ ಆಗಿದೆ. ಮುಸ್ಲಿಮನು ಸದಾ ತನ್ನ ಸಹೋದರನ ಪಾಲಿಗೆ ಸಹಾಯಕ ಮತ್ತು ನೆರಳಾಗಿರಬೇಕು. ಉಪದ್ರವಕಾರಿ ಮತ್ತು ಶತ್ರುವಾಗಿರಬಾರದು.

ನಮಾಝ್ ಮುಂತಾದ ಕರ್ಮಗಳ ಜೊತೆಗೆ ಈ ಮೇಲೆ ಹೇಳಲಾದ ಸ್ವಭಾವಗಳನ್ನೂ ತಮ್ಮದಾಗಿಸಿಕೊಂಡಾಗ ವ್ಯಕ್ತಿಯು ನಿಜವಾದ ಮುಸ್ಲಿಮನೂ ಸ್ವರ್ಗಕ್ಕೆ ಅರ್ಹನೂ ಆಗಿ ಪರಿಣಮಿಸುವನು. ಮಾತನಾಡಿದರೆ ಸುಳ್ಳು ಹೇಳುವುದು, ವಾಗ್ದಾನ ನೀಡಿದರೆ ಉಲ್ಲಂಘಿಸುವುದು ಮೊದಲಾದ ಈ ಹದೀಸ್‌ನಲ್ಲಿ ಹೇಳಲಾಗಿರುವ ಗುಣ ಸ್ವಭಾವಗಳಿಗೆ ವಿರುದ್ಧವಾದ ಗುಣ ಸ್ವಭಾವಗಳನ್ನು ಬೆಳೆಸುವುದು ಕಪಟವಿಶ್ವಾಸದ ಲಕ್ಷಣಗಳಾಗಿವೆ ಎಂದು ಪ್ರವಾದಿಯವರು(ಸ) ಇನ್ನೊಂದು ಹದೀಸಿನಲ್ಲಿ ವಿವರಿಸಿರುವರು.



# 26. ವರ್ತನೆಯಲ್ಲಿ ವಿನಯ

عن عياض بن حمَار رضي الله عنه قال قَالَ رَسُولُ اللَّهِ ﷺ إِنَّ اللَّهَ أَوْحَى إِلَيَّ
أَنْ تَوَاضَعُوا حَتَّى لَا يَفْخَرَ أَحَدٌ عَلَى أَحَدٍ وَلَا يَبْغِيَ أَحَدٌ عَلَى أَحَدٍ. (مسلم)

ಇಯಾದ್ ಬಿನ್ ಹಿಮಾರ್(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಈ ರೀತಿ ಹೇಳಿದ. ''ಅಲ್ಲಾಹನು ನನಗೆ ದಿವ್ಯ ಸಂದೇಶದ ಮೂಲಕ ಈ ರೀತಿ ಆಜ್ಞಾಪಿಸಿದ್ದಾನೆ. ನೀವು ಪರಸ್ಪರ ವಿನಯದೊಂದಿಗೆ ವರ್ತಿಸಿರಿ. ಯಾರೂ ಯಾರೊಂದಿಗೂ ಗರ್ವ ಪ್ರದರ್ಶಿಸಬಾರದು. ಯಾರನ್ನೂ ಅತಿಕ್ರಮಿಸಬಾರದು.''

(ಮುಸ್ಲಿಮ್)

ವ್ಯವಹಾರ ಮತ್ತು ವರ್ತನೆಯಲ್ಲಿ ವಿನಯವನ್ನು ಪಾಲಿಸುವುದು ಬಹಳ ಮುಖ್ಯವಾದ ಇಸ್ಲಾಮಿನ ನಿಯಮವಾಗಿದೆ. ಪವಿತ್ರ ಕುರ್‌ಆನ್ ಸೂರಃ ಅಲ್ ಫುರ್ಕಾನ್‌ನಲ್ಲಿ ದೇವನದಾಸರ ಗುಣಗಳನ್ನು ಪ್ರಸ್ತಾಪಿಸುವಾಗ ಮೊತ್ತ ಮೊದಲಾಗಿ ಹೇಳಿರುವುದು ''ಅವರು ಭೂಮಿಯಲ್ಲಿ ವಿನೀತರಾಗಿ ವರ್ತಿಸುವವರಾಗಿದ್ದಾರೆ.'' ತಾನು ಇತರರಂತೆಯೇ ದೇವನ ಒಂದು ಸೃಷ್ಟಿ ಮಾತ್ರ. ತನಗೇನಾದರೂ ಸಾಮರ್ಥ್ಯ ಸೌಲಭ್ಯಗಳು ದೊರೆತಿದ್ದರೂ ಅವೆಲ್ಲವೂ ದೇವನು ನೀಡಿದ್ದಾಗಿದೆ. ತನಗೆ ಅವೆಲ್ಲವನ್ನೂ ನೀಡಿದ ದೇವನೇ ಇತರರನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವನೆಂಬ ಪ್ರಜ್ಞೆಯಲ್ಲಿ ನಿಜವಾದ ವಿನಯವು ಹುಟ್ಟಿಕೊಳ್ಳುತ್ತದೆ. ಮನುಷ್ಯನು ತನ್ನ ಯೋಗ್ಯತೆ, ಸೌಲಭ್ಯಗಳನ್ನೆಲ್ಲ ಸ್ವತಃ ಪರಿಶ್ರಮದಿಂದ ಉಂಟಾದುದೆಂದು ಭಾವಿಸಿಕೊಂಡಾಗ ಅಹಂಕಾರಿಯೂ ಧಿಕ್ಕಾರಿಯೂ ಆಗಿ ಬಿಡುತ್ತಾನೆ. ಇತರರನ್ನು ಕಡೆಗಣಿಸಿ, ನಿರ್ಲಕ್ಷದಿಂದ ಕಾಣುತ್ತಾನೆ. ಅವರನ್ನು ಆಕ್ರಮಿಸಲು, ಅಪಮಾನಿಸಲು ಮುಂದಡಿಯಿಡುತ್ತಾನೆ. ಯೋಗ್ಯತೆ ಸೌಲಭ್ಯಗಳು ಅಲ್ಲಾಹನಿಂದ ದೊರೆತ ದಾನವಾಗಿವೆ ಎಂದು ಮನದಟ್ಟು ಮಾಡಿಕೊಂಡ ವ್ಯಕ್ತಿಯು, ತನ್ನ ಬಳಿಯಿರುವುದೇನೂ ಸ್ವಂತದ್ದಲ್ಲ, ಲೋಕದ್ದಾಗಿದೆ. ಲೋಕವು ಅವನದ್ದಲ್ಲ, ಅವನು ಲೋಕದ ಒಂದು ಭಾಗವಾಗಿದ್ದಾನೆ. ಅಂದರೆ ಅವನು ಲೋಕದಿಂದ ವಿಮುಕ್ತ ಅಥವಾ ವ್ಯತಿರಿಕ್ತನಲ್ಲ, ಅವನ ನಿಯಂತ್ರಣದಲ್ಲಿರುವ ಸೌಲಭ್ಯ ಯೋಗ್ಯತೆಗಳ ನಿಯಂತ್ರಣವು ಒಂದು ಮಹತ್ವಪೂರ್ಣ ಹೊಣೆಗಾರಿಕೆಯಾಗಿದೆ. ಅವುಗಳಲ್ಲೆಲ್ಲಾ ಸಹಜೀವಿಗಳಿಗೂ ಪಾಲಿದೆ.

ಈ ರೀತಿಯಲ್ಲಿ ಚಿಂತಿಸಿದಾಗ ಅಧಿಕಾರ, ಸ್ಥಾನ ಮಾನಗಳುಳ್ಳವರೇ ಎಲ್ಲರಿಗಿಂತಲೂ ಹೆಚ್ಚು ವಿನೀತರಾಗಿರಬೇಕಾದವರು ಎಂಬುದು ತಿಳಿಯುತ್ತದೆ. ದೇಶದಲ್ಲಿ ಜನಜೀವನವು ಸುಖಕರ ಮತ್ತು ಸಮಾಧಾನ ಪೂರ್ಣವಾಗಿಸಬೇಕಾದವರು ಅವರೇ ಆಗಿರುತ್ತಾರಲ್ಲವೇ? ತನ್ನ ಆಶ್ರಿತರನ್ನು ನಿಕೃಷ್ಟರಾಗಿ ಪರಿಗಣಿಸಬಾರದು, ಕಡೆಗಣಿಸಬಾರದು ಮತ್ತು ಆಕ್ರಮಿಸಬಾರದು. ತನ್ನ ಆಶ್ರಿತರನ್ನು ಗೌರವಿಸಬೇಕು ಮತ್ತು ಅನುಸರಿಸಬೇಕು. ಪ್ರಜ್ಞೆಗಳನ್ನು ಕಡೆಗಣಿಸದೆ, ಸಹೋದರತೆಯಿಂದ ವರ್ತಿಸುವುದು, ಅವರ ಅವಕಾಶಗಳನ್ನು ಸಂರಕ್ಷಣೆ ಮಾಡುವುದು ಜನಪ್ರತಿನಿಧಿಯಲ್ಲಿರಬೇಕಾದ ವಿನಯವಾಗಿದೆ.

ಪಾಮರರನ್ನು ಕಡೆಗಣಿಸದೆ ಇತರ ಪಂಡಿತರನ್ನು ನಿರ್ಲಕ್ಷಿಸದೆ ಎಲ್ಲರಿಗೂ ಮಹತ್ವವನ್ನು ನೀಡಿ ಗೌರವದೊಂದಿಗೆ ವರ್ತಿಸುವುದು ಪಾಂಡಿತ್ಯವುಳ್ಳವರ ವಿನಯವಾಗಿದೆ. ಅಭಿಪ್ರಾಯ ಭಿನ್ನತೆಗಳ ಹೆಸರಿನಲ್ಲಿ ದ್ವೇಷವನ್ನು ಬೆಳೆಸುವುದು. ವಾದ ವಿವಾದದ ಹೆಸರಿನಲ್ಲಿ ಅಪಪ್ರಚಾರ ಮಾಡುವುದು ಧಿಕ್ಕಾರ ಮತ್ತು ಅಹಂಕಾರದ ಲಕ್ಷಣವಾಗಿರುತ್ತದೆ. ಬಡವರ ಸಮಸ್ಯೆಗಳನ್ನು, ನೋವನ್ನು ಪರಿಗಣಿಸಿ ಅದನ್ನು ನೀಗಿಸಲು ಪ್ರಯತ್ನಿಸುವುದು ಶ್ರೀಮಂತರ ವಿನಯವಾಗಿದೆ. ಕೆಲಸಗಾರರ ಹಕ್ಕುಗಳನ್ನು ನೀಡುವುದು, ಅವರ ಕೆಲಸದ ಸಂಕಷ್ಟವನ್ನು ಸರಳಗೊಳಿಸಿ ಕೊಡುವುದು ಯಜಮಾನನ ವಿನಯವಾಗಿದೆ.

ವಿನಯದೊಂದಿಗೆ ವರ್ತಿಸಬೇಕೆಂದು ಪ್ರವಾದಿಯವರು(ಸ) ಅವರ ಸ್ವಂತ ನೆಲೆಯಲ್ಲಿ ಆದೇಶಿಸಿರುವುದಲ್ಲ, ಅಲ್ಲಾಹನು ಅವರಿಗೆ ದಿವ್ಯ ಮಾರ್ಗದರ್ಶನದ ಮೂಲಕ ಈ ರೀತಿ ಆದೇಶಿಸಿರುವನೆಂದು ವರದಿಯಾಗಿದೆ. ಇದು ಇಸ್ಲಾಮ್ ವಿನಯಕ್ಕೆ ನೀಡಿರುವ ಮಹತ್ವವನ್ನು ಸ್ಪಷ್ಟ ಪಡಿಸುತ್ತದೆ. ಮೂಲದಲ್ಲಿ ಪ್ರಯೋಗಿಸಲ್ಪಟ್ಟ 'ಫಕ್‌ರ್' ಎಂಬ ಪದವನ್ನು 'ಗರ್ವ' ಎಂದು ಅನುವಾದಿಸಲಾಗಿದೆ. ಅಂಥವಾದ ಗೋತ್ರಾಭಿಮಾನ, ದೊಡ್ಡತನ, ಅಧಿಕಾರ, ಸಂಪತ್ತು, ಶಿಕ್ಷಣ, ದೈಹಿಕ ಸಾಮರ್ಥ್ಯ, ಸಂತಾನ ಮುಂತಾದವುಗಳ ಬಗ್ಗೆ ಇರುವ ಅಹಂಕಾರ ಇವೆಲ್ಲವುಗಳನ್ನು ಈ ಪದವು ಒಳಗೊಂಡಿದೆ. ಇವುಗಳಲ್ಲಿ ಒಬ್ಬರಿಗೆ ಇರುವ ಹೆಚ್ಚಳವು ವಾಸ್ತವದಲ್ಲಿ ಅವರು ಇತರರನ್ನು ನಿಂದಿಸಲು, ದ್ರೋಹಿಸಲು ಅರ್ಹಗೊಳಿಸುವುದಿಲ್ಲ ಎಂಬುದನ್ನು ಇಲ್ಲಿ ಉದ್ದೇಶಿಸಲಾಗಿದೆ. 'ಬಗ್‌ಯ್' ಎಂಬ ಪದವನ್ನು ಅತಿಕ್ರಮಿಸುವುದು ಎಂದು ಅನುವಾದಿಸಲಾಗಿದೆ. ಅಮಿತವಾದುದನ್ನು ಬಯಸುವುದು, ನಿರೀಕ್ಷಿಸುವುದು ಇದರ ಮೂಲಾರ್ಥವಾಗಿದೆ. ಓರ್ವನಿಂದ ನಿಜವಾಗಿ ಸಿಗಬೇಕಾದುದಕ್ಕಿಂತ ಅಧಿಕವಾಗಿ, ಅದು ಸಂಪತ್ತಾಗಿದ್ದರೂ ಸೇವೆಯಾಗಿದ್ದರೂ ಪರಿಗಣನೆಯಾಗಿದ್ದರೂ ಗೌರವವಾಗಿದ್ದರೂ ಅದನ್ನು ನಿರೀಕ್ಷಿಸುವುದು 'ಬಗ್‌ಯ್' ಆಗಿದೆ. ಇದು ವಿನಯಕ್ಕೆ ವಿರುದ್ಧವಾದುದಾಗಿದೆ.



# 27. ಮೃದು ಸ್ವಭಾವ ಮತ್ತು ಸಹಾನುಭೂತಿ

عَنْ عَائِشَةَ رَضِيَ اللهُ عَنْهَا قَالَتْ قَالَ رَسُولُ اللهِ ﷺ إِنَّ الرِّفْقَ لَمْ يَكُنْ فِي شَيْءٍ إِلَّا زَانَهُ وَلَا نُزِعَ مِنْ شَيْءٍ قَطُّ إِلَّا شَانَهُ. (ابوداود)

ಪ್ರವಾದಿ(ಸ) ಹೀಗೆ ಹೇಳಿರುವುದಾಗಿ ಹ. ಆಯಿಶಾ(ರ) ವರದಿ ಮಾಡಿರುತ್ತಾರೆ. 'ಯಾವುದೇ ವಸ್ತುವಾಗಿದ್ದರೂ ಅದಕ್ಕೆ ಅಲಂಕಾರವಾಗಿ ಮೃದು ಸ್ವಭಾವವಿರುತ್ತದೆ. ಯಾವುದರಿಂದಲಾದರೂ ಮೃದುಸ್ವಭಾವವು ಇಲ್ಲವಾಗುವುದೆಂದರೆ ಅದು ಅದನ್ನು ನಷ್ಟಪಡಿಸಿ ಬಿಡುತ್ತದೆ.' (ಅಬೂದಾವೂದ್)

ಒಮ್ಮೆ ಪ್ರವಾದಿಯವರು(ಸ) ಪತ್ನಿ ಹ. ಆಯಿಶಾ(ರ)ರೊಂದಿಗೆ ಮದೀನಾದಿಂದ ಹೊರಗೆಲ್ಲೋ ಹೋಗ ಬಯಸಿದರು. ಆಗ ಅವರು ಒಂದು ವಾಹನವನ್ನು ಕೇಳಿದರು. ಸವಾರಿ ಮಾಡಿ ಅಭ್ಯಾಸವಿಲ್ಲದ ಒಂದು ಒಂಟೆಯನ್ನು ಶಿಷ್ಯರು ತಂದರು. ಪ್ರವಾದಿ(ಸ) ಹ. ಆಯಿಶಾ(ರ)ರೊಂದಿಗೆ ಹೇಳಿದರು. ''ಆಯಿಶಾ ಅದರೊಂದಿಗೆ ಸೌಮ್ಯವಾಗಿ ವರ್ತಿಸಬೇಕು.'' ಮುಂದುವರಿಯುತ್ತಾ ಈ ಮೇಲಿನ ವಚನವನ್ನು ಪ್ರಸ್ತಾಪಿಸಿದರು. ಈ ವಿಷಯವನ್ನು ಗಮನಿಸಿದರೆ ಮನುಷ್ಯ ಇತರ ಜೀವಿಗಳೊಂದಿಗೆ ವರ್ತಿಸುವಾಗ ಪಾಲಿಸಬೇಕಾದ ಮೃದು ಸ್ವಭಾವದ ಮಹತ್ವವು ಮನವರಿಕೆಯಾಗುತ್ತದೆ. ಇಲ್ಲಿ ಮೃದು ಸ್ವಭಾವ ಎಂದು ಅನುವಾದಿಸಿರುವುದು 'ರಿಫ್‌ಕ್' ಎಂಬ ಅರಬಿ ಪದವನ್ನಾಗಿದೆ. ಈ ಪದಕ್ಕೆ ಪ್ರೀತಿ, ಸಹಾನುಭೂತಿ, ಅನುಕಂಪ ಮುಂತಾದ ಅರ್ಥಗಳಿವೆ. ಈ ಅರ್ಥಗಳೆಲ್ಲವೂ ಇಲ್ಲಿ ಅನ್ವಯವಾಗುತ್ತದೆ.

ಯಾವ ಕೆಲಸವಾದರೂ ಮಾತುಕತೆಯಾದರೂ ಅದರಲ್ಲಿರುವ ಸೌಮ್ಯ ಗುಣ ಮತ್ತು ಮೃದು ಸ್ವಭಾವವು ಅದರ ಅಲಂಕಾರ ಮತ್ತು ಸೌಂದರ್ಯವಾಗಿದೆ. ಈ ಅಲಂಕಾರವು ಹೊರಟು ಹೋದರೆ ಅದು ನಗ್ನವೂ ಬಿಭತ್ಸವೂ ಆಗಿಬಿಡುತ್ತದೆ. ಇತರರ ಕಷ್ಟಗಳು ಸ್ವಂತ ಕಷ್ಟದಂತೆ ಭಾಸವಾಗುವುದು, ಇತರರ ನೋವು ತನ್ನ ನೋವಿನಂತೆ ಅನುಭವವಾಗುವುದು, ಬಹಳ ವಿಶಿಷ್ಟ ವ್ಯಕ್ತಿಗಳ ಸ್ವಭಾವವಿದು. ಈ ರೀತಿಯ ಮನಸ್ಸುಳ್ಳ ವ್ಯಕ್ತಿಗಳ ಮಾತು ಮತ್ತು ಕೃತಿಯಲ್ಲಿ ಸೌಮ್ಯ ಗುಣ ಮತ್ತು ಪ್ರೀತಿಯು ಪ್ರಕಾಶಿಸುತ್ತಿರುತ್ತದೆ. ಸತ್ಯವಿಶ್ವಾಸಿಗಳೆಲ್ಲರೂ ಈ ರೀತಿಯ ಮೃದು ಮನಸ್ಸುಳ್ಳವರಾಗಬೇಕೆಂದು ಇಸ್ಲಾಮ್ ಬಯಸುತ್ತದೆ.

ಕ್ರೌರ್ಯ, ನಿಷ್ಠುರತೆಯನ್ನು ಪುರುಷತ್ವವೆಂದೂ ಧೈರ್ಯವೆಂದೂ ಸೌಮ್ಯ ಸ್ವಭಾವ ಮತ್ತು ಸಹಾನುಭೂತಿಯನ್ನು ದೌರ್ಬಲ್ಯವೆಂದೂ ಕೆಲವರು ಭಾವಿಸುತ್ತಾರೆ. ಅವರು ಬೆಳಕನ್ನು

ಕತ್ತಲೆಯೆಂದೂ, ಕತ್ತಲೆಯನ್ನು ಬೆಳಕೆಂದೂ ತಪ್ಪಾಗಿ ತಿಳಿದಿದ್ದಾರೆ. ಕ್ರೂರತೆ ಮತ್ತು ನಿಷ್ಠುರತೆಗಳು ವಾಸ್ತವದಲ್ಲಿ ದೌರ್ಬಲ್ಯಗಳಾಗಿವೆ. ಕೋಪ, ಅಹಂಕಾರಗಳು ಅದರ ಮೂಲವಾಗಿದೆ. ಹಾವು ನಮ್ಮನ್ನು ಕಂಡರೆ ಕಚ್ಚಿ ಬಿಡುವುದು ಪೌರುಷದಿಂದಲೋ ಧೈರ್ಯದಿಂದಲೋ ಅಲ್ಲ, ಹೆದರಿಕೆ ಯಿಂದಾಗಿದೆ. ನಿಷ್ಠುರತೆ, ಹಿಂಸೆಗೆ ಹೆಸರುವಾಸಿಯಾದ ಸ್ಟಾಲಿನ್, ಹಿಟ್ಲರ್ ಮುಂತಾದವರೆಲ್ಲ ಒಳಗಿಂದೊಳಗೆ ಬಹಳ ಪುಕ್ಕಲು ವ್ಯಕ್ತಿಗಳಾಗಿದ್ದರು. ಸೊಂಟದಲ್ಲಿ ಖಡ್ಗವನ್ನು ನೇತಾಡಿಸಿಕೊಂಡು ನಡೆಯುವವರನ್ನು ನಾವು ಧೀರರೆಂದು ತಪ್ಪು ತಿಳಿಯುತ್ತೇವೆ. ವಾಸ್ತವದಲ್ಲಿ ಆತ್ಮಭಯವು ಅವರನ್ನು ಅದಕ್ಕೆ ಪ್ರೇರೇಪಿಸುತ್ತದೆ.

ಮೃದು ಸ್ವಭಾವ ಮತ್ತು ಸಹಾನುಭೂತಿಯ ಮೂಲವು ಪ್ರೀತಿ ಮತ್ತು ಧೈರ್ಯವಾಗಿದೆ. ಕೋಪ ಮತ್ತು ಹೆದರಿಕೆಯಿಂದ ಮುಕ್ತವಾದ ಧೈರ್ಯವೇ ವಾಸ್ತವದಲ್ಲಿ ಧೈರ್ಯವಾಗಿದೆ. ಮನಃಶಾಂತಿ, ಸಮಾಧಾನ ಎಂದೆಲ್ಲಾ ಕರೆಯುವುದು ಇದನ್ನೇ. ಅದು ಮನೋರೋಗ ಅಥವಾ ದೌರ್ಬಲ್ಯವಲ್ಲ, ವಾಸ್ತವದಲ್ಲಿ ಅದುವೇ ನಿಜವಾದ ಪೌರುಷ ಮತ್ತು ಮನೋದಾರ್ಢ್ಯವಾಗಿದೆ. ಇಂತಹ ಪೌರುಷ ಮತ್ತು ಮನೋಬಲ ಹೊಂದಿದ ವ್ಯಕ್ತಿಗಳಿಂದ ಮಾತ್ರ ಕುಟುಂಬದಲ್ಲಿ, ಸಮುದಾಯದಲ್ಲಿ, ಒಟ್ಟು ಪ್ರಪಂಚದಲ್ಲಿ ನಿರ್ಭೀತಿಯನ್ನು ಸಮಾಧಾನವನ್ನು ಸ್ಥಾಪಿಸಲು ಸಾಧ್ಯವಾಗುತ್ತದೆ.

ಕೇವಲ ಮನುಷ್ಯರ ಒಡನಾಟದಲ್ಲಿ ಮಾತ್ರ ಮೃದುವಾಗಿ ವರ್ತಿಸುವುದಲ್ಲ, ಯಾವ ಜೀವಿ ಯೊಂದಿಗೂ ಕ್ರೂರವಾಗಿ ವರ್ತಿಸಬಾರದೆಂದು ಇಸ್ಲಾಮ್ ಕಲಿಸುತ್ತದೆ. ಯಾವ ಜೀವಿಯನ್ನೂ ಅನ್ಯಾಯವಾಗಿ ಕೊಲ್ಲಬಾರದೆಂದು ಪವಿತ್ರ ಕುರ್‌ಆನ್ ಪದೇ ಪದೇ ಆದೇಶಿಸಿದೆ. ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲುವಾಗಲೂ ಗರಿಷ್ಠ ದಯೆ, ಅನುಕಂಪದೊಂದಿಗೆ ವರ್ತಿಸಬೇಕೆಂದು ಪ್ರವಾದಿ(ಸ) ನಿರ್ದೇಶಿಸಿರುವರು. ನಾಯಿ, ಬೆಕ್ಕಿನಂತಹ ಜೀವಿಗಳನ್ನೂ ಪೀಡಿಸಬಾರದು, ಹಸಿವೆಗೆ ಕೆಡಹಬಾರದು.

ಇಷ್ಟು ಮಾತ್ರವಲ್ಲ, ಜೀವವಿಲ್ಲದ ವಸ್ತುಗಳೊಂದಿಗೂ ಸೌಮ್ಯವಾಗಿ ಮೃದು ಸ್ವಭಾವದೊಂದಿಗೆ ಸತ್ಯವಿಶ್ವಾಸಿಗಳು ಸಮೀಪಿಸಬೇಕೆಂದು ಪವಿತ್ರ ಕುರ್‌ಆನ್ ಆಜ್ಞಾಪಿಸಿದೆ. ''ರಹ್ಮಾನನ ನಿಜವಾದ ದಾಸರು ಭೂಮಿಯ ಮೇಲೆ ಸೌಮ್ಯ ನಡಿಗೆ ನಡೆಯುತ್ತಾರೆ'' (ಅಲ್ ಫುರ್ಕಾನ್) ''ಭೂಮಿಯ ಮೇಲೆ ದರ್ಪದಿಂದ ನಡೆಯಬೇಡಿರಿ.''(ಬನೀ ಇಸ್ರಾಈಲ್)

ಸೌಮ್ಯವಾಗಿ ವರ್ತಿಸಲು ಸಾಧ್ಯವಾಗುವುದು ಮಹಾ ಅನುಗ್ರಹವಾಗಿದೆ. ಮಾತು, ಕೃತಿಗಳೆಲ್ಲವೂ ಕೆಟ್ಟು ಹೋಗುವುದು ದೊಡ್ಡ ಶಾಪವಾಗಿದೆ. ಒಮ್ಮೆ ಪ್ರವಾದಿ(ಸ) ಈ ರೀತಿ ಹೇಳಿದರು– ''ಸೌಮ್ಯ ಸ್ವಭಾವವು ನಷ್ಟವಾದವನಿಗೆ ಎಲ್ಲ ಒಳಿತುಗಳೂ ನಿಷಿದ್ಧವಾದವು.'' ಇನ್ನೊಮ್ಮೆ ಪ್ರವಾದಿ(ಸ) ಈ ರೀತಿ ಹೇಳಿರುವರು– ''ಅಲ್ಲಾಹನು ಮೃದು ಸ್ವಭಾವಿ. ಮೃದು ಸ್ವಭಾವವನ್ನು ಇಷ್ಟಪಡುತ್ತಾನೆ.'' ಅಲ್ಲಾಹನ ಇಷ್ಟಗುಣಗಳ ಪೈಕಿ ಮೃದು ಸ್ವಭಾವವೂ ಒಂದಾಗಿದೆ. ಆದುದರಿಂದ ಮೃದು ಸ್ವಭಾವವನ್ನು ತನ್ನದಾಗಿಸಿಕೊಳ್ಳುವುದು ಅಲ್ಲಾಹನ ದಾಸರಿಗೆ ಬಹಳ ಮಹತ್ವವುಳ್ಳ ವಿಷಯವಾಗಿದೆ.

# 28. ಸಹನೆಯೆಂಬ ಅನುಗ್ರಹ

عن مالك بن سنان الخدري رضي الله عنه قال قَالَ رَسُولُ اللهِ ﷺ

مَا أُعْطِيَ أَحَدٌ عَطَاءً خَيْرًا وَأَوْسَعَ مِنَ الصَّبْرِ (بخارى ومسلم)

ಪ್ರವಾದಿ ಮುಹಮ್ಮದ್(ಸ)ರು ಈ ರೀತಿ ಹೇಳಿರುವುದಾಗಿ ಹ. ಮುಆದ್ ಬಿನ್ ಸಿನಾನ್ ಖುದ್ರಿ(ರ) ವರದಿ ಮಾಡುತ್ತಾರೆ. ''ಸಹನೆಯಷ್ಟು ವಿಶಾಲವೂ ವಿಶಿಷ್ಟವೂ ಆದ ಒಂದು ಅನುಗ್ರಹ ಯಾವ ಮನುಷ್ಯನಿಗೂ ಲಭಿಸಿಲ್ಲ.'' (ಬುಖಾರಿ, ಮುಸ್ಲಿಮ್)

ಸಹನೆ ಪವಿತ್ರ ಕುರ್‌ಆನ್ ಬಹಳ ಮಹತ್ವದೊಂದಿಗೆ ಉಪದೇಶಿಸಿರುವ ಒಂದು ಗುಣವಾಗಿದೆ. ಕುರ್‌ಆನಿನಲ್ಲಿ ಎಪ್ಪತ್ತು ಸ್ಥಳಗಳಲ್ಲಿ ಸಹನೆಯ ಕುರಿತು ಪ್ರಸ್ತಾಪಿಸಲಾಗಿದೆ. ಸಹನೆಯ ಮಹತ್ವವನ್ನು ತಿಳಿಸುವ ಹದೀಸ್‌ಗಳು ಬಹಳಷ್ಟಿವೆ. ಅವುಗಳ ಪೈಕಿ ಒಂದು ಸಣ್ಣ ಹದೀಸನ್ನು ಮೇಲೆ ಪ್ರಸ್ತಾಪಿಸಲಾಗಿದೆ.

ಸಹನೆಯೆಂದರೆ, ಭಯ, ಆಲಸ್ಯ, ಸಾಮರ್ಥ್ಯವಿಲ್ಲದ ಕಾರಣ ಪೀಡನೆಯನ್ನು ಸಹಿಸುತ್ತಾ ಮುದುಡಿಕೊಳ್ಳುವುದರ ಹೆಸರಲ್ಲ, ಧೈರ್ಯ, ಉತ್ಸಾಹ, ಸಾಮರ್ಥ್ಯಗಳೆಲ್ಲ ಇದ್ದರೂ ಧಾರ್ಮಿಕ, ವಿಶ್ವಾಸಪರವಾದ ಸಮಸ್ಯೆಗಳು ಎದುರಾದಾಗ, ಅಭಿಮಾನಕ್ಕೆ, ಗೌರವಕ್ಕೆ ಧಕ್ಕೆಯುಂಟಾದಾಗ ಉಂಟಾಗುವ ನೋವನ್ನು ಸಹಿಸುವುದನ್ನು 'ಸಹನೆ' ಎಂದು ಹೇಳಲಾಗುತ್ತದೆ. ಪವಿತ್ರ ಕುರ್‌ಆನ್ 'ಸಹನೆ' ಎಂಬ ಪದವನ್ನು ಪ್ರಯೋಗಿಸಿರುವ ಹಲವೆಡೆಗಳಲ್ಲಿ ಅದನ್ನು ಧೈರ್ಯ, ಶೌರ್ಯ, ಸ್ಥೈರ್ಯ ಮುಂತಾದ ಪದಗಳಿಗೆ ಪರ್ಯಾಯವಾಗಿ ಬಳಸಿರುವುದನ್ನು ಕಾಣಬಹುದಾಗಿದೆ. 'ಶುಜಾಅತ್'' ಅಂದರೆ ಧೈರ್ಯ ಎಂಬ ಪದವು ಕುರ್‌ಆನಿನಲ್ಲಿ ಪ್ರಯೋಗಿಸಲ್ಪಟ್ಟಿಲ್ಲ ಎಂಬ ಅಂಶವೂ ಗಮನಾರ್ಹವಾಗಿದೆ. ಸಹನೆ ಮತ್ತು ಧೈರ್ಯ ಅಂದರೆ ಎರಡು ಬೇರೆ ಬೇರೆ ವಿಷಯಗಳಲ್ಲ ಎಂಬುದನ್ನು ಇದು ಎತ್ತಿ ತೋರಿಸುತ್ತದೆ.

ಸಹನೆಯು ಬುದ್ಧಿಯ ಕೆಲಸವಾಗಿದೆ. ಅಸಹನೆಯು ಅಂಧವಾದ ಭಾವನೆಯಿಂದುಂಟಾಗುತ್ತದೆ. ಬುದ್ಧಿಯು ಸಹನೆಯನ್ನು ಪಾಲಿಸುವಾಗ ಅತಿಯಾದ ಭಾವನೆಗಳು ಅದನ್ನು ತಡೆಯುತ್ತದೆ. ಸಹನೆಯಿಂದ ಸಿಗುವ ಸಂತೋಷ ಮತ್ತು ಅದರಿಂದ ಸಿಗುವ ಪ್ರತಿಫಲಗಳನ್ನು ಮನವರಿಕೆ ಮಾಡಿಕೊಳ್ಳಲು ಸಾಧ್ಯವಿರುವವರಿಗೆ ಬುದ್ಧಿಯ ಮಹತ್ವ ಮತ್ತು ವಿಕಾರಗಳ ನಿಕೃಷ್ಟತೆಯು ಮನದಟ್ಟಾಗುತ್ತದೆ.

ಸಹನೆಯು ಎರಡು ವಿಧಗಳಲ್ಲಿವೆ. ಒಂದು ಇಷ್ಟ ಪಡುವುದನ್ನು ವರ್ಜಿಸುವುದರಲ್ಲಿರುವ ಸಹನೆ. ಎರಡನೆಯದು ಅರೋಚಕವಾದುದನ್ನು ಅನುಭವಿಸುವುದರಲ್ಲಿರುವ ಸಹನೆ. ಇಷ್ಟವಿರುವುದನ್ನು ವರ್ಜಿಸುವುದರಿಂದ ಅಲ್ಲಾಹನ ಪ್ರೀತಿಗೆ ಪಾತ್ರರಾಗಬಹುದು. ದೇಹೇಚ್ಛೆಗಳ ತೊಂದರೆಗಳು ಮತ್ತು ಸಹನೆಯ ಆಂತರಿಕ ಫಲಗಳನ್ನು ಅರಿಯದವರಿಗೆ ಸಹನೆಯನ್ನು ಯುಕ್ತಿಯಿಂದ ಉಪಯೋಗಿಸಲು ಸಾಧ್ಯವಿಲ್ಲ. ಅವೆರಡನ್ನು ಸರಿಯಾಗಿ ತಿಳಿದವರಿಗೆ ಸಹನೆ ಪಾಲಿಸುವುದು ಅನಾಯಾಸಕರವಾಗುವುದು.

ಇಬ್ಬರು ಯುವಕರ ಬಳಿಯಿಂದ ಓರ್ವ ಸುಂದರಿ ನಡೆದು ಹೋಗುತ್ತಾಳೆ. ಇಬ್ಬರ ದೃಷ್ಟಿಯಲ್ಲೂ ಆಕೆ ಆಕರ್ಷಿತಳಾದಳು. ಅವರ ಪೈಕಿ ಒಬ್ಬನು ಕೂಡಲೇ ದೃಷ್ಟಿಯನ್ನು ಹಿಂತೆಗೆದು ಕೊಂಡನು. ಒಂದು ನಿಮಿಷದ ಬಳಿಕ ಆ ಕ್ಷುಲ್ಲಕ ವಿಷಯವನ್ನು ಮರೆತು ಬಿಟ್ಟನು. ಇನ್ನೋರ್ವ ಆ ಸುಂದರಿಯನ್ನು ಕಣ್ಣಿನಿಂದ ಮರೆಯಾಗುವ ತನಕ ನೋಡಿ ನಿಂತನು. ಹೀಗೆ ಅವನ ಮನಸ್ಸು ಅವಳಲ್ಲಿ ಲೀನವಾಯಿತು. ಇದು ಆ ನಂತರ ಬಹಳ ಸಮಸ್ಯೆಗಳಿಗೆ ಕಾರಣವಾಯಿತು. ಅದರ ಪರಿಣಾಮವಾಗಿ ಮಾನ-ಮರ್ಯಾದೆಗಳು ನಷ್ಟವಾಗಿ ಬಿಟ್ಟವು. ಪಾಪಗಳನ್ನು ಎಸಗಿ ಬಳಿಕ ಅದರಿಂದ ರಕ್ಷಣೆ ಹೊಂದಲು ಪ್ರಯತ್ನಿಸುವುದು ಪಶ್ಚಾತ್ತಾಪ ಪಡುವುದು ಇತ್ಯಾದಿಗಳಿಗಿಂತ ಯಾವುದೇ ಪಾಪಗಳನ್ನು ಮಾಡುವುದರಿಂದ ದೂರ ಉಳಿಯುವುದು ಸುಲಭದ ಕೆಲಸವಾಗಿದೆ ಎಂಬುದನ್ನು ಇದು ಕಲಿಸುತ್ತದೆ. ಸ್ವಲ್ಪ ಸಹನೆ ಮಾತ್ರ ಇದಕ್ಕೆ ಅಗತ್ಯವಿದೆ. ಪ್ರಥಮ ವ್ಯಕ್ತಿ ಅದನ್ನು ಅಗತ್ಯವಿರುವ ಸಮಯದಲ್ಲೇ ಉಪಯೋಗಿಸಿದ ಕಾರಣ ರಕ್ಷಣೆ ಹೊಂದಿದ. ಆದುದರಿಂದಲೇ ಸಹನೆಯು ಮನುಷ್ಯನಿಗೆ ದೊರೆತ ಬಹಳ ವಿಶಿಷ್ಟವಾದ ಮತ್ತು ವಿಶಾಲವಾದ ಅನುಗ್ರಹವಾಗಿದೆ ಎಂದು ಪ್ರವಾದಿಯವರು(ಸ) ಹೇಳಿರುವರು.

ಒಮ್ಮೆ ಅಲೀ(ರ) ಈ ರೀತಿ ಹೇಳಿದರು. 'ಶರೀರದಲ್ಲಿ ತಲೆಗಿರುವ ಸ್ಥಾನಮಾನವು ಈಮಾನಿನಲ್ಲಿ ಸಹನೆಗಿದೆ. ತಿಳಿದಿರಲಿ ಸಹನೆಯಿಲ್ಲದವನಿಗೆ ಈಮಾನ್ ಇಲ್ಲ.' ಒಂದು ಪ್ರವಾದಿ ವಚನದಲ್ಲಿ ಸಹನೆಯನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಒಂದು ಆಪತ್ತಿನ ವೇಳೆ ತೋರುವ ಸಹನೆ. ಎರಡನೆಯದು ಅಲ್ಲಾಹನಿಗೆ ಇಬಾದತ್ ಮಾಡುವುದರಲ್ಲಿರುವ ಸಹನೆ. ಮೂರನೆಯದು ಆ ಪಾಪವನ್ನು ವರ್ಜಿಸುವುದರಲ್ಲಿರುವ ಸಹನೆ ಇವುಗಳ ಪೈಕಿ ಶ್ರೇಷ್ಠವಾದುದು ಪಾಪಗಳನ್ನು ವರ್ಜಿಸುವುದರಲ್ಲಿರುವ ಸಹನೆಯಾಗಿದೆ. ಎರಡನೇಯ ಸ್ಥಾನವು ಆರಾಧನೆಗಳಲ್ಲಿರುವ ಸಹನೆಗಿದೆ. ಮೂರನೆಯ ಸ್ಥಾನವು ಆಪತ್ತು ಸಂಭವಿಸಿದಾಗ ಸಹನೆ ವಹಿಸುವುದಕ್ಕಿದೆ.

ನಮ್ಮನ್ನು ಕೈ ಬೀಸಿಕರೆಯುತ್ತಿರುವ ದುಷ್ಕೃತ್ಯಗಳಿಗೆ ಕಿವಿಗೊಡದೆ ದೃಢವಾಗಿರುವುದು. ಆಪತ್ತು ಸಂಭವಿಸಿದಾಗ ಸಹನೆ ವಹಿಸುವುದಕ್ಕಿಂತಲೂ ಮಹತ್ವವಿರುವ ಪ್ರಧಾನವಾದ ವಿಷಯವಾಗಿದೆ. ಎರಡನೆಯದಾಗಿ ನಾವು ಸಹನೆ ವಹಿಸಬೇಕಾದುದು ಧರ್ಮವನ್ನು ಪಾಲಿಸುವಾಗ. ಇವೆಲ್ಲವುಗಳಿಗಿಂತ ಕೆಳಗಿನ ಸ್ಥಾನದಲ್ಲಿ ಆಪತ್ತಿನ ಸಂದರ್ಭದಲ್ಲಿ ಸಹನೆ

ವಹಿಸುವುದಕ್ಕಿದೆ. ಇದುವೇ ಮೇಲೆ ಪ್ರಸ್ತಾಪಿಸಲಾದ ಪ್ರವಾದಿ ವಚನದ ಸಾರಾಂಶವಾಗಿದೆ. ಆದರೆ ನಾವಿಂದು 'ಸಹನೆ' ಎಂದರೆ ಆಪತ್ತು ಎದುರಾದಾಗ ತೆಗೆದುಕೊಳ್ಳಬೇಕಾದ ನಿಲುವು ಎಂಬ ತೀರ್ಮಾನವನ್ನು ತೆಗೆದುಕೊಂಡಿದ್ದೇವೆ. ಆದರ ಪರಿಣಾಮವನ್ನು ನಾವು ಅನುಭವಿಸುತ್ತಿದ್ದೇವೆ. ಪ್ರತಿಯೊಬ್ಬರಿಗೂ ಜೀವನದಲ್ಲಿ ವೈಯಕ್ತಿಕವಾಗಿ, ಸಾಮೂಹಿಕವಾಗಿ ಎದುರಿಸಬೇಕಾಗಿ ಬರುವ ಸಮಸ್ಯೆಗಳ ಕುರಿತು ಸಮಾಧಾನ ಚಿತ್ತರಾಗಿ ಆಲೋಚಿಸಿ ನೋಡಿರಿ. ಅವುಗಳಲ್ಲಿ ಹಲವು ವಿಷಯಗಳ ಮೂಲ ಕಾರಣ ಯಾವುದಾದರೂ ನಿಮಿಷದಲ್ಲಿ ನಮ್ಮಿಂದ ಸಂಭವಿಸಿ ಹೋದ ಅಸಹನೆಯಾಗಿರುತ್ತದೆ. ಪಾಪವನ್ನು ವರ್ಜಿಸುವ ವಿಷಯದಲ್ಲಿ ನಾವು ಪಾಲಿಸುತ್ತಿರುವ ಅಸಹನೆಯು ಅನೇಕ ವಿಪತ್ತುಗಳಿಗೆ, ವಿನಾಶಗಳಿಗೆ ಕಾರಣವಾಗುತ್ತಿದೆ. ದೃಢವಾದ ಸಹನೆಯಿಂದ ಅವೆರಡನ್ನು ನಿರ್ವಹಿಸುವುದಾದರೆ ಆ ಕಾರಣದಿಂದಾಗಿ ಆಪತ್ತುಗಳಲ್ಲಿ ಹೆಚ್ಚಿನವುಗಳು ಸಂಭವಿಸುವುದಿಲ್ಲ. ಅನೇಕ ಸಂದರ್ಭಗಳಲ್ಲಿ ನಮಗೆ ಆಪತ್ತುಗಳನ್ನು ಸಹಿಸಬೇಕಾಗಿ ಬರುವುದು. ಈ ಮೊದಲು ಪಾಪ ವರ್ಜನೆಯ ವಿಷಯದಲ್ಲಿ ಧರ್ಮನಿಷ್ಠೆಯ ವಿಷಯದಲ್ಲಿ ನಾವು ಸಹನೆ ಪಾಲಿಸಲು ಸಿದ್ಧರಾಗದ ಕಾರಣದಿಂದಾಗಿರುತ್ತದೆ. ಆದುದರಿಂದಲೇ ಆಪತ್ತುಗಳ ಸಂದರ್ಭದಲ್ಲಿ ವಹಿಸುವ ಸಹನೆಯನ್ನು ಮೂರನೆಯ ಸ್ಥಾನದಲ್ಲಿರುವ ಸಹನೆ ಎಂದು ಪರಿಗಣಿಸಲಾಗಿದೆ.



# 29. ಆತ್ಮ ಸಂತೃಪ್ತಿ

عَنْ أَبِي هُرَيْرَةَ رَضِيَ اللّٰهُ عَنْهُ قال قَالَ رَسُولُ اللّٰه ﷺ

لَيْسَ الْغِنَى عَنْ كَثْرَةِ الْعَرَضِ وَلَكِنَّ الْغِنَى غِنَى النَّفْسِ. (متفق عليه - ترمذي)

ಅಬೂ ಹುರೈರ(ರ) ವರದಿ ಮಾಡುತ್ತಾ ಪ್ರವಾದಿ(ಸ) ಹೇಳಿದರು- 'ಶ್ರೀಮಂತಿಕೆ ಎಂಬುದು ಸಂಪತ್ ಸೌಕರ್ಯಗಳ ಆಧಿಕ್ಯದ ಹೆಸರಲ್ಲ, ಮನಸ್ಸಿನ ಶ್ರೀಮಂತಿಕೆಯೇ ನಿಜವಾದ ಶ್ರೀಮಂತಿಕೆಯಾಗಿದೆ.' (ಮುತ್ತಫಕುನ್ ಅಲೈಹಿ, ತಿರ್ಮಿದಿ)

ಮನುಷ್ಯನ ಬಳಿ ಸಂಪತ್ತು ಸ್ಥಾನಮಾನಗಳು ಹೆಚ್ಚಿದಂತೆ ಅವನು ಸುಖ ಸಂತೋಷ ದಲ್ಲಿರುತ್ತಾನೆ ಎಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಆದುದರಿಂದ ಜನರು ಇವೆರಡನ್ನು ಗಳಿಸಲಿಕ್ಕಾಗಿ ಸದಾ ಪ್ರಯತ್ನ ಶೀಲರಾಗಿರುತ್ತಾರೆ. ಈ ಪರಿಶ್ರಮವನ್ನು ಪಡುತ್ತಿರುವಾಗ ನಾವು ತೆಗೆದುಕೊಳ್ಳುವ ನಿರ್ಧಾರಗಳು ನ್ಯಾಯ ಸಮ್ಮತವಾಗಿದೆಯೇ ಎಂಬುದನ್ನು ಪರಿಶೋಧಿಸಲು ಮರೆತು ಬಿಡುತ್ತೇವೆ. ಆ ಮೂಲಕ ವಾಸ್ತವದಲ್ಲಿ ನಾವು ಯಾವುದರ ಹುಡುಕಾಟದಲ್ಲಿರುತ್ತೇವೆಯೋ ಅದನ್ನೇ ಬಿಟ್ಟು ಬಿಡುತ್ತೇವೆ. ಇದರ ಪರಿಣಾಮವಾಗಿ ಎಷ್ಟು ಪರಿಶ್ರಮ ಪಟ್ಟರೂ ಏನೆಲ್ಲಾ ಸಂಪಾದಿಸಿದರೂ ಸುಖ ಸಂತೋಷವು ಇನ್ನೂ ನಮ್ಮಿಂದ ಬಹಳ ದೂರದಲ್ಲಿದೆ ಎಂಬುದು ನಮ್ಮ ಅನುಭವಕ್ಕೆ ಬರುತ್ತದೆ. ಹತ್ತು ಸಿಗುತ್ತಿರುವಾಗ ನೂರು ಸಿಕ್ಕಿದರೆ ನಾನು ಸಂತೋಷದಿಂದಿರಬಲ್ಲೆ ಎಂದು ಭಾವಿಸುತ್ತಾನೆ. ನೂರು ಸಿಕ್ಕಿದಾಗ ಸಾವಿರವನ್ನು ಬಯಸುತ್ತಾನೆ. ಇದೇ ರೀತಿ ಮುಂದುವರಿಯುವುದು. ಸ್ಥಾನಮಾನಗಳ ವಿಷಯವೂ ಇದೇ ರೀತಿ ಆಗಿರುತ್ತದೆ.

ತನ್ನ ಬಳಿ ಇರುವುದರಲ್ಲಿ ಸಂತೃಪ್ತನಾಗಿರುವ ಮನಸ್ಸಿನ ಅವಸ್ಥೆಯನ್ನು ಶ್ರೀಮಂತಿಕೆ, ಮನಃಶ್ಯಾಂತಿ ಎಂದು ಹೇಳಲಾಗುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ ತನ್ನ ಬಳಿ ಇಲ್ಲದಿರುವುದರ ಬಗ್ಗೆ ದುಃಖಿಸದೆ, ಇರುವುದರ ಬಗ್ಗೆ ಅಹಂಕಾರ ಪಡದಿರಲು ಸಾಧ್ಯ ವಾಗುವುದು ಮನಸ್ಸಿನ ಶ್ರೀಮಂತಿಕೆಯಾಗಿದೆ. ವ್ಯಕ್ತಿ ತನ್ನ ಯಾತನೆ, ನೋವು, ವೇದನೆಗಳನ್ನು ದೂರೀಕರಿಸಲು ಪ್ರಯತ್ನಿಸಬಾರದು, ಅದಕ್ಕಿಂತ ಉತ್ತಮ ಅವಸ್ಥೆಗೆ ತಲುಪಲು ಬಯಸಬಾರದು ಎಂಬುದು ಇದರ ಅರ್ಥವಲ್ಲ, ಜೀವನದ ಸಮಸ್ಯೆಗಳನ್ನು ಹೋಗಲಾಡಿಸಲು ಮತ್ತು ಹೆಚ್ಚು

ಸಂಪನ್ನನಾಗಲು ಪ್ರಯತ್ನಿಸುವುದು ಪ್ರತಿಯೊಬ್ಬ ಮನುಷ್ಯನ ಕರ್ತವ್ಯವಾಗಿದೆ. ಅದಕ್ಕೆ ಸದ್ಯ ಅವನಿರುವ ಪರಿಸ್ಥಿತಿಯ ಬಗ್ಗೆ ಅಸಂತೃಪ್ತಿ ಮತ್ತು ಅಸಹನೆ ಪಡಬೇಕಾದ ಅಗತ್ಯವಿಲ್ಲ. ಇರುವ ಅವಸ್ಥೆಯಲ್ಲೇ ಸಂತೃಪ್ತನಾಗಿ ಅದನ್ನೇ ಆಸ್ವಾದಿಸುತ್ತಾ ಅದಕ್ಕಿಂತಲೂ ಉತ್ತಮ ಅವಸ್ಥೆಯನ್ನು ತಲುಪಲು ಪ್ರಯತ್ನಿಸುವುದಕ್ಕೆ ಸಾಧ್ಯವಿದೆ. ಇನ್ನಷ್ಟು ಉನ್ನತಿಗೇರುವ ಹುಡುಕಾಟದಲ್ಲಿ ಸದ್ಯ ಇರುವುದನ್ನು ಆಸ್ವಾದಿಸುವುದಕ್ಕೆ ತಡೆಯಾಗಬಾರದು ಎಂಬುದು ಮುಖ್ಯ. ಇರುವುದರ ಬಗ್ಗೆ ತೃಪ್ತಿಹೊಂದಲು ಸಾಧ್ಯವಿಲ್ಲದ ವ್ಯಕ್ತಿಗೆ ಇನ್ನಷ್ಟು ಹೆಚ್ಚು ದೊರೆತರೂ ತೃಪ್ತಿ ಹೊಂದಲು ಸಾಧ್ಯವಿಲ್ಲ ಎಂಬುದು ವಾಸ್ತವಿಕತೆಯಾಗಿದೆ. ಹತ್ತು ಸಿಕ್ಕಿದಾಗ ಸಂತೃಪ್ತನಾಗಲು ಸಾಧ್ಯವಿರುವವನಿಗೆ ಮಾತ್ರ ನೂರು ಸಿಕ್ಕಿದರೂ ಸಂತೃಪ್ತನಾಗಲು ಸಾಧ್ಯ. ಇಲ್ಲದೆ ಹೋದರೆ ಎಷ್ಟು ದೊರೆತರೂ ಅವನ ಅಸಂತೃಪ್ತಿಯು ಹೆಚ್ಚುತ್ತಾ ಮತ್ತಷ್ಟು ಸಿಗಬೇಕೆಂಬ ದುರಾಸೆ ಬಾಕಿ ಉಳಿಯುತ್ತದೆ.

ಸಂಕ್ಷಿಪ್ತವಾಗಿ ನಾವು ಸುಖವನ್ನು ಅನ್ವೇಷಣೆ ಮಾಡಬೇಕಾದುದು ನಮ್ಮ ಬಳಿ ಇಲ್ಲದೆ ಇರುವುದರಲ್ಲಲ್ಲ, ಇರುವುದರಲ್ಲೇ ಸುಖವನ್ನು ಅರಸಬೇಕು. ತಮ್ಮ ಬಳಿ ಇರುವುದರಲ್ಲಿ ಸಂತೃಪ್ತಿ ಪಡಲು ಸಾಧ್ಯವಿಲ್ಲದವರು ತಮ್ಮ ಬಳಿ ಇಲ್ಲದೆ ಇರುವುದರ ಹೆಸರಿನಲ್ಲಿ ಅಸಹನೆ ತೋರುತ್ತಾರೆ. ಅವುಗಳನ್ನು ಗಳಿಸಲು ದುರಾಸೆ ಪಡುತ್ತಾರೆ. ಅದಕ್ಕಾಗಿ ವಾಮ ಮಾರ್ಗಗಳನ್ನು ಸ್ವೀಕರಿಸುತ್ತಾರೆ. ಇತರರಿಗೆ ದ್ರೋಹ ಬಗೆಯುತ್ತಾರೆ ಮತ್ತು ಇತರರಿಂದ ದ್ರೋಹಿಸಲ್ಪಡಲು ಕಾರಣ ಕರ್ತರಾಗುತ್ತಾರೆ. ಇರುವುದರಲ್ಲಿ ಸಂತೃಪ್ತನಾಗುವವನು ಇನ್ನಷ್ಟು ಗಳಿಸಲು ಪ್ರಯತ್ನಿಸುವುದು ಅವನ ಸಾಮರ್ಥ್ಯದ ಸದ್ವಿನಿಯೋಗವಾಗಿರುತ್ತದೆ. ಆ ಪ್ರಯತ್ನದಲ್ಲಿ ಅವನಿಗೇನೂ ಸಿಗದೇ ಇದ್ದರೂ ಆವನ ಸುಖದಲ್ಲಿ ಏನೂ ಕೊರತೆಯುಂಟಾಗುವುದಿಲ್ಲ. ಒಂದು ವೇಳೆ ಬಹಳ ದೊಡ್ಡ ಪ್ರಮಾಣದಲ್ಲಿ ಸಫಲತೆ ದೊರೆತರೂ ಆತ ನೆಲಬಿಟ್ಟು ಹಾರಾಡುವುದಿಲ್ಲ. ಏಕೆಂದರೆ ತಾನು ಕೆಲಸ ಮಾಡಿದ್ದೇನೆ ಎಂಬ ಅಂಶವೇ ಅವನಿಗೆ ಸಂತೃಪ್ತಿಯನ್ನು ನೀಡುತ್ತದೆ.



# 30. ಲಜ್ಜೆ ಎಂಬ ಕಾವಲುಗಾರ

عن أبي مَسْعُودٍ رَضِيَ اللّٰهُ عَنْهُ قال قَالَ رَسُولُ اللّٰه ﷺ إنَّ مِمَّا أدْرَكَ النَّاسِ مِنْ كَلَامِ النُّبُوَّةِ الْأُولَى إِذَا لَمْ تَسْتَحِ فَاصْنَعْ مَا شِئْتَ (بخارى)

ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳಿರುವುದಾಗಿ ಅಬೂ ಮಸ್‌ವೂದ್(ರ) ವರದಿ ಮಾಡುತ್ತಾರೆ.

''ನಿಮ್ಮಲ್ಲಿ ಲಜ್ಜೆ ಇಲ್ಲದೆ ಹೋದಾಗ ನಿಮಗಿಷ್ಟ ಬಂದಂತೆ ಮಾಡಿರಿ ಎಂಬುದು ಗತ ಪ್ರವಾದಿಗಳಿಂದ ಜನರಿಗೆ ದೊರೆತ ಬೋಧನೆಗಳ ಪೈಕಿ ಒಂದಾಗಿದೆ.'' (ಬುಖಾರಿ)

ಲಜ್ಜೆ ಎಂಬ ಮನುಷ್ಯ ಸ್ವಭಾವದ ಮಹತ್ವವನ್ನು ಈ ಪ್ರವಾದಿ ವಚನವು ಮನವರಿಕೆ ಮಾಡಿಸುತ್ತದೆ. ಲಜ್ಜೆಗೆ ಸಂಬಂಧಿಸಿದ ಶಿಕ್ಷಣವು ಗತ ಪ್ರವಾದಿಗಳ ಬೋಧನೆಗಳಲ್ಲಿ, ಇಸ್ಲಾಮೀ ಶರೀಅತ್‌ನಲ್ಲಿ ಇದ್ದ ಎಲ್ಲ ಕಾಲಗಳಲ್ಲಿಯೂ ಜನರು ನಿರಾಕರಿಸಲಾಗದ, ಬದಲಾಯಿಸಲು ಸಾಧ್ಯವಾಗದೆ ತಲೆಮಾರುಗಳಿಗೆ ವರ್ಗಾಯಿಸುತ್ತಾ ಬಂದಿರುವ ವಿಷಯವದು ಎಂದು ತಿಳಿದಾಗ ದೈವಿಕ ಧರ್ಮವು ಲಜ್ಜೆಗೆ ನೀಡಿರುವ ಪ್ರಾಧಾನ್ಯತೆಯು ಸ್ಪಷ್ಟವಾಗುತ್ತದೆ. ಲಜ್ಜೆಯು ಸಚ್ಚಾರಿತ್ರ್ಯದ ಕಾವಲುಗಾರನಂತಿದೆ. ಅದಿಲ್ಲದವರಿಗೆ ಸಭ್ಯತೆಯ ಪರಿಧಿಯೊಳಗೆ ನೆಲೆ ನಿಲ್ಲಲು ಸಾಧ್ಯವಿಲ್ಲ.

ಲಜ್ಜೆ ಎಂದರೆ ಕೆಡುಕನ್ನು ತೊರೆಯಲು ಮತ್ತು ಒಳ್ಳೆಯದನ್ನು ಸ್ವೀಕರಿಸಲು ಪ್ರೇರೇಪಿಸುವಂತಹ, ಕರ್ತವ್ಯಗಳಲ್ಲಿ ಕೊರತೆಯನ್ನುಂಟು ಮಾಡುವುದನ್ನು ತಡೆಯುವ ಒಂದು ಗುಣವಾಗಿದೆ. ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸುವ ಸುಪ್ರಧಾನ ಗುಣವಿಶೇಷತೆಗಳಲ್ಲಿ ಇದೂ ಒಂದಾಗಿದೆ. ಸೌಂದರ್ಯಪ್ರಜ್ಞೆ, ಆತ್ಮಾಭಿಮಾನ, ಶುಚಿತ್ವ, ವಿಶಿಷ್ಟ ವಸ್ತುಗಳೊಂದಿಗೆ, ಸತ್ಕರ್ಮಗಳೊಂದಿಗಿರುವ ಪ್ರೇಮ, ನಿಕೃಷ್ಟ ವಸ್ತುಗಳೊಂದಿಗೆ, ನೀಚ ವೃತ್ತಿಗಳ ಬಗ್ಗೆ ಇರುವ ಹಿಂಜರಿಕೆ, ಅಸಹ್ಯ ಭಾವನೆ ಇವೆಲ್ಲವೂ ಲಜ್ಜೆಯ ವಿವಿಧ ಭಾಗಗಳಾಗಿವೆ. ಲಜ್ಜೆಯಿಲ್ಲದವನಿಗೆ ಈ ಮೇಲೆ ಹೇಳಿದ ಒಳಿತುಗಳು ದೊರೆಯಲಾರವು.

ಲಜ್ಜೆ ಎರಡು ರೀತಿಯಲ್ಲಿದೆ. ಒಂದು ಸಹಜವಾದುದು. ಇನ್ನೊಂದು ಗಳಿಸುವಂತಹದ್ದು. ಮನುಷ್ಯ ಪ್ರಕೃತಿಯಲ್ಲಿ ಅಲ್ಲಾಹನು ಇಟ್ಟಿರುವ ಒಂದು ಗುಣವಿಶೇಷತೆ ಸಹಜವಾದ

ಲಜ್ಜಾ ಶೀಲತೆಯಾಗಿದೆ. ಮಕ್ಕಳಲ್ಲಿ ನಗ್ನತೆಯನ್ನು ಹೊರಗೆ ತೋರಿಸುವುದಕ್ಕಿರುವ ಹಿಂಜರಿಕೆ, ಕೆಟ್ಟ ಕೆಲಸಗಳ ಬಗ್ಗೆ ಹಿಂಜರಿಕೆಯ ರೂಪದಲ್ಲಿ ಇದು ಪ್ರಕಟವಾಗುತ್ತದೆ. ಕೆಡುಕುಗಳ ಬಗ್ಗೆ ಇರುವ ಹಿಂಜರಿಕೆ ಮತ್ತು ಒಳಿತುಗಳ ವಿಷಯದಲ್ಲಿರುವ ಆಸಕ್ತಿಯ ರೂಪದಲ್ಲಿ ಅದು ಬೆಳೆದು ಬರುತ್ತದೆ. ಅದನ್ನೇ ಪ್ರವಾದಿ(ಸ) ಈ ರೀತಿ ಹೇಳಿರುವರು. ''ಲಜ್ಜೆಯು ಒಳಿತಲ್ಲದೆ ಬೇರೇನನ್ನೂ ಕೊಡುವುದಿಲ್ಲ.'' ಜರ್ರಾ ಹಿಬ್ನ್ ಅಬ್ದುಲ್ಲಾ ಎಂಬ ಮಹಾನುಭಾವರು ಹೇಳುತ್ತಾರೆ. ''ನಲವತ್ತು ವರ್ಷಗಳ ಕಾಲ ನಾನು ಪಾಪವನ್ನು ವರ್ಜಿಸಿದ್ದು ಲಜ್ಜೆಯ ಕಾರಣದಿಂದಾಗಿತ್ತು. ಆ ಬಳಿಕ ನನ್ನಲ್ಲಿ ಭಕ್ತಿಯುಂಟಾಯಿತು.

ಆತ್ಮಸಂಸ್ಕರಣೆ ಮತ್ತು ಪ್ರಯತ್ನದಿಂದ ಲಜ್ಜೆಯನ್ನು ಗಳಿಸಬಹುದಾಗಿದೆ. ಇದು ಈ ಮೇಲೆ ಪ್ರಸ್ತಾಪಿಸಲ್ಪಟ್ಟ ಸಹಜ ಲಜ್ಜಾ ಶೀಲತೆಯ ಬೋಧಪೂರ್ವಕ ವಿಕಸನವಾಗಿದೆ. ಅಲ್ಲಾಹನ ಮೇಲೆ ವಿಶ್ವಾಸವಿರಿಸಿ, ಅವನು ನನ್ನ ಎಲ್ಲಾ ಕರ್ಮಗಳನ್ನು ನೋಡುತ್ತಿದ್ದಾನೆ ಎಂಬ ಪ್ರಜ್ಞೆಯೊಂದಿಗೆ ಕರ್ಮ ಜೀವನವನ್ನು ಉತ್ತಮ ಪಡಿಸಬೇಕು. ಇದುವೇ ಧರ್ಮಶಾಸ್ತ್ರ ಪರವಾದ ಲಜ್ಜೆ, ಲಜ್ಜೆಯುಳ್ಳ ವ್ಯಕ್ತಿ ಇತರರು ನೋಡುತ್ತಿರುವಂತೆ ಕೆಟ್ಟ ಕೆಲಸಗಳನ್ನು ಮಾಡುವುದಿಲ್ಲ, ನಶ್ವರವಾದ ಈ ಲೋಕದಲ್ಲಿ ಇತರರು ನೋಡುವುದಕ್ಕಿಂತ ತಾನು ಹೆದರಬೇಕಾದುದು, ಲಜ್ಜೆ ಪಡಬೇಕಾದುದು ಅಲ್ಲಾಹನನ್ನಾಗಿದೆ. ತನ್ನನ್ನು ಅಲ್ಲಾಹನು ನೋಡುತ್ತಿದ್ದಾನೆ ಎಂಬುದರ ಬಗ್ಗೆ ಸತ್ಯವಿಶ್ವಾಸಿ ಪ್ರಜ್ಞಾವಂತನಾಗಿರಬೇಕು. ಆದುದರಿಂದ ಸತ್ಯವಿಶ್ವಾಸಿಯ ಲಜ್ಜೆಯ ಗುಣವು ಅವನನ್ನು ಎಲ್ಲ ಪ್ರತ್ಯಕ್ಷ ಮತ್ತು ರಹಸ್ಯವಾದ ಕೆಡುಕುಗಳಿಂದ ತಡೆಯುತ್ತದೆ. ಪ್ರವಾದಿ(ಸ) ಒಂದು ಸಲ ಈ ರೀತಿ ಹೇಳಿದ್ದರು. 'ಅಲ್ಲಾಹನ ಮುಂದೆ ಲಜ್ಜೆಯ ನಿಮ್ಮ ತಲೆ ಅದರೊಳಗಿರುವುದರ ಬಗ್ಗೆ, ಹೊಟ್ಟೆ ಮತ್ತು ಅದರೊಳಗಿರುವುದರ ಬಗ್ಗೆ ಜಾಗರೂಕತೆ ವಹಿಸುವುದು. ಮರಣದ ಬಗ್ಗೆ, ವಿನಾಶದ ಬಗ್ಗೆ ಸ್ಮರಿಸುತ್ತಿರುವುದಾಗಿದೆ. ಪರಲೋಕವನ್ನು ಬಯಸುವವನು ಲೌಕಿಕ ಸುಖಾಡಂಬರಗಳನ್ನು ವರ್ಜಿಸುವನು. ಹಾಗೆ ಮಾಡಿದವನು ಅಲ್ಲಾಹನ ಮುಂದೆ ಲಜ್ಜೆಯುಳ್ಳವನಾಗುತ್ತಾನೆ.'

ನಮ್ಮ ವಿಚಾರಗಳನ್ನು ಭಾವನೆಗಳನ್ನು, ಮಾತು, ಕೆಲಸಗಳನ್ನು ಸಂಸ್ಕರಿಸಲಿಕ್ಕಾಗಿ ಅಲ್ಲಾಹನು ನಮ್ಮ ಒಳಗೆಯೇ ತಯಾರಿಸಿಟ್ಟಿರುವ ಒಂದು ಶುದ್ಧೀಕರಣ ಶಕ್ತಿಯೇ ಸಹಜ ಲಜ್ಜಾಶೀಲತೆಯಾಗಿದೆ. ಬೇರೆಲ್ಲಾ ಮನುಷ್ಯ ಸಹಜ ಗುಣಗಳಂತೆ ಇದನ್ನೂ ಪ್ರಜ್ಞಾಪೂರ್ವಕವಾಗಿ ಬೆಳೆಸದೆ ಹೋದರೆ ಅದು ನಿರ್ಜೀವವಾಗಿ ಬಿಡುವುದು. ಮನುಷ್ಯ ಜೀವನವನ್ನು ಸಮಗ್ರವಾಗಿ ಸಂಸ್ಕರಿಸಲು ಈಮಾನ್ ಅಥವಾ ಸತ್ಯವಿಶ್ವಾಸವಿದೆ. ಏಕದೇವ ವಿಶ್ವಾಸ, ಸತ್ಯಸಂಧತೆ, ಆತ್ಮಶುದ್ಧಿ, ಸ್ನೇಹ, ಕಾರುಣ್ಯ, ಕರ್ತವ್ಯಪ್ರಜ್ಞೆ, ಲಜ್ಜೆ ಮುಂತಾದ ಗುಣಗಳ ಸಜೀವವಾದ ಮತ್ತು ಸಕ್ರಿಯವಾದ ಅವಸ್ಥೆಯೇ ಸತ್ಯವಿಶ್ವಾಸ. ಆದುದರಿಂದ ಲಜ್ಜೆಯು ಈಮಾನಿನ ಪ್ರಮುಖ ಭಾಗವಾಗಿದೆ. ಪ್ರವಾದಿ(ಸ) ಹೇಳಿರುವರು. ಸತ್ಯವಿಶ್ವಾಸಕ್ಕೆ ಅರವತ್ತಕ್ಕಿಂತಲೂ ಹೆಚ್ಚು ಶಾಖೆಗಳಿವೆ. ಲಜ್ಜೆಯು ಈಮಾನಿನ ಒಂದು ಶಾಖೆಯಾಗಿದೆ. ಇಬ್ನು ಅಬ್ಬಾಸ್(ರ) ಹೇಳುತ್ತಾರೆ: ಲಜ್ಜಾಶೀಲತೆ ಮತ್ತು ಸತ್ಯವಿಶ್ವಾಸವು ಒಂದು ನೊಗಕ್ಕೆ ಕಟ್ಟಲ್ಪಟ್ಟ

ಜೋಡಿಗಳಂತೆ. ಅದರಲ್ಲೊಂದು ತಪ್ಪಿಸಿಕೊಂಡರೆ ಇನ್ನೊಂದು ಅದರ ಹಿಂದೆಯೇ ಹೋಗುತ್ತದೆ. ಒಬ್ಬ ಸತ್ಯವಿಶ್ವಾಸಿಯ ಜೀವನದಿಂದ ಲಜ್ಜೆಯು ಹೊರಟು ಹೋಗುವುದೆಂದರೆ ಅವನ ಬಗ್ಗೆ ಅಲ್ಲಾಹನು ಕೋಪಿಸಿಕೊಂಡಿದ್ದಾನೆ ಎಂಬುದಕ್ಕದು ಆಧಾರವಾಗಿದೆ.'' ಪ್ರವಾದಿ(ಸ) ಹೇಳಿರುವರು: ಅಲ್ಲಾಹನು ಒಬ್ಬ ಸತ್ಯವಿಶ್ವಾಸಿಯನ್ನು ದ್ವೇಷಿಸಿದರೆ ಆ ವ್ಯಕ್ತಿಯಿಂದ ಲಜ್ಜೆಯನ್ನು ಕಿತ್ತುಕೊಳ್ಳುವನು. ಆ ಬಳಿಕ ಲಜ್ಜಾಶೀಲತೆ ಕಳೆದುಹೋದ ವ್ಯಕ್ತಿಯನ್ನು ಎಲ್ಲರೂ ದ್ವೇಷಿಸುವರು ಮತ್ತು ಅವನು ಕೂಡಾ ಎಲ್ಲರನ್ನೂ ದ್ವೇಷಿಸುವವನಾಗಿ ಮಾರ್ಪಡುತ್ತಾನೆ. ಒಬ್ಬ ಸತ್ಯವಿಶ್ವಾಸಿಯಿಂದ ಹೊಣೆಗಾರಿಕೆಯ ಪ್ರಜ್ಞೆಯು ಕಳೆದುಹೋದರೆ, ಕಾರುಣ್ಯವೂ ಇಲ್ಲವಾಗುತ್ತದೆ. ಕಾರುಣ್ಯವು ಕಳೆದು ಹೋದರೆ ಅವನ ಹೆಗಲಿನಿಂದ ಇಸ್ಲಾಮಿನ ಹಗ್ಗವೇ ಕಡಿದು ಹೋಗುತ್ತದೆ. ಇಸ್ಲಾಮಿನ ಹಗ್ಗವು ಕಳೆದು ಹೋದರೆ ಆ ವ್ಯಕ್ತಿಯನ್ನು ಕೆಟ್ಟ ವ್ಯಕ್ತಿಯ ರೂಪದಲ್ಲಿ ಮಾತ್ರ ನೋಡಲಿಕ್ಕೆ ಸಾಧ್ಯ. ಇಸ್ಲಾಮಿನಲ್ಲಿ ಲಜ್ಜಾಶೀಲತೆ, ಪ್ರೀತಿ, ಹೊಣೆಗಾರಿಕೆ ಮುಂತಾದ ಗುಣಗಳೆಲ್ಲ ಅಭೇದ್ಯವಾದ ಸಂಬಂಧವನ್ನು ಹೊಂದಿದೆ ಎಂಬುದನ್ನು ಈ ಪ್ರವಾದಿ ವಚನವು ಮನದಟ್ಟು ಮಾಡಿಸುತ್ತದೆ. ನಿರ್ಲಜ್ಜೆ ಎಂಬುದು ಕೇವಲ ಒಂದು ಕೆಟ್ಟ ಸ್ವಭಾವ ಮಾತ್ರವಲ್ಲ, ಅದು ಮಾನವೀಯತೆಗೆ ವಿರುದ್ಧವೂ ಆಗಿದೆ. ನಾಸ್ತಿಕತೆ ಮತ್ತು ಸತ್ಯನಿಷೇಧವಾಗಿದೆ. ಸಹಜವಾದ ಮತ್ತು ಗಳಿಸಿದ ಲಜ್ಜೆಯನ್ನು ಕಳೆದುಕೊಂಡವನಿಗೆ ಅವನನ್ನು ಕೆಟ್ಟ ಕೆಲಸಗಳಿಂದ ದುಷ್ಟ ಸ್ವಭಾವಗಳಿಂದ ರಕ್ಷಿಸುವಂತಹ ಆತ್ಮಸಾಕ್ಷಿ ಉಳಿದಿರುವುದಿಲ್ಲ, ಆಗ ಅವನು ಅವಿಶ್ವಾಸಿಗೆ ಸರಿಸಮಾನನಾಗುವನು.

''ಲಜ್ಜೆ ಇಲ್ಲದಿದ್ದರೆ ನಿಮಗಿಷ್ಟ ಬಂದಂತೆ ಮಾಡಿರಿ'' ಎಂಬುದು ಒಂದು ಅನುಮತಿಯಲ್ಲ. ಲಜ್ಜೆ ಇಲ್ಲದೆ ಹೋದರೆ ಮಾನ-ಅಭಿಮಾನದ ಪ್ರಜ್ಞೆ, ಶುದ್ಧ-ಅಶುದ್ಧಗಳ ವ್ಯತ್ಯಾಸ, ಒಳಿತು-ಕೆಡುಕುಗಳ ವ್ಯತ್ಯಾಸದ ವಿವೇಚನಾ ಶಕ್ತಿ ಇಲ್ಲವಾಗುತ್ತದೆ. ಅವನು ಮನುಷ್ಯರಲ್ಲದ ಜೀವಿಗಳ ಅವಸ್ಥೆಗೆ ತಲುಪುತ್ತಾನೆ. ಬಳಿಕ ಅವನು ನಾಲ್ಕು ಕಾಲಿನ ಪ್ರಾಣಿಗಳಂತೆ ಏನು ಬೇಕಾದರೂ ಮಾಡಬಹುದು. ಆದರೆ ಅಲ್ಲಾಹನು ಅವರ ಕರ್ಮಗಳ ಕುರಿತು ವಿಚಾರಿಸದಿರಲಾರನು. ದುಷ್ಕೃತ್ಯವೆಸಗಿದವನು ಅದಕ್ಕೆ ತಕ್ಕುದಾದ ಶಿಕ್ಷೆಯನ್ನು ಅನುಭವಿಸಬೇಕಾಗಿ ಬರುವುದು ಎಂಬುದು ಈ ಮಾತಿನ ತಾತ್ಪರ್ಯವಾಗಿದೆ. ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಇದನ್ನು ಈ ರೀತಿ ಸ್ಪಷ್ಟಪಡಿಸಿರುತ್ತಾನೆ.

'ನಿಮಗೆ ಇಷ್ಟವಿರುವುದನ್ನು ಮಾಡುತ್ತಲಿರಿ. ನಿಮ್ಮ ಎಲ್ಲ ಚಟುವಟಿಕೆಗಳನ್ನೂ ಅಲ್ಲಾಹನು ವೀಕ್ಷಿಸುತ್ತಿದ್ದಾನೆ.' (41:40)

ಲಜ್ಜಾಶೀಲತೆಯ ಕೊರತೆ, ಅದರಿಂದುಂಟಾಗುವ ಅಶ್ಲೀಲತೆಯ ಪ್ರವಾಹಕ್ಕೆ ಸಾಕ್ಷಿಯಾಗ ಬೇಕಾದ ಕಾಲಘಟ್ಟದಲ್ಲಿ ಲೋಕವಿಂದು ಹಾದು ಹೋಗುತ್ತಿದೆ. ಸ್ವಂತ ಹಾಸಿಗೆಯಲ್ಲಿ ಬೆಳಕನ್ನು ಆರಿಸಿ ನಡೆಸುವ ಕೆಲಸಗಳನ್ನು ಕೂಡಾ ಅತ್ಯುಜ್ವಲ ಬೆಳಕನ್ನು ಹೊರಹೊಮ್ಮಿಸುವ ಸಾವಿರಾರು ದೀಪಗಳಿಂದ ಅಲಂಕರಿಸಲ್ಪಟ್ಟ ಸಾರ್ವಜನಿಕ ವೇದಿಕೆಗಳಲ್ಲಿ ಮಾಡಿ ತೋರಿಸಲು

ನಾಚಿಕೆಯಿಲ್ಲದ ಜನರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅದನ್ನು ನೇರವಾಗಿಯೂ ಸಿನೆಮಾಗಳ ಮೂಲಕವೂ ನೋಡುವ ಕುತೂಹಲಭರಿತ ಕಣ್ಣುಗಳೂ ಹೆಚ್ಚಿವೆ. ಲೋಕದ ನಾಯಕರೆಂದು ಹೆಸರು ಗಳಿಸಿರುವವರ ಸದಾಚಾರಕ್ಕೆ ವಿರುದ್ಧವಾದ ಆಬಾಸಕರ ನಡವಳಿಕೆಗಳ ವಾರ್ತೆಗಳನ್ನು ಕೇಳಲು ಮತ್ತು ನೋಡಲು ನಮಗದೆಷ್ಟು ಕುತೂಹಲ ತುಂಬಿರುತ್ತದೆ ಅಲ್ಲವೇ?



# 31. ನಿನಗೆ ಬೇಕಾದುದನ್ನೇ ಇತರರಿಗೂ ನೀಡಬೇಕು

عَنْ عَبْدِ اللَّهِ بْنِ عُمرٍ رَضِيَ اللَّهُ عَنْهُ قَالَ: قَالَ رَسُولُ اللَّهِ ﷺ مَنْ أَحَبَّ أَنْ يُزَحْزَحَ عَنِ النَّارِ وَيُدْخَلَ الْجَنَّةَ فَلْتَأْتِهِ مَنِيَّتُهُ وَهُوَ مُؤْمِنٌ بِاللَّهِ وَالْيَوْمِ الْآخِرِ وَلْيَأْتِ إِلَى النَّاسِ الَّذِي يُحِبُّ أَنْ يُؤْتَى إِلَيْهِ. (مسلم)

ಪ್ರವಾದಿ ಮುಹಮ್ಮದ್‌ರು(ಸ) ಈ ರೀತಿ ಹೇಳುರುವುದಾಗಿ ಅಬ್ದುಲ್ಲಾ ಇಬ್ನ್ ಉಮರ್(ರ) ವರದಿ ಮಾಡುತ್ತಾರೆ: 'ಓರ್ವ ವ್ಯಕ್ತಿ ನರಕದಿಂದ ಮುಕ್ತಿ ಮತ್ತು ಸ್ವರ್ಗವನ್ನು ಬಯಸುವುದಾದರೆ, ಅವನ ಮರಣವು ಅಲ್ಲಾಹನ ಮತ್ತು ಅಂತ್ಯದಿನದ ಮೇಲೆ ವಿಶ್ವಾಸ ಹೊಂದಿರುವ ಸ್ಥಿತಿಯಲ್ಲಾಗಿರಬೇಕು. ಜನರಿಂದ ಯಾವುದನ್ನು ಬಯಸುತ್ತಾನೋ ಅದೇ ರೀತಿಯಲ್ಲಿ ಅವರೊಂದಿಗೆ ವರ್ತಿಸಬೇಕು.' (ಮುಸ್ಲಿಮ್)

ಮನುಷ್ಯ ನರಕದಿಂದ ಮುಕ್ತಿ ಹೊಂದಿ ಸ್ವರ್ಗವನ್ನು ಗಳಿಸಬೇಕಿದ್ದರೆ ಅದಕ್ಕಾಗಿ ಮೂರು ಉಪಾಯಗಳನ್ನು ಪ್ರವಾದಿ ಮುಹಮ್ಮದ್(ಸ) ಈ ಹದೀಸಿನ ಮೂಲಕ ಕಲಿಸಿರುವರು.

ಇಲ್ಲಿ ವಿಶ್ವಾಸವೆಂದು ಹೇಳಿರುವುದು ಹೃದಯದಲ್ಲಿ ವಿಶ್ವಾಸವಿಟ್ಟು ನಾಲಗೆಯಿಂದ ಅದನ್ನು ಬಹಿರಂಗ ಪಡಿಸುವುದಾಗಿದೆ. ಅಲ್ಲಾಹನು ಏಕನಾಗಿರುವನು. ತಾನೂ ಸೇರಿದಂತೆ ಸಕಲ ಚರಾಚರಗಳು ಅವನ ಸೃಷ್ಟಿಗಳೂ ದಾಸರೂ ಆಗಿರುತ್ತೇವೆ ಎಂಬ ಸಜೀವವಾದ ವಿಶ್ವಾಸವಾಗಿದೆ. ಅಲ್ಲಾಹನು ಸೃಷ್ಟಿಕರ್ತನಾದರೆ ತಾನು ಸೃಷ್ಟಿಯಾಗಿದ್ದೇನೆ. ಅಲ್ಲಾಹನು ಒಡೆಯನಾಗಿದ್ದರೆ ನಾನವನ ದಾಸ. ಅಲ್ಲಾಹನ ಮತ್ತು ಕೇವಲ ಅಲ್ಲಾಹನ ದಾಸನಾಗಿ ಜೀವನವನ್ನು ಸಾಗಿಸುವುದೇ ನನ್ನ ಜೀವನದ ಉದ್ದೇಶ. ಅಲ್ಲಾಹನ ನಿಜವಾದ ದಾಸನಾಗಬೇಕಿದ್ದರೆ ಅವನನ್ನು ಮಾತ್ರ ಆರಾಧಿಸಬೇಕು. ಅವನ ವಿಧಿ-ನಿಷೇಧಗಳನ್ನು ಮಾತ್ರ ಅನುಸರಿಸಬೇಕು. ಮನಃಪೂರ್ವಕವಾದ ಈ ವಿಶ್ವಾಸ ಮತ್ತು ಅದಕ್ಕನುಸಾರವಾದ ಕರ್ಮವೂ ಸೇರಿಕೊಂಡಿರುವುದೇ ಈಮಾನ್ ಆಗಿದೆ. ಅದನ್ನು ಪ್ರವಾದಿಯವರು(ಸ) ಈ ರೀತಿ ವಿವರಿಸಿರುವರು. 'ನಿಮ್ಮ ಇಚ್ಛೆಗಳನ್ನು ನಾನು ತಂದ ವಿಧಿನಿಯಮಗಳಿಗೆ ಅಧೀನಗೊಳಿಸುವವರೆಗೆ ನಿಮ್ಮ ಪೈಕಿ ಯಾರೂ ವಿಶ್ವಾಸಿಗಳಾಗುವುದಿಲ್ಲ.'

ಅಂತ್ಯದಿನದ ಮೇಲಿನ ವಿಶ್ವಾಸವು ಎರಡನೆಯ ಮಾರ್ಗವಾಗಿದೆ. ಅಂತ್ಯದಿನದ ಮೇಲಿನ ವಿಶ್ವಾಸದಲ್ಲಿ ಪುನರುಜ್ಜೀವನ ಮತ್ತು ವಿಚಾರಣೆಯೂ ಸೇರಿದೆ. ಇಲ್ಲಿ ಕೂಡಾ ವಿಶ್ವಾಸವೆಂದರೆ ಆ ಬಗ್ಗೆ ಸರಿಯಾದ ಪ್ರಜ್ಞಾವಂತಿಕೆಯಾಗಿದೆ. ಮರಣಾನಂತರ ಎದ್ದೇಳಿಸಲ್ಪಡಲಿಕ್ಕಿದೆ. ಕರ್ಮಗಳ ಸಮಗ್ರ ವಿಚಾರಣೆಗೆ ಒಳ ಪಟ್ಟ ಬಳಿಕ ರಕ್ಷೆ ಶಿಕ್ಷೆಗಳು ಲಭಿಸುತ್ತವೆ ಎಂಬ ಪ್ರಜ್ಞೆಯುಳ್ಳ ವ್ಯಕ್ತಿ ತಾನು ಪಾಪಿಯೆಂದು ಪರಿಗಣಿಸಲ್ಪಡುವಂತಹ ಯಾವ ಕೆಲಸವನ್ನೂ ಮನಃಪೂರ್ವಕ ಮಾಡುವುದಿಲ್ಲ. ಒಳಿತು–ಕೆಡುಕು, ಧರ್ಮ–ಅಧರ್ಮದ ವ್ಯತ್ಯಾಸವಿಲ್ಲದೆ ಬಯಸಿದ್ದೆಲ್ಲವನ್ನೂ ಮಾಡಲು ಮುಂದೆ ಬರುವ ವ್ಯಕ್ತಿ ಪರಲೋಕ ವಿಶ್ವಾಸಿಯಲ್ಲ. ಅವನಿಗೆ ವಿಶ್ವಾಸವಿದ್ದರೂ ಅದು ನಿರ್ಜೀವವಾಗಿರುತ್ತದೆ.

ವಿಶ್ವಾಸ ಯಾವಾಗಲಾದರೂ ಒಮ್ಮೆ ಇದ್ದರೆ ಸಾಲದು. ಸತ್ಯವು ಮನವರಿಕೆಯಾದ ಬಳಿಕ ಜೀವನ ಪೂರ್ತಿ ಆ ಪ್ರಜ್ಞೆ ಮತ್ತು ಅದಕ್ಕನುಗುಣವಾದ ಕರ್ಮಗಳು ಮುಂದುವರಿಯಬೇಕು. ಆದುದರಿಂದಲೇ ಪ್ರವಾದಿ(ಸ) ವಿಶ್ವಾಸವನ್ನು ಮರಣದೊಂದಿಗೆ ಪ್ರಸ್ತಾಪಿಸಿರುವರು.

ಜನರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸುವುದು ಮೂರನೆಯ ಉಪಾಧಿಯಾಗಿದೆ. ಸಮಾಧಾನ, ಶಾಂತಿ, ಸಮೃದ್ಧವಾದ, ಅಭಿವೃದ್ಧಿಗೆ ಪೂರಕವಾದ ಸಮಾಜವನ್ನು ನಿರ್ಮಿಸುವುದರ ಕುರಿತು ಮನುಷ್ಯ ಬಹಳ ಹಳೆಯ ಕಾಲದಿಂದಲೇ ಚಿಂತನೆ ನಡೆಸುತ್ತಿದ್ದಾನೆ. ಇದಕ್ಕಾಗಿ ಬಹಳಷ್ಟು ತತ್ವ ಸಿದ್ಧಾಂತಗಳು ಚಾಲ್ತಿಗೆ ಬಂದಿವೆ. ಈ ಸಿದ್ಧಾಂತಗಳು, ಎಷ್ಟೇ ಭೌತಿಕ, ವೈಜ್ಞಾನಿಕವಾಗಿದ್ದರೂ ಗಂಭೀರವೂ, ಶಾಸನ ಬದ್ಧವೂ ಆಗಿದ್ದರೂ ಮನುಷ್ಯರು ಇತರ ಮನುಷ್ಯರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸುವುದು ಮಾತ್ರ ನೆಮ್ಮದಿ, ಸಮಾಧಾನ ತುಂಬಿದ ಸಮಾಜದ ಮೂಲವಾಗಿದೆ. ಮನುಷ್ಯ ಇದಕ್ಕೆ ಸಿದ್ಧನಿಲ್ಲದಿದ್ದರೆ ತತ್ವ ಸಿದ್ಧಾಂತ ಮತ್ತು ನಿಯಮಗಳಿಂದ ಯಾವ ಪ್ರಯೋಜನವೂ ಇಲ್ಲ. ಭೂಮಿಯಲ್ಲಿ ಸ್ವರ್ಗವನ್ನು ನಿರ್ಮಿಸಬೇಕಿದ್ದರೆ ಪರಸ್ಪರ ಪ್ರೀತಿಸಿ, ಸಹಕಾರದಿಂದಿರುವುದೇ ದಾರಿ. ಅದುವೇ ಪರಲೋಕದಲ್ಲಿ ಸ್ವರ್ಗ ಗಳಿಸಲಿಕ್ಕಿರುವ ಮಾರ್ಗ ಎಂದು ಪ್ರವಾದಿ(ಸ) ಈ ಹದೀಸಿನ ಮೂಲಕ ಮನವರಿಕೆ ಮಾಡಿಸಿರುವರು.

ಜನರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಬೇಕೆಂದು ಇಲ್ಲಿ ಹೇಳಲಾಗಿಲ್ಲ. ಜನರು ನಿನ್ನೊಂದಿಗೆ ಯಾವ ರೀತಿ ವರ್ತಿಸಬೇಕೆಂದು ನೀನು ಬಯಸುತ್ತೀಯೋ ಅದೇ ರೀತಿ ನೀನು ಅವರೊಂದಿಗೆ ವರ್ತಿಸಬೇಕು ಎಂದು ಹೇಳಲಾಗಿದೆ. ಮೊದಲ ವಾಕ್ಯಕ್ಕೆ ಹೋಲಿಸಿದರೆ ಬಹಳ ವಿಶಾಲವಾದ ಅರ್ಥವ್ಯಾಪ್ತಿ ಇದಕ್ಕಿದೆ. ನಾನು ಇತರರಿಗೆ ನೀಡಿದ್ದನ್ನು ಅವರಿಂದ ಪರೀಕ್ಷಿಸುವುದು ಅಥವಾ ಬಯಸುವುದು. ಅದು ಸಂಪತ್ತಾಗಿರಬಹುದು, ಅಧಿಕಾರವಾಗಿರಬಹುದು, ಪ್ರೀತಿಯಾಗಿರಬಹುದು, ಪರಿಗಣನೆಯಾಗಿರಬಹುದು, ಪ್ರಶಂಸೆಯಾಗಿರಬಹುದು. ಏನೇ ಆಗಿದ್ದರೂ ಇತರರಿಗೆ ನೀಡಲು ಇಷ್ಟ ಪಡದವರು ಅದನ್ನು ಇತರರಿಂದ ನಿರೀಕ್ಷಿಸಿದಾಗ ಸಂಬಂಧಗಳು ಶಿಥಿಲಗೊಳ್ಳುವುದು, ಸಂಘರ್ಷ ಆರಂಭವಾಗುವುದು.

ನನಗೆ ಯಾರೊಂದಿಗೂ ಪ್ರೀತಿಯ ಭಾವನೆ ಇಲ್ಲ. ಆದರೆ ಎಲ್ಲರೂ ನನ್ನನ್ನು ಪ್ರೀತಿಸಬೇಕು. ನಾನು ಯಾರನ್ನೂ ಗೌರವಿಸುವುದಿಲ್ಲ. ಆದರೆ ಎಲ್ಲರೂ ನನ್ನನ್ನು ಗೌರವಿಸಬೇಕು. ಪ್ರತಿಯೊಬ್ಬರೂ

ಈ ರೀತಿ ವರ್ತಿಸಿದರೆ ಈ ಜಗತ್ತು ಹೇಗಿರಬಹುದು? ಇಂದಿನ ಆಧುನಿಕ ಲೋಕವೇ ಇದಕ್ಕೆ ಉದಾಹರಣೆಯಾಗಿದೆ. ನನಗೆ ಎಲ್ಲರೂ ಸಹಾಯ ಮಾಡಬೇಕಿದ್ದರೆ ನಾನು ಎಲ್ಲರಿಗೂ ಸಹಾಯ ಮಾಡಬೇಕು. ನನ್ನನ್ನು ಎಲ್ಲರೂ ಇಷ್ಟಪಡಬೇಕಿದ್ದರೆ, ನಾನು ಎಲ್ಲರೂ ಇಷ್ಟ ಪಡುವಂತಿರಬೇಕು. ಹೀಗಾದರೆ ಎಲ್ಲರೂ ಪರಸ್ಪರ ಸಹಾಯ ಸಹಕಾರ ನೀಡುವವರಾಗಬಹುದು. ಅದುವೇ ಸಮಾನತೆಯ ಸುಂದರ ಲೋಕ.

ಹೀಗೊಂದು ಜಗತ್ತನ್ನು ಕಟ್ಟಿ ಬೆಳೆಸಬೇಕಿದ್ದರೆ ಓರ್ವ ಚಕ್ರವರ್ತಿ ಅಥವಾ ಸರಕಾರದ ಅಗತ್ಯವಿಲ್ಲ. ಸರಕಾರ ಅಥವಾ ಚಕ್ರವರ್ತಿ ಇಂತಹ ಜಗತ್ತು ಇರಬೇಕೆಂದು ಇಚ್ಛಿಸಿದರೂ ಅದನ್ನು ಸಾಧಿಸಲು ಸಾಧ್ಯವಾಗಬೇಕೆಂದಿಲ್ಲ. ಆದರೆ ಪ್ರತಿಯೊಬ್ಬ ಮನುಷ್ಯ ಬಯಸುವುದಾದರೆ ಅವನು ಈ ರೀತಿಯ ಅವನದೇ ಆದ ಸಣ್ಣ ಪ್ರಪಂಚವನ್ನು ಉಂಟು ಮಾಡಬಹುದು. ಅದಕ್ಕೆ ದೊಡ್ಡ ಪದವಿ, ಶಿಕ್ಷಣ, ತತ್ವಶಾಸ್ತ್ರಗಳ, ಸಿದ್ಧಾಂತಗಳ ಅಗತ್ಯವಿಲ್ಲ. ಯಾವ ವಿಷಯದಲ್ಲಾದರೂ ಸರಿ ನೀವು ಜನರಿಂದ ನಿರೀಕ್ಷಿಸುವುದನ್ನೇ ಅವರಿಗೂ ನೀಡಬೇಕು ಅಥವಾ ಇತರರನ್ನು ತನ್ನಂತೆಯೇ ಎಂದು ಭಾವಿಸಿ ವ್ಯವಹರಿಸಬೇಕು. ಅದು ಹೃದಯಾಂತರಾಳದಿಂದ ಬಂದ ಒಂದು ನಿಷ್ಕಳಂಕ ವರ್ತನೆಯಾದಾಗ ನನ್ನ ಲೋಕ, ನಿನ್ನ ಲೋಕ ಎಂಬುದು ಇಲ್ಲವಾಗಿ 'ನಮ್ಮ' ಲೋಕವು ಉಂಟಾಗುವುದು.



# 32. ಅಲ್ಲಾಹನನ್ನು ಮರೆತವರು

عن أبي سعيد رضي الله قال: قَالَ رَسُولُ اللّهِ ﷺ
يُؤْتَى بِالْعَبْدِ يَوْمَ الْقِيَامَةِ فَيَقُولُ لَهُ أَلَمْ أَجْعَلْ لَكَ سَمْعًا وَبَصَرًا
وَوَلَدًا وَسَخَّرْتُ لَكَ الْأَنْعَامَ وَالْحَرْثَ وَتَرَكْتُكَ تَرْأَسُ وَتَرْبَعُ فَكُنْتَ تَظُنُّ
أَنَّكَ مُلَاقٍ يَوْمَكَ هَذَا؟ فَيَقُولُ لَا فَيَقُولُ لَهُ الْيَوْمَ أَنْسَاكَ كَمَا نَسِيتَنِي. (ترمذى)

ಪ್ರವಾದಿ ಮುಹಮ್ಮದರು(ಸ) ಹೇಳಿರುವುದಾಗಿ ಅಬೂ ಸಈದ್(ರ) ವರದಿ ಮಾಡುತ್ತಾರೆ. ''ಅಂತ್ಯ ದಿನದಂದು ದಾಸನನ್ನು ಹಾಜರು ಪಡಿಸುವಾಗ ಅಲ್ಲಾಹನು ಈ ರೀತಿ ಪ್ರಶ್ನಿಸುವನು. ನಾನು ನಿನಗೆ ಶ್ರವಣ, ದೃಷ್ಟಿ ಮತ್ತು ಸಂತಾನಗಳನ್ನು ನೀಡಿರಲಿಲ್ಲವೇ? ಜಾನುವಾರುಗಳನ್ನೂ ಕೃಷಿ ಭೂಮಿಯನ್ನೂ ನಿನ್ನ ಅಧೀನಗೊಳಿಸಲಿಲ್ಲವೇ? ಜನರ ನಾಯಕನಾಗಿಯೂ ನೀನು ಅಧಿಕಾರವನ್ನು ಅನುಭವಿಸಿರಲಿಲ್ಲವೇ? ಆಗ ಈ ದಿನವನ್ನು ಎದುರಿಸಲಿಕ್ಕಿದೆ ಎಂದು ನಿನಗೆಂದಾದರೂ ತೋಚಿತ್ತೇ? ಆಗ ಅವನು ಉತ್ತರಿಸುವನು 'ಇಲ್ಲ'. ಅಲ್ಲಾಹನು ಹೇಳುವನು 'ಆಗ ನೀನು ನನ್ನನ್ನು ಮರೆತು ಬಿಟ್ಟಂತೆಯೇ ನಾನಿಂದು ನಿನ್ನನ್ನು ಮರೆತು ಬಿಡುವೆನು.'

(ತಿರ್ಮಿದಿ)

ಈ ಪ್ರವಾದಿ ವಚನವು ಭೌತಿಕ ಜೀವನದ ಸುಖಾಡಂಬರಗಳಲ್ಲಿ ಅದನ್ನು ಸಂಪಾದಿಸುವುದರಲ್ಲಿ ಮುಳುಗಿ ಹೋದ ಜನರಿಗೆ ಬಹಳ ಗಂಭೀರವಾದ ಎಚ್ಚರಿಕೆಯಂತಿದೆ. ಮನುಷ್ಯನ ಶ್ರವಣ, ದೃಷ್ಟಿ ಮುಂತಾದ ಶಾರೀರಿಕ ಯೋಗ್ಯತೆಗಳು, ಪತ್ನಿ-ಮಕ್ಕಳು ಮುಂತಾದ ಬಂಧುಮಿತ್ರಾದಿಗಳು, ಕೃಷಿ, ಜಾನುವಾರು ಮುಂತಾದ ಸೊತ್ತು ವಿತ್ತಗಳು, ನಾಯಕತ್ವ ಅಧಿಕಾರ ಮುಂತಾದವುಗಳೆಲ್ಲವೂ ಅಲ್ಲಾಹನ ಔದಾರ್ಯಗಳಾಗಿವೆ. ನಮಗಿಷ್ಟವಾದ ರೀತಿಯಲ್ಲಿ ಉಪಯೋಗಿಸಲು ಅಲ್ಲಾಹನು ನಮಗೆ ಈ ಅನುಗ್ರಹಗಳನ್ನು ನೀಡಿಲ್ಲ, ಬದಲಾಗಿ ಅವನಿಗಿಷ್ಟವಾದ ರೀತಿಯಲ್ಲಿ ಇವುಗಳನ್ನು ಬಳಸಬೇಕಿದೆ. ಅಲ್ಲಾಹನು ಇಷ್ಟ ಪಟ್ಟ ರೀತಿಯಲ್ಲಿ ನಾವು ಈ ಅನುಗ್ರಹಗಳನ್ನೆಲ್ಲ ಉಪಯೋಗಿಸಿದ್ದೇವೆಯೇ ಎಂಬುದರ ಕುರಿತು ಅವನೊಂದು ದಿನ ಖಂಡಿತ ನಮ್ಮೊಂದಿಗೆ ಪ್ರಶ್ನಿಸುವನು. ಮನುಷ್ಯನು ಸದಾ ಈ ವಿಷಯವನ್ನು

ನೆನಪಿನಲ್ಲಿಟ್ಟುಕೊಳ್ಳಬೇಕು. ಈ ನೆನಪು ಇಲ್ಲದೆ ಹೋದರೆ ನಾವು ನಮ್ಮನ್ನೇ ಮರೆತು ಬಿಡುವೆವು. ನಮ್ಮ ಶಾಶ್ವತವಾದ ಜೀವನ ಮತ್ತು ಅದರ ವಿಜಯದ ಕುರಿತೂ ಮರೆಯುತ್ತೇವೆ. ಮನುಷ್ಯನಿಗೆ ನೀಡಲ್ಪಟ್ಟ ಎಲ್ಲ ಅನುಗ್ರಹಗಳೂ ಅಲ್ಲಾಹನಿಂದ ಉದಾರವಾಗಿ ದೊರೆತಿವೆ ಎಂಬ ಸತ್ಯವನ್ನು ಮರೆತು ಬಿಟ್ಟವರ ಪಾಲಿಗೆ ಈ ಲೌಕಿಕ ಜೀವನವು ಯಾವುದೇ ಗೊತ್ತುಗುರಿ ಇಲ್ಲದ ಜೀವನವಾಗಿ ಬಿಡುವುದು. ಹೇಗಾದರೂ ಹುಟ್ಟಿ ಬಂದು ಮನಬಂದಂತೆ ಜೀವಿಸಿ ಮರಣ ಹೊಂದಿ ಮುಗಿದು ಬಿಡುವ ಪ್ರಯಾಣ. ಈ ಜನನ ಮರಣದ ಮಧ್ಯೆ ಸಾಧ್ಯವಿರುವಷ್ಟನ್ನು ಸಂಪಾದಿಸುವುದು, ಅನುಭವಿಸುವುದು ಮಾತ್ರ ಅವನ ಜೀವನದ ಗುರಿಯಾಗಿರುತ್ತದೆ. ಬೇರೆ ಯಾವ ವಿಷಯದ ಬಗ್ಗೆಯೂ ಅವನು ಆಲೋಚಿಸುವುದಿಲ್ಲ. ಈ ರೀತಿ ಜೀವಿಸಿದ ವ್ಯಕ್ತಿಗಳು ಮರಣಹೊಂದಿ ಅಲ್ಲಾಹನ ಮುಂದೆ ಹಾಜರಾಗುವಾಗ, ಅವನಿಗೆ ನೀಡಿದ ಪ್ರತಿಯೊಂದು ಅನುಗ್ರಹವನ್ನು ನೆನಪಿಸಿ ಅಲ್ಲಾಹನು ಪ್ರಶ್ನಿಸುವನು. ಈ ಸೌಭಾಗ್ಯಗಳನ್ನೆಲ್ಲಾ ನಿನಗೆ ಯಾವುದೇ ಉದ್ದೇಶವಿಲ್ಲದೆ, ಕೇವಲ ತಮಾಷೆಗಾಗಿ ಅಥವಾ ನಿನ್ನ ಸಾಮರ್ಥ್ಯದಿಂದ ಲಭಿಸಿರುವುದೆಂದು ನೀನು ಭಾವಿಸಿಕೊಂಡಿರುವೆಯಾ? ಅಲ್ಲಾಹನ ಸನ್ನಿಧಿಯಲ್ಲಿ ಕೈಕಟ್ಟಿ ನಿಂತು ಈ ಪ್ರಶ್ನೆಗೆ 'ಹೌದು' ಎಂದು ಉತ್ತರಿಸಲು ಯಾರಿಗೂ ಸಾಧ್ಯವಿಲ್ಲ. ಕಾರಣವೇನೆಂದರೆ ಈ ಪ್ರಪಂಚದ ಬಗ್ಗೆ, ಮನುಷ್ಯ ಜೀವನದ ಬಗ್ಗೆ ಅರಿವುಳ್ಳ, ಚಿಂತನೆ ನಡೆಸುವ ಯಾರ ವಿವೇಕ ಮತ್ತು ಆತ್ಮ ಸಾಕ್ಷಿಯೂ ಇದೆಲ್ಲ ಸುಮ್ಮನೆ ಸೃಷ್ಟಿಸಲ್ಪಟ್ಟಿದೆ ಎಂಬುದನ್ನು ಒಪ್ಪಿಕೊಳ್ಳಲಾರದು. ಸೃಷ್ಟಿಕರ್ತನನ್ನು ಧಿಕ್ಕರಿಸಿ ತನ್ನಿಷ್ಟ ಪ್ರಕಾರ ಜೀವಿಸಲಿಕ್ಕಾಗಿ ದೇವನನ್ನೂ ಸೃಷ್ಟಿಯ ರಹಸ್ಯವನ್ನೂ ಎಷ್ಟು ಕಡೆಗಣಿಸಿದರೂ ಸರಿ. ವಾಸ್ತವದಲ್ಲಿ ಅವರು ವಿವೇಕ ಮತ್ತು ಆತ್ಮ ಸಾಕ್ಷಿಯ ಕರೆಯನ್ನು ಕಡೆಗಣಿಸಿದ್ದರು. ಆದುದರಿಂದ ವಿಚಾರಣೆಯ ಸಮಯದಲ್ಲಿ ತನ್ನ ಅನುಗ್ರಹ, ಸೌಭಾಗ್ಯಗಳೆಲ್ಲವೂ ಅಲ್ಲಾಹನಿಂದ ದೊರೆತವುಗಳೆಂದೂ ಅವನು ಒಪ್ಪಿಕೊಳ್ಳುವನು. ಹಾಗಾದರೆ ಈ ಅನುಗ್ರಹಗಳನ್ನೂ ಔದಾರ್ಯಗಳನ್ನೂ ನೀಡಿದ ಅಲ್ಲಾಹನು ಒಂದು ದಿನ ಈ ನೀಡಲ್ಪಟ್ಟವುಗಳನ್ನು ಏಕೆ ಮತ್ತು ಯಾವ ರೀತಿಯಲ್ಲಿ ವ್ಯಯಿಸಿದೆಯೆಂದು ಪ್ರಶ್ನಿಸುವನು ಎಂದು ನಿನಗೆ ಅನ್ನಿಸಲೇ ಇಲ್ಲವೇ ಎಂದು ಮುಂದುವರಿದು ಅಲ್ಲಾಹನು ಪ್ರಶ್ನಿಸುವನು. 'ಇಲ್ಲ' ಎಂದವನು ಉತ್ತರಿಸುವನು. 'ಇಲ್ಲ' ಎಂದು ಇಲ್ಲಿ ಹೇಳಿರುವುದರ ಅರ್ಥ ನನಗೆ ಹಾಗೆ ಅನ್ನಿಸಲೇ ಇಲ್ಲ ಎಂದಲ್ಲ, ಆತ್ಮ ಸಾಕ್ಷಿಯ ಕರೆಯನ್ನು ನಾನು ನಿರ್ಲಕ್ಷಿಸಿದೆ ಅಥವಾ ಮರೆತು ಬಿಟ್ಟೆ ಎಂದಾಗಿದೆ. ಕಾರಣವೇನೆಂದರೆ ಅಲ್ಲಾಹನು ಮುಂದುವರಿಯುತ್ತಾ ಹೇಳುವ ವಿಷಯ, 'ನೀನು ನನ್ನನ್ನು ಮರೆತು ಬಿಟ್ಟಂತೆಯೇ ನಾನಿಂದು ನಿನ್ನನ್ನು ಮರೆತು ಬಿಡುವೆನು' ಎಂದಾಗಿದೆ. ನಿನಗೆ ನೀಡಲ್ಪಟ್ಟ ಅನುಗ್ರಹಗಳೆಲ್ಲವೂ ಸ್ವಯಂಭು ಅಲ್ಲವೆಂದೂ, ಸೃಷ್ಟಿಕರ್ತನು ನೀಡಿರುವ ಅನುಗ್ರಹವೆಂದೂ ನಿನ್ನ ಆತ್ಮ ಸಾಕ್ಷಿ ಮತ್ತು ವಿವೇಕವು ನಿನಗೆ ತಿಳಿಸಿದೆ. ಆದರೆ ನೀನದನ್ನು ಮರೆತು ಬಿಟ್ಟೆ, ಆದುದರಿಂದ ನಾನೂ ನಿನ್ನನ್ನು ಮರೆತು ಬಿಡುವೆನು. ಅಲ್ಲಾಹನು ಓರ್ವನನ್ನು ಮರೆತು ಬಿಡುವುದರ ಅರ್ಥವೇನೆಂದರೆ ಅವನನ್ನು ನರಕಕ್ಕೆ ತಳ್ಳಿಬಿಡುವುದಾಗಿದೆ.



# 33. ಸಣ್ಣಪುಟ್ಟ ಪಾಪಕೃತ್ಯಗಳು

عَنْ عَائِشَةَ رَضِيَ اللّٰهُ عَنْهَا أَنَّ رَسُولَ اللّٰهِ ﷺ قَالَ يَا عَائِشَةُ إِيَّاكِ وَمُحَقَّرَاتِ الذُّنُوبِ فَإِنَّ لَهَا مِنَ اللّٰهِ طَالِبًا. (ابن ماجه، بيهقى، دارمي)

ಪ್ರವಾದಿ(ಸ) ಹೇಳಿರುವುದಾಗಿ ಹ.ಆಯಿಶಾ(ರ) ವರದಿ ಮಾಡುತ್ತಾರೆ– ''ಓ ಆಯಿಶಾ! ಸಣ್ಣಪುಟ್ಟ ಪಾಪಕೃತ್ಯಗಳಿಂದ ದೂರವಿರು. ಏಕೆಂದರೆ ಅಲ್ಲಾಹನ ಬಳಿ ಅವುಗಳ ಬಗ್ಗೆಯೂ ಖಂಡಿತ ವಿಚಾರಿಸಲಾಗುವುದು.'' (ಇಬ್ನು ಮಾಜ, ಬೈಹಕಿ, ದಾರಿಮಿ)

ಮರಣಾನಂತರ ಜೀವನದ ಬಗ್ಗೆ, ಪರಲೋಕ ವಿಚಾರಣೆಯ ಬಗ್ಗೆ ಪ್ರಜ್ಞೆಯುಳ್ಳ ವ್ಯಕ್ತಿಗಳು ದೊಡ್ಡ ಪಾಪಕೃತ್ಯಗಳಿಂದ ದೂರ ಉಳಿಯುವುದು ಸಾಮಾನ್ಯ ವಿಷಯವಾಗಿದೆ. ದೇವಭಯವುಳ್ಳ ಕೆಲವು ವ್ಯಕ್ತಿಗಳಲ್ಲೂ ಸಣ್ಣಪುಟ್ಟ ಪಾಪಗಳೆಂದು ಪರಿಗಣಿಸಲಾಗುವ ಪಾಪಗಳ ಬಗ್ಗೆ ಅಸಡ್ಡೆ ತೋರಿಸುವ ಮತ್ತು ಅದನ್ನು ಕಡೆಗಣಿಸುವ ಸ್ವಭಾವವು ಕಂಡು ಬರುತ್ತದೆ. ಅಂದರೆ ಕೆಡುಕುಗಳು ಎಷ್ಟು ಸಣ್ಣದಾಗಿದ್ದರೂ, ಪರವಾಗಿಲ್ಲ ಎಂದು ಭಾವಿಸಬಾರದು. ಅವುಗಳ ಬಗ್ಗೆಯೂ ಜಾಗರೂಕತೆ ವಹಿಸಬೇಕು. ಅದರಿಂದ ದೂರ ಉಳಿಯಬೇಕು ಎಂದು ಪ್ರವಾದಿಯವರು(ಸ) ಈ ವಚನದಲ್ಲಿ ಬಹಳ ಗೌರವಪೂರ್ವಕ ನೆನಪಿಸಿರುವರು. ಏಕೆಂದರೆ ಅಲ್ಲಾಹನು ನಮ್ಮ ವಿಚಾರಣೆಯನ್ನು ನಡೆಸುವಾಗ ಸಣ್ಣ ಒಳಿತುಗಳನ್ನು ಪರಿಗಣಿಸುವಂತೆಯೇ ಸಣ್ಣ ಕೆಡುಕುಗಳ ಬಗ್ಗೆಯೂ ವಿಚಾರಿಸುವನು ಮತ್ತು ಅದಕ್ಕೆ ಸೂಕ್ತವಾದ ಪ್ರತಿಫಲವನ್ನು ನೀಡುವನು.

ದೊಡ್ಡ ಪಾಪಗಳೊಂದಿಗೆ ಹೋಲಿಸಿ ನೋಡಿದಾಗ ಮಾತ್ರ ನಮಗೆ ಕೆಲವು ಪಾಪಗಳು ಸಣ್ಣದಾಗಿ ಕಂಡು ಬರುತ್ತದೆ. ಅಲ್ಲಾಹನು ಇಷ್ಟಪಡದ ಕೆಲಸಗಳು, ಅಲ್ಲಾಹನು ವಿಚಾರಣೆಗೊಳಪಡಿಸುವನು ಎಂಬ ನಿಟ್ಟಿನಲ್ಲಿ ಈ ಸಣ್ಣ ಪುಟ್ಟ ಪಾಪಗಳು ಕ್ಷುಲ್ಲಕವೆಂದು ಪರಿಗಣಿಸಬೇಕಾದವುಗಳಲ್ಲ. ತೀಕ್ಷ್ಣ ವಿಷವುಳ್ಳ ಹಾವುಗಳು ಮತ್ತು ಸಾಧಾರಣ ವಿಷವುಳ್ಳ ಹಾವುಗಳ ಮಧ್ಯೆ ಇರುವ ವ್ಯತ್ಯಾಸ ಮಾತ್ರ ದೊಡ್ಡ ಪಾಪಗಳು ಮತ್ತು ಸಣ್ಣಪುಟ್ಟ ಪಾಪಕೃತ್ಯಗಳ ಮಧ್ಯೆ ಇದೆ. ಎರಡೂ ಸರ್ಪಗಳೇ ಆಗಿವೆ. ಎರಡರಲ್ಲೂ ವಿಷವಿದೆ. ದೊಡ್ಡ ಸರ್ಪವು ಕಡಿದರೆ

ತಕ್ಷಣವೇ ಸತ್ತು ಹೋಗುತ್ತಾರೆ. ಇಲ್ಲದಿದ್ದರೆ ಭಯಾನಕವಾದ ಅನಾರೋಗ್ಯಕ್ಕೆ ಶರೀರವು ಒಳಗಾಗಿಬಿಡಬಹುದು. ಸಣ್ಣ ಪ್ರಮಾಣದಲ್ಲಿ ವಿಷವುಳ್ಳ ಸರ್ಪಗಳು ಕಡಿದರೆ ಶರೀರದಲ್ಲಿ ಹೆಚ್ಚಿನ ತೊಂದರೆ ಅನುಭವಕ್ಕೆ ಬರುವುದಿಲ್ಲ, ಆದರೂ ವಿಷವು ಶರೀರದಲ್ಲಿ ಪ್ರವೇಶಿಸಿ ರಕ್ತದೊಂದಿಗೆ ಸೇರುತ್ತದೆ. ಕಾಲಕ್ರಮೇಣ ಸಣ್ಣ ಪ್ರಮಾಣದ ವಿಷವೇ ಆರೋಗ್ಯದ ಮೇಲೆ ಪ್ರತಿಕೂಲ ಪರಿಣಾಮವನ್ನುಂಟು ಮಾಡಬಹುದು. ಅಲ್ಪ ವಿಷವುಳ್ಳ ಸರ್ಪವೇ ಮೇಲಿಂದ ಮೇಲೆ ಕಡಿದರೆ ಮನುಷ್ಯನು ಅನಾರೋಗ್ಯಕ್ಕೀಡಾಗಿ ಮರಣ ಹೊಂದುವ ಸಾಧ್ಯತೆ ಇರುತ್ತದೆ. ಸಣ್ಣಪುಟ್ಟ ಪಾಪಕೃತ್ಯಗಳ ವಿಷಯವೂ ಇದೇ ರೀತಿಯಾಗಿದೆ. ಸಣ್ಣಪುಟ್ಟ ಪಾಪಕೃತ್ಯಗಳು ನಿಧಾನವಾಗಿ ನರಕದೆಡೆಗೆ ಕೊಂಡೊಯ್ದರೆ, ದೊಡ್ಡ ಪಾಪಗಳು ಶೀಘ್ರವಾಗಿ ನಮ್ಮನ್ನು ಅದಕ್ಕೆ ತಳ್ಳಿ ಹಾಕಿ ಬಿಡಬಹುದು.



# 34. ಆತ್ಮ ಸಂಸ್ಕರಣೆಯ ದಾರಿಗಳು

اَوْرَدَ اَبُو هُرَيْرَةَ عَنْ رَسُولِ اللَّهِ ﷺ إِنَّ الْمُؤْمِنَ إِذَا أَذْنَبَ كَانَتْ نُكْتَةٌ سَوْدَاءَ فِي قَلْبِهِ فَإِذَا تَابَ وَرَجَعَ وَاسْتَغْفَرَ صَقَلَ قَلْبُهُ وَإِذَا زَادَ زَادَتْ حَتَّى تَعْلُو قَلْبَهُ. (ترمذي)

ಪ್ರವಾದಿ(ಸ) ಹೇಳಿರುವುದಾಗಿ ಹ. ಅಬೂ ಹುರೈರ(ರ) ವರದಿ ಮಾಡುತ್ತಾರೆ: ''ಮನುಷ್ಯನು ಪಾಪಕೃತ್ಯಗಳನ್ನೆಸಗಿದಾಗ ಅವನ ಮನದಲ್ಲಿ ಒಂದು ಕಪ್ಪು ಚುಕ್ಕೆ ಬೀಳುತ್ತದೆ. ತರುವಾಯ ಅವನು ಆ ಪಾಪಕೃತ್ಯವನ್ನು ತೊರೆದು ಅಲ್ಲಾಹನಲ್ಲಿ ಕ್ಷಮೆ ಯಾಚಿಸಿ ಅವನ ಕಡೆಗೆ ಪಶ್ಚಾತ್ತಾಪ ಪಟ್ಟು ಮರಳಿದರೆ ಅವನ ಮನಸ್ಸು ಶುಭ್ರವೂ ಪ್ರಕಾಶಮಾನವೂ ಆಗುತ್ತದೆ. ಆದರೆ ಅವನು ಪುನಃ ಪಾಪ ಕೃತ್ಯಗಳನ್ನೆಸಗಿದರೆ ಆ ಕಪ್ಪು ಕಲೆಯು ಹೆಚ್ಚುತ್ತಲೇ ಹೋಗುತ್ತದೆ. ಕೊನೆಗೆ ಅದು ಇಡೀ ಮನಸ್ಸನ್ನು ವ್ಯಾಪಿಸುತ್ತದೆ.'' (ತಿರ್ಮಿದಿ)

ಮನಸ್ಸೆಂಬುದು ಮನುಷ್ಯನಲ್ಲಿರುವ ಮುಖ್ಯವಾದ ಭಾಗವಾಗಿದೆ. ಮನುಷ್ಯನ ವಿಚಾರ, ಭಾವನೆಗಳು, ಅಭಿಲಾಷೆಗಳೆಲ್ಲವೂ ಹುಟ್ಟಿಕೊಳ್ಳುವುದು ಮನಸ್ಸಿನಲ್ಲಾಗಿದೆ. ಮನಸ್ಸಿನಲ್ಲಿ ರೂಪಿತವಾಗುವ ವಿಚಾರ, ಭಾವನೆಗಳು, ಅಭಿಲಾಷೆಗಳೆಲ್ಲವೂ ಮನುಷ್ಯನ ವರ್ತನೆಯನ್ನು ನಿಯಂತ್ರಿಸುತ್ತದೆ. ಆದುದರಿಂದ ಮನಸ್ಸು ಒಳ್ಳೆಯದಾಗಿದ್ದರೆ ಮನುಷ್ಯ ಒಳ್ಳೆಯವನಾಗುತ್ತಾನೆ. ಅದು ಕೆಟ್ಟು ಹೋದರೆ ಮನುಷ್ಯ ಕೆಟ್ಟು ಹೋಗುತ್ತಾನೆ ಎಂದು ಪ್ರವಾದಿ(ಸ) ಇನ್ನೊಂದು ವಚನದಲ್ಲಿ ಹೇಳಿರುವರು.

ಮನುಷ್ಯನ ಮನಸ್ಸು ಕೆಟ್ಟು ಹೋಗುವುದು ಹೇಗೆ ಎಂದೂ ಅದನ್ನು ಶುದ್ಧ ಮಾಡುವ ದಾರಿ ಯಾವುದೆಂದೂ ಬಹಳ ಸರಳ ಸುಂದರವಾಗಿ ಒಂದು ಉದಾಹರಣೆಯ ಮೂಲಕ ಪ್ರವಾದಿಯವರು(ಸ) ವಿವರಿಸಿರುವರು.

ಮನುಷ್ಯರೆಲ್ಲರೂ ಶುದ್ಧವಾದ ಪ್ರಕೃತಿಯಲ್ಲಿ ಸೃಷ್ಟಿಸಲ್ಪಟ್ಟಿದ್ದಾರೆ. ಆರಂಭದಲ್ಲಿ ಎಲ್ಲರ ಮನಸ್ಸೂ ಒಂದು ಶುಭ್ರ ಕನ್ನಡಿಯಂತೆ ಅಥವಾ ಸ್ಪಟಿಕದ ಗೋಳದಂತೆ ಇರುತ್ತದೆ. ಮನುಷ್ಯನು ಪಾಪಕೃತ್ಯವನ್ನು ಎಸಗುವವರೆಗೆ ಈ ಶುಭ್ರತೆ ಮತ್ತು ಪ್ರಕಾಶವು ಉಳಿಯುತ್ತದೆ.

ಪಾಪಕೃತ್ಯವನ್ನು ಎಸಗಿದಾಗ ಅವನ ಮನದಲ್ಲಿ ಒಂದು ಕಪ್ಪು ಚುಕ್ಕೆಯು ಬೀಳುತ್ತದೆ. ಅಂದರೆ ಅವನ ಸ್ವಭಾವದಲ್ಲಿ ಆದುವರೆಗೆ ಇದ್ದ ಪಾವಿತ್ರ್ಯಕ್ಕೆ ಸಣ್ಣದೊಂದು ಕುಂದು ಉಂಟಾಗುತ್ತದೆ. ಕೂಡಲೇ ಅವನು ಪಾಪದ ಬಗ್ಗೆ ಪ್ರಜ್ಞೆಯುಳ್ಳವನಾಗಿ ಇನ್ನು ಮುಂದೆ ಅಂತಹ ಪಾಪಕೃತ್ಯವನ್ನು ಮಾಡುವುದಿಲ್ಲವೆಂಬ ತೀರ್ಮಾನವನ್ನು ಕೈಗೊಳ್ಳುವುದರ ಜೊತೆಗೆ, ಅಲ್ಲಾಹನೆಡೆಗೆ ಪಶ್ಚಾತ್ತಾಪ ಪಟ್ಟು ಮರಳಿದರೆ ಮನಸ್ಸಿನಲ್ಲುಂಟಾದ ಕಪ್ಪು ಚುಕ್ಕೆಯು ಮರೆಯಾಗುತ್ತದೆ. ಮಾತ್ರವಲ್ಲ ಅದು ತನ್ನ ಮೂಲ ಪ್ರಕಾಶವನ್ನು ಪಡೆದುಕೊಳ್ಳುತ್ತದೆ. ಅಂದರೆ ಅವನ ಸ್ವಭಾವವು ಪುನಃ ಪರಿಶುದ್ಧವಾಗುತ್ತದೆ.

ಅರಿಯದೆ ಅಥವಾ ಕೆಲವು ದುರ್ಬಲ ನಿಮಿಷಗಳಲ್ಲಿ ಅರಿತು ಕೂಡಾ ಮನುಷ್ಯನಿಂದ ಕೆಲವು ಪಾಪಕೃತ್ಯಗಳು ಸಂಭವಿಸುತ್ತವೆ. ಮನುಷ್ಯನ ದೌರ್ಬಲ್ಯಗಳ ಕುರಿತು ಚೆನ್ನಾಗಿ ಅರಿತಿರುವ ಸೃಷ್ಟಿಕರ್ತನು ಇಂತಹ ಪಾಪಗಳನ್ನು ಕ್ಷಮಿಸಿ ಬಿಡಲು ಸಿದ್ಧನಿರುತ್ತಾನೆ. ಆದರೆ ಅದು ಕ್ಷಮಿಸಲ್ಪಡಬೇಕೆಂದು ಮನುಷ್ಯ ಬಯಸಬೇಕು. ಈ ಬಯಕೆಯೇ ವಾಸ್ತವದಲ್ಲಿ ಅಲ್ಲಾಹನ ಮೇಲಿನ ವಿಶ್ವಾಸವಾಗಿದೆ. ಪಾಪಕೃತ್ಯಗಳನ್ನೆಸಗಿ ಅದರ ಕುರಿತು ದುಃಖ ಉಂಟಾಗದಿರುವುದು, ಅದು ಕ್ಷಮಿಸಲ್ಪಡಬೇಕೆಂಬ ಬಯಕೆಯೂ ಉಂಟಾಗದಿರುವುದು ಅವಿಶ್ವಾಸದ ಲಕ್ಷಣವಾಗಿದೆ.

ಪಾಪಗಳನ್ನು ಎಸಗಿದವನಿಗೆ, ತಾನೆಸಗಿದ ಪಾಪಗಳ ಬಗ್ಗೆ ಗೊತ್ತಾದಾಗ, ಹೃದಯಾಂತರಾಳದಿಂದ ಪಶ್ಚಾತ್ತಾಪ ಪಡುವುದಾದರೆ ಬಳಿಕ ಅವನು ಬೇಗನೇ ಅಂತಹ ಪಾಪವನ್ನು ಪುನರಾವರ್ತಿಸುವುದಿಲ್ಲ. ಅವನ ಪಶ್ಚಾತ್ತಾಪವು ಹೃದಯಾಂತರಾಳದಿಂದ ಬಂದದ್ದೂ, ಬಹಳ ಬಲಿಷ್ಠವೂ ಆಗಿದ್ದರೆ ಒಂದು ವೇಳೆ ಜೀವನದಲ್ಲೆಂದೂ ಅಂತಹ ಪಾಪಗಳು ಪುನರಾವರ್ತನೆಯಾಗುವುದಿಲ್ಲ. ಈ ರೀತಿ ಅವನ ಪಶ್ಚಾತ್ತಾಪವು ಅವನ ಹೃದಯವನ್ನು ಶುದ್ಧಗೊಳಿಸುತ್ತದೆ. ಆದುದರಿಂದ ಪಶ್ಚಾತ್ತಾಪದೊಂದಿಗೆ ಮನುಷ್ಯನ ಮನಸ್ಸಿನ ಕಪ್ಪು ಚುಕ್ಕೆಯು ಮಾಯವಾಗುವುದು ಎಂದು ಹೇಳುವುದರ ಬದಲಾಗಿ ಅವನ ಮನಸ್ಸು ಶುಭ್ರವೂ ಪ್ರಕಾಶಮಾನವೂ ಆಗುತ್ತದೆ ಎಂದು ಹೇಳಲಾಗಿದೆ.

ಸಂಭವಿಸಿ ಹೋದ ಪಾಪಗಳ ಬಗ್ಗೆ ನಮಗೆ ಯಾವುದೇ ಪಶ್ಚಾತ್ತಾಪ ಉಂಟಾಗದಿದ್ದರೆ ಮನಸ್ಸಿನ ಕಪ್ಪು ಕಲೆಯು ಬಾಕಿಯಾಗುವುದು ಮಾತ್ರವಲ್ಲ, ನಾವು ಮತ್ತಷ್ಟು ಪಾಪಕೃತ್ಯವನ್ನೆಸಗಲು ಪ್ರೇರಣೆ ಸಿಗುವುದು, ಹೃದಯವು ಕೂಡಾ ಕಪ್ಪಾಗಿ ಬಿಡುವುದು. ನಮ್ಮ ಚಾರಿತ್ರ್ಯವೂ ಸಂಪೂರ್ಣವಾಗಿ ಕೆಟ್ಟು ಹೋಗುವುದು.

ನಾವು ಅರಿತೋ ಅರಿಯದೆಯೋ ಮಾಡಿದ ಪಾಪಕೃತ್ಯಗಳು ಎಷ್ಟೇ ಸಣ್ಣದಾಗಿದ್ದರೂ ಅದನ್ನು ಕಡೆಗಣಿಸಬಾರದು ಎಂಬುದು ಈ ಹದೀಸ್ ನಮಗೆ ಕಲಿಸಿಕೊಡುವ ದೊಡ್ಡ ಪಾಠವಾಗಿದೆ. ಒಂದು ಪಾಪವು ಕೊನೆಯಿಲ್ಲದ ಪಾಪಗಳ ಸರಮಾಲೆಯ ಕೊಂಡಿಯಾಗಿದೆ. ಅದನ್ನು ಆರಂಭದಲ್ಲೇ ಕಿತ್ತು ತೆಗೆಯದಿದ್ದರೆ ಅದು ಪುನರಾವರ್ತನೆಯಾಗುತ್ತಲೇ ಇರುತ್ತದೆ. ಕೊನೆಗೆ ನಾವು ಬಯಸಿದರೂ ಆ ಪಾಪಗಳಿಂದ ಮುಕ್ತರಾಗಲು ಸಾಧ್ಯವಾಗದ ಅವಸ್ಥೆಗೆ ಬಂದು ತಲುಪಿ ಬಿಡುತ್ತೇವೆ.

ಮನುಷ್ಯನ ಮನಸ್ಸು ಪಾಪಗಳಲ್ಲಿ ಮುಳುಗಿ ಹೋಗುವುದು ಹೇಗೆಂದು ವಿದ್ವಾಂಸರು ಹೇಳಿಕೊಟ್ಟಿರುವರು. ಚಿಂತನೆ ಮತ್ತು ಭಾವನೆಗಳ ಮೂಲಕ ಲೌಕಿಕ ಮತ್ತು ಪಾರತ್ರಿಕ ಒಳಿತುಗಳನ್ನು ಗಳಿಸಲಿಕ್ಕಾಗಿ ಮತ್ತು ಕೆಡುಕನ್ನು ವರ್ಜಿಸಲು ಮನುಷ್ಯನ ಮನಸ್ಸು ಸೃಷ್ಟಿಸಲ್ಪಟ್ಟಿದೆ. ಮನಸ್ಸನ್ನು ಅದರ ಸೃಷ್ಟಿಯ ಉದ್ದೇಶವಾದ ಈ ಕೆಲಸಗಳಿಗೆ ವಿನಿಯೋಗಿಸದಿದ್ದರೆ ಅದು ನಿಷಿದ್ಧವಾದ ವಿಷಯಗಳೆಡೆಗೆ ತಿರುಗುತ್ತದೆ. ಮದ್ಯಪಾನ, ಅತಿಯಾದ ನಿದ್ರೆ, ಪ್ರಜ್ಞಾಶೂನ್ಯತೆ ಮುಂತಾದವು ಅದರ ದಾರಿ ತಪ್ಪುವಿಕೆಯನ್ನು ಇನ್ನಷ್ಟು ತ್ವರಿತಗೊಳಿಸುತ್ತದೆ. ಈ ರೀತಿ ಅದು ಕ್ರಮೇಣ ತುಕ್ಕು ಹಿಡಿದ ಕಬ್ಬಿಣದಂತೆ ಕೆಟ್ಟು ಹೋಗುವುದು.

ರಾಬಿಯಾ ಅದವಿಯ್ಯ ಹೇಳುತ್ತಾರೆ: ಅವರ ಹೃದಯವು ಸರ್ವಶ್ರೇಷ್ಠನಾದ ಅಲ್ಲಾಹನಿಂದ ತಪ್ಪಿಸಿಕೊಂಡು ಭೌತಿಕ ಪ್ರೇಮದಲ್ಲಿ ತಲ್ಲೀನವಾಗಿಬಿಡುತ್ತದೆ. ಅವುಗಳನ್ನು ವರ್ಜಿಸಿದ್ದರೆ ಅದು ಎರಡೂ ಲೋಕಗಳಲ್ಲಿ ವಿಹರಿಸುತ್ತಾ ಅಗಣಿತವಾದ ಪ್ರತಿಫಲದೊಂದಿಗೆ ಹಿಂತಿರುಗಿ ಬರುತ್ತದೆ.

ಹೃದಯಕ್ಕೆ ಹಿಡಿದ ತುಕ್ಕನ್ನು ತೆಗೆಯುವುದರ ಬಗ್ಗೆಯೂ ಹಿಂದಿನ ಕಾಲದ ವಿದ್ವಾಂಸರು ಚಿಂತನೆ ನಡೆಸಿದ್ದಾರೆ: ಒಮ್ಮೆ ಓರ್ವ ವ್ಯಕ್ತಿ ಹಸನ್ ಬಸರಿಯವರ ಬಳಿ ಬಂದು ಹೃದಯದ ಕಾಠಿಣ್ಯತೆ ಉಂಟಾದ ಬಗ್ಗೆ ದೂರು ಹೇಳಿದರು. ಆಗ ಹಸನ್ ಬಸರಿ ಆ ವ್ಯಕ್ತಿಗೆ ಈ ರೀತಿ ಉಪದೇಶಿಸಿದರು:

'ದಿಕ್ರ್‌ಗಳ ಮುಖಾಂತರ ನಿಮ್ಮನ್ನು ತೊಳೆದುಕೊಳ್ಳಿರಿ.' ಅಲ್ಲಾಹನನ್ನು ಸ್ಮರಿಸುವುದು, ಕೀರ್ತನೆ ಮಾಡುತ್ತಿರುವುದು ಮನಸ್ಸನ್ನು ಜಾಗೃತವಾಗಿರಿಸುವ ಮಾರ್ಗವೆಂಬುದು ಇದರ ಅರ್ಥ. ಅಲ್ಲಾಹನ ಅನುಗ್ರಹಗಳ ಬಗ್ಗೆ ಪ್ರಜ್ಞೆ, ಅವನ ಕಾರುಣ್ಯದ ಬಗ್ಗೆ ನಿರೀಕ್ಷೆ, ಅವನ ಶಿಕ್ಷೆಯ ಬಗ್ಗೆ ಭಯ ಇವುಗಳಿಗೆ ಎಂತಹ ಕಠಿಣ ಹೃದಯವನ್ನೂ ಮೃದುವಾಗಿಸುವ ಸಾಮರ್ಥ್ಯವಿದೆ.

ಮೇಲಿನಂತೆ ಸಮಸ್ಯೆಯನ್ನು ಹೇಳಿಕೊಂಡು ಬಂದ ವ್ಯಕ್ತಿಗೆ ಮಾಲಿಕ್ ದೀನಾರ್‌ರವರು ನೀಡಿರುವ ಉತ್ತರ ಈ ರೀತಿ ಇದೆ. 'ಕ್ರಮ ಪ್ರಕಾರ ಉಪವಾಸವನ್ನು ಆಚರಿಸಿರಿ. ಇದರಿಂದಲೂ ಕಠಿಣತೆ ಕಡಿಮೆಯಾಗದಿದ್ದರೆ ರಾತ್ರಿಯ ವೇಳೆ ಎದ್ದು ದೀರ್ಘವಾಗಿ ನಮಾಝ್ ಮಾಡಿರಿ ಮತ್ತೂ ಕಡಿಮೆಯಾಗದಿದ್ದರೆ ಆಹಾರ ಸೇವನೆಯನ್ನು ಕಡಿತಗೊಳಿಸಿರಿ.'

ಕೆಲವು ಮಹಾತ್ಮರು ಮನಸ್ಸಿನ ಕೆಡುಕುಗಳಿಗೆ 5 ಔಷಧಗಳನ್ನು ಸೂಚಿಸಿದ್ದಾರೆ-

1) ಅರ್ಥವನ್ನರಿತು ಪವಿತ್ರ ಕುರ್‌ಆನ್ ಪಾರಾಯಣ ಮಾಡಿರಿ.

2) ಹೊಟ್ಟೆಯನ್ನು ಖಾಲಿಯಾಗಿಟ್ಟು ಮನಸ್ಸನ್ನು ನಿರಂತರ ಚಿಂತನೆಗಳಿಂದ ತುಂಬಿರಿ.

3) ರಾತ್ರಿಯ ವೇಳೆಯ ನಮಾಝ್

4) ಅರ್ಧರಾತ್ರಿಯ ವೇಳೆ ಭಯಭಕ್ತಿಯಿಂದ ತುಂಬಿದ ಪ್ರಾರ್ಥನೆ

5) ಸಜ್ಜನರ ಉಪವಾಸ.

ಮನಸ್ಸಿನ ದಾರಿ ತಪ್ಪುವಿಕೆಯಿಂದ, ಅದರ ಕೆಡುಕುಗಳಿಂದ ಅಲ್ಲಾಹನ ಅಭಯ ಯಾಚಿಸುವ ಕೆಲವು ಪ್ರತ್ಯೇಕ ಪ್ರಾರ್ಥನೆಗಳನ್ನು ಪ್ರವಾದಿಯವರು(ಸ) ಕಲಿಸಿರುವರು.

اللَّهُمَّ يَا مُصَرِّفَ الْقُلُوبِ اصْرِفْ قُلُوبَنَا إِلَى طَاعَتِكَ. (مسلم)

'ಮನಸ್ಸನ್ನು ತಿರುಗಿಸುವ ಅಲ್ಲಾಹನೇ ನನ್ನ ಮನಸ್ಸನ್ನು ನಿನ್ನ ಅನುಸರಣೆಯೆಡೆಗೆ ತಿರುಗಿಸು.'

يَا مُقَلِّبَ الْقُلُوبِ ثَبِّتْ قُلُوبَنَا عَلَى دِينِكَ. (ترمذي)

'ಹೃದಯಗಳನ್ನು ತಿರುಗಿಸುವ ಪ್ರಭುವೇ ನನ್ನ ಹೃದಯವನ್ನು ನಿನ್ನ ಧರ್ಮದಲ್ಲಿ ದೃಢವಾಗಿ ನಿಲ್ಲಿಸು.'

يَا مُقَلِّبَ الْقُلُوبِ ثَبِّتْ قَلْبِي عَلَى طَاعَتِكَ

'ಹೃದಯಗಳನ್ನು ತಿರುಗಿಸುವ ಪ್ರಭುವೇ ನನ್ನ ಹೃದಯವನ್ನು ನಿನ್ನ ಅನುಸರಣೆಯಲ್ಲಿ ದೃಢವಾಗಿ ನಿಲ್ಲಿಸು.'

ಈ ಪ್ರಾರ್ಥನೆಗಳನ್ನು ಪ್ರವಾದಿಯವರು(ಸ) ನಿರಂತರವಾಗಿ ಪಠಿಸುತ್ತಿದ್ದುದನ್ನು ಗಮನಿಸಿದ ಆಯಿಶಾ(ರ) ಒಂದು ಸಲ ಅವರೊಂದಿಗೆ ಪ್ರಶ್ನಿಸಿದರು. 'ನೀವು ಸದಾ ಈ ರೀತಿ ಪ್ರಾರ್ಥಿಸುತ್ತೀರಲ್ಲವೇ? ನಿಮಗೆ ಆ ಬಗ್ಗೆ ಹೆದರಿಕೆಯೇ?' ಆಗ ಅವರು(ಸ) 'ಆಯಿಶಾ, ನಾನು ಹೇಗೆ ತಾನೆ ನಿರ್ಭೀತಿಯಿಂದಿರಲು ಸಾಧ್ಯ? ಮನುಷ್ಯನ ಹೃದಯವು ಅಲ್ಲಾಹನ ಎರಡು ಬೆರಳುಗಳ ಮಧ್ಯೆ ಇದೆ. ಅವನು ಮನಸ್ಸನ್ನು ತಿರುಗಿಸಬೇಕೆಂದು ಉದ್ದೇಶಿಸಿದರೆ ತಿರುಗಿಸಿ ಬಿಡುತ್ತಾನೆ. ಇದುವೇ ಅದರ ಅವಸ್ಥೆ.' (ಹಾಕಿಮ್)



## 35. ಮರಣವನ್ನು ಬಯಸಬಾರದು

عَنْ أَبِي هُرَيْرَةَ رَضِيَ اللَّهُ عَنْهُ أَنَّ رَسُولَ اللَّهِ ﷺ قَالَ لَا يَتَمَنَّيَ أَحَدُكُمُ الْمَوْتَ إِمَّا مُحْسِنًا فَلَعَلَّهُ يَزْدَادُ خَيْرًا وَإِمَّا مُسِيئًا فَلَعَلَّهُ يَسْتَعْتِبُ. (بخاری)

ಪ್ರವಾದಿ ಮುಹಮ್ಮದ್(ಸ) ಹೇಳಿರುವುದಾಗಿ ಅಬೂ ಹುರೈರಾ(ರ) ವರದಿ ಮಾಡುತ್ತಾರೆ. 'ನಿಮ್ಮ ಪೈಕಿ ಯಾರೂ ಮರಣವನ್ನು ಬಯಸಬಾರದು. ವ್ಯಕ್ತಿ ಒಳ್ಳೆಯವನಾಗಿದ್ದು ದೀರ್ಘಾಯುಷ್ಯದೊರೆತರೆ ಒಳಿತನ್ನು ಹೆಚ್ಚಿಸಲು ಸಾಧ್ಯವಾಗಬಹುದು. ಕೆಟ್ಟ ವ್ಯಕ್ತಿಯಾಗಿದ್ದರೆ ಸ್ವಯಂ ತಿಳಿದುಕೊಂಡು ಸನ್ಮಾರ್ಗದೆಡೆಗೆ ಮರಳಲು ಅವಕಾಶ ಸಿಗಬಹುದು.' (ಬುಖಾರಿ)

وَعَنْ أَنَسٍ رضي الله عنه قَالَ قَالَ رَسُولُ اللَّهِ ﷺ لَا يَتَمَنَّيَنَّ أَحَدُكُمُ الْمَوْتَ بِضُرٍّ نَزَلَ بِهِ فَإِنْ كَانَ لَا بُدَّ مُتَمَنِّيًا لِلْمَوْتِ فَلْيَقُلْ اللَّهُمَّ أَحْيِنِي مَا كَانَتِ الْحَيَاةُ خَيْرًا لِي وَتَوَفَّنِي إِذَا كَانَتِ الْوَفَاةُ خَيْرًا لِي (بخاری)

ಪ್ರವಾದಿಯವರು(ಸ) ಹೇಳಿರುವುದಾಗಿ ಅನಸ್(ರ) ವರದಿ ಮಾಡುತ್ತಾರೆ. 'ಸಂಕಷ್ಟವು ಎದುರಾದರೆ ಅದಕ್ಕಾಗಿ ನೀವು ಮರಣವನ್ನು ಅಪೇಕ್ಷಿಸಬಾರದು. ಮರಣವನ್ನು ಬಯಸದೆ ಬೇರೇನೂ ಮಾಡಲು ಸಾಧ್ಯವಿಲ್ಲ ಎಂಬ ಅವಸ್ಥೆಗೆ ತಲುಪಿದರೂ ಈ ರೀತಿ ಪ್ರಾರ್ಥಿಸಿರಿ. ''ಓ ಅಲ್ಲಾಹ್ ನಾನು ಬದುಕಿರುವುದು ನನ್ನ ಮಟ್ಟಿಗೆ ಉತ್ತಮವಾಗಿರುವ ತನಕ ನನ್ನನ್ನು ಬದುಕಿಸು. ನಾನು ಸಾಯುವುದು ನನ್ನ ಮಟ್ಟಿಗೆ ಉತ್ತಮವಾದಾಗ ನನ್ನನ್ನು ಸಾಯಿಸು.'' (ಬುಖಾರಿ)

عَنْ أَبِي هُرَيْرَةَ رَضِيَ اللَّهُ عَنْهُ قَالَ رَسُولَ اللَّهِ ﷺ أَكْثِرُوا ذِكْرَ هَاذِمِ اللَّذَّاتِ . (ترمذی)

ಪ್ರವಾದಿ(ಸ) ಹೇಳಿರುವುದಾಗಿ ಅಬೂ ಹುರೈರ(ರ) ವರದಿ ಮಾಡುತ್ತಾರೆ: 'ಸುಖಗಳಿಗೆ ಅಂತ್ಯ ಹೇಳುವವನನ್ನು ಅಧಿಕವಾಗಿ ಸ್ಮರಿಸುತ್ತಲಿರಿ.' (ತಿರ್ಮಿದಿ)

ಮನುಷ್ಯ ಸ್ವಂತ ಇಷ್ಟದಿಂದ ಅಥವಾ ಸ್ವ ಪ್ರಯತ್ನದಿಂದ ಈ ಲೋಕದಲ್ಲಿ ಹುಟ್ಟಿ ಬಂದದ್ದಲ್ಲ. ಈ ಜೀವನ ಎಂಬುದು ಸ್ವಂತ ಇಚ್ಛೆ ಮತ್ತು ಪ್ರಯತ್ನಕ್ಕೆ ಅತೀತವಾದ ದೇವನ ಒಂದು ಕೊಡುಗೆಯಾಗಿದೆ. ಈ ಕೊಡುಗೆ ಲಭಿಸಿರುವ ವರೆಗೆ ಅದನ್ನು ಎರಡೂ ಕೈಗಳನ್ನು ಚಾಚಿ

ಸ್ವೀಕರಿಸಬೇಕಾದುದು ಮನುಷ್ಯನ ಕರ್ತವ್ಯವಾಗಿದೆ. ಜೀವನವು ಆರಂಭಗೊಳ್ಳುವುದರಲ್ಲಿ ನಮ್ಮ ಇಚ್ಛೆಗೆ ಮತ್ತು ಪ್ರಯತ್ನಕ್ಕೆ ಯಾವುದೇ ಪಾಲುದಾರಿಕೆ ಇಲ್ಲದಂತೆಯೇ, ಅದನ್ನು ಮುಗಿಸುವುದರಲ್ಲೂ ನಮ್ಮ ಪಾಲಿಲ್ಲ. ಆದರೂ ಕೃತಕ ಮಾರ್ಗದ ಮೂಲಕ ಅನಧಿಕೃತವಾಗಿ ಜೀವನವನ್ನು ಕೊನೆಗೊಳಿಸಲು ಮನುಷ್ಯನಿಗೆ ಸಾಧ್ಯವಿದೆ. ಈ ಸಾಧ್ಯತೆಯನ್ನು ಬಳಸುವುದನ್ನು ಇಸ್ಲಾಮ್ ಬಹಳ ಕಠಿಣ ಶಬ್ದದಲ್ಲಿ ವಿರೋಧಿಸುತ್ತದೆ. ಆತ್ಮಹತ್ಯೆ ಮಹಾ ಪಾಪವಾಗಿದೆ. ಅಲ್ಲಾಹನು ನೀಡಿರುವ ಜೀವನವೆಂಬ ಅನುಗ್ರಹದೊಂದಿಗೆ ತೋರಿಸುವ ಕೆಟ್ಟ ರೀತಿಯ ಅವಹೇಳನ ಮತ್ತು ಕೃತಘ್ನತೆಯಾಗಿದೆ. ಆತ್ಮಹತ್ಯೆ ಮಾಡುವುದಂತಿರಲಿ, ಸ್ವಾಭಾವಿಕವಾಗಿಯೂ ಮನುಷ್ಯ ಮರಣವನ್ನು ಬಯಸಬಾರದು. ಜೀವನವೆಂಬ ದೇವನ ಅನುಗ್ರಹವು ಇನ್ನಷ್ಟು ಮತ್ತಷ್ಟು ಸಿಗಲಿ ಎಂದು ಅವನು ಸದಾ ಆಶಿಸಬೇಕು.

ಮರಣವು ಯಾವುದೇ ಸಮಸ್ಯೆಗೆ ಪರಿಹಾರವಲ್ಲ, ಜೀವಂತವಿರುವಾಗ ಮಾತ್ರ ಮನುಷ್ಯನಿಗೆ ಅವನ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಿದೆ. ಮರಣದೊಂದಿಗೆ ಮನುಷ್ಯನು ಸಂಪೂರ್ಣ ನಾಶ ಹೊಂದುವನು. ಮರಣಾನಂತರ ಜೀವನವಿಲ್ಲ ಎಂಬಿತ್ಯಾದಿಯಾಗಿ ನಂಬುವವನು, ಇಂತಹ ಮೂಢ ನಂಬಿಕೆಯುಳ್ಳವನು ಸಮಸ್ಯೆಗಳು ಎದುರಾದರೆ ಮರಣವನ್ನು ಬಯಸುತ್ತಾನೆ. ಆದರೆ ವಾಸ್ತವಿಕತೆ ಇದಕ್ಕೆ ತದ್ವಿರುದ್ಧವಾಗಿದೆ. ತನ್ನನ್ನು ಕಾಡುತ್ತಿರುವ ಸಮಸ್ಯೆಗಳು ಅದು ಲೌಕಿಕವಾಗಿರಲಿ, ಆಧ್ಯಾತ್ಮಿಕವಾಗಿಲಿ, ಧಾರ್ಮಿಕವಾಗಿರಲಿ, ಸಂಪತ್ತಿನ ವಿಷಯವಾಗಿರಲಿ. ಇದನ್ನು ಪರಿಹರಿಸಲು ಸಿಕ್ಕಿರುವ ಈ ಜೀವನ ಎಂಬ ಅವಕಾಶವನ್ನು ಕೈತಪ್ಪಿ ಹೋಗುವಂತೆ ಮಾಡುವ ಮೂರ್ಖತನವನ್ನಷ್ಟೇ ಸಮಸ್ಯೆಗಳಿಂದ ಪಾರಾಗಲು ಮರಣವನ್ನು ಅಪೇಕ್ಷಿಸುವವರು ಮಾಡುತ್ತಾರೆ.

ಮನುಷ್ಯನು ಒಳ್ಳೆಯವನಾಗಿರಲಿ, ಕೆಟ್ಟವನಾಗಿರಲಿ, ಸೌಭಾಗ್ಯವಂತನಿರಲಿ, ದೌರ್ಭಾಗ್ಯಶಾಲಿಯಾಗಿರಲಿ, ದೇವನು ಅವನಿಗೆ ನೀಡಿರುವ ಜೀವನವನ್ನು ಸಂಪೂರ್ಣವಾಗಿ ಉಪಯೋಗಿಸುವುದು ಅವನಿಗೆ ಉತ್ತಮವಾಗಿದೆ. ಅದು ಒಳ್ಳೆಯ ವ್ಯಕ್ತಿಗೆ ಮತ್ತಷ್ಟು ಒಳ್ಳೆಯವನಾಗಲು ಸಿಕ್ಕಿರುವ ಅವಕಾಶವಾಗಿದೆ. ಸೌಭಾಗ್ಯವಂತನಿಗೆ ಮತ್ತಷ್ಟು ಒಳಿತುಗಳನ್ನು ಮಾಡಲಿಕ್ಕಿರುವ ಅವಕಾಶ. ದುಷ್ಟನಿಗೆ ತನ್ನ ದುಷ್ಕೃತ್ಯಗಳನ್ನು ನಿಲ್ಲಿಸಲು ದೊರೆತ ಅವಕಾಶ. ಒಳಿತನ್ನು ಸೌಭಾಗ್ಯವನ್ನು ಬಯಸಲು ಮತ್ತು ಅದನ್ನು ಮಾಡಲಿಕ್ಕಿರುವ ಸಂದರ್ಭ.

ಆದರೆ ಜೀವನದಲ್ಲಿ ಅನುಭವಿಸಲು ಸಾಧ್ಯವಾಗದ ನಷ್ಟಗಳು, ಹೊರಲಾಗದ ಹೊರೆಗಳು, ಅಸಹನೀಯವಾದ ಯಾತನೆಗಳು ಅನುಭವಿಸಬೇಕಾದ ಅವಸ್ಥೆ ಬಂದಲ್ಲಿ, ಅದರಿಂದ ಮುಕ್ತಿಹೊಂದಲು ಯಾವುದೇ ಮಾರ್ಗವು ಕಾಣಿಸದೆ ಹೋದಾಗ ಮನುಷ್ಯನಿಗೆ ಜೀವನದೊಂದಿಗೆ ಖಂಡಿತ ಬೇಸರ ಉಂಟಾಗುತ್ತದೆ. ಅಂತಹ ಸಂದರ್ಭಗಳ ಬಗ್ಗೆ 'ಸಂಕಷ್ಟದ ಕಾರಣದಿಂದ ಮರಣವನ್ನು ಬಯಸದೆ ಇರುವ ಅವಸ್ಥೆಯಲ್ಲಿ ಎಂದು ಪ್ರವಾದಿ(ಸ) ಹೇಳಿರುವರು. ಅಂತಹ ಸಂದರ್ಭಗಳಲ್ಲೂ ವ್ಯಕ್ತಿ ಆತ್ಮಹತ್ಯೆ ಮಾಡುವುದು ಅಥವಾ ಮರಣ

ಹೊಂದಲು ಪ್ರಾರ್ಥಿಸಬಾರದು ಎಂದು ಪ್ರವಾದಿ(ಸ) ಕಲಿಸಿರುವರು. ನನ್ನ ಪಾಲಿಗೆ ಮರಣ ಉತ್ತಮವೆಂದಾದರೆ ನನ್ನನ್ನು ಸಾಯಿಸಬೇಕು. ಜೀವನ ಉತ್ತಮವೆಂದಾದರೆ ಬದುಕಿಸಬೇಕು ಎಂದು ಮಾತ್ರ ಪ್ರಾರ್ಥಿಸಬಹುದು. ಈ ಪ್ರಾರ್ಥನೆಯಲ್ಲಿ ಅಲ್ಲಾಹನಿಗೆ ಮಾತ್ರ ಅಧಿಕಾರವಿರುವ ಜೀವನ ಮತ್ತು ಮರಣದ ವಿಷಯದಲ್ಲಿ ಮನುಷ್ಯ ಮಧ್ಯೆ ಪ್ರವೇಶಿಸಲು ಶ್ರಮಿಸುವುದಿಲ್ಲ, ಅಲ್ಲಾಹನ ಸರ್ವಾಧಿಕಾರ ಮತ್ತು ಸರ್ವಜ್ಞತೆಗೆ ವಿಧೇಯನಾಗಿ, ತನ್ನ ಯಾತನೆ ಮತ್ತು ಸಂಕಷ್ಟಗಳನ್ನು ಅವನ ಮುಂದೆ ಸಮರ್ಪಿಸುವ ಕೆಲಸವನ್ನು ಮಾಡುತ್ತಾನೆ. ಈ ರೀತಿಯಲ್ಲಿ ಅಲ್ಲಾಹನ ಜ್ಞಾನ ಮತ್ತು ಅಧಿಕಾರದ ಪರಿಪೂರ್ಣತೆಯನ್ನು ಅಂಗೀಕರಿಸಿ ಅವನ ಮುಂದೆ ಸ್ವಯಂ ಸಮರ್ಪಿಸಿಕೊಳ್ಳುವವನಿಗೆ ಅಲ್ಲಾಹನು ದಯೆ ಮತ್ತು ಕರುಣೆಯನ್ನು ವರ್ಷಿಸುವನು ಎಂಬುದರಲ್ಲಿ ಸಂಶಯವಿಲ್ಲ, ಅಂತಹವರು ಇಂದಲ್ಲದಿದ್ದರೆ ನಾಳೆ ಸಂಕಷ್ಟದಿಂದ ಪಾರಾಗುವರು.

ಮರಣವನ್ನು ಬಯಸಬಾರದು ಎಂಬುದರ ಅರ್ಥ ಮರಣವನ್ನು ನೆನಪಿಸಬಾರದು ಎಂದಲ್ಲ, ಮರಣವನ್ನು ಬಯಸಬಾರದು ಮತ್ತು ಭಯಪಡಬಾರದು ಎಂಬುದು ಇದರ ಅರ್ಥ. ಮರಣವು ಒಂದು ವಾಸ್ತವಿಕತೆಯಾಗಿದೆ. ಈ ವಾಸ್ತವಿಕತೆಯ ಬಗ್ಗೆ ಮನುಷ್ಯ ಸದಾ ಪ್ರಜ್ಞಾವಂತನಾಗಿರಬೇಕು. ಈ ಜೀವನದ ಸುಖ ಸಂತೋಷ, ಸಂಪತ್ತು, ಸಂತಾನ ಇತ್ಯಾದಿ ಎಲ್ಲ ಸೌಂದರ್ಯಗಳು, ರಸನಿಮಿಷಗಳು ಮರಣದೊಂದಿಗೆ ಕೊನೆಗೊಳ್ಳುತ್ತದೆ. ಮರಣ ಎಂಬುದು ಲೌಕಿಕ ಸುಖದ ಕೊನೆಯಾಗಿದೆ. ಆದರೆ ಜೀವನವು ಮತ್ತೆಯೂ ಅನಂತವಾಗಿ ಉಳಿಯುತ್ತದೆ. ಪರಲೋಕದಲ್ಲಿ ಪಾರತ್ರಿಕವಾದ ಸುಖ ದುಃಖಗಳಿವೆ. ಪರಲೋಕದಲ್ಲಿ ಸುಖ ಸಮೃದ್ಧಿಯನ್ನು ಹೊಂದಲು ಮತ್ತು ದುಃಖ ಯಾತನೆಗಳಿಂದ ಪಾರಾಗಲು ಇರುವ ಅವಕಾಶವೇ ಇಹಲೋಕ ಜೀವನವಾಗಿದೆ. ಈ ಜೀವನ ಕೊನೆಗೊಳ್ಳುವುದೆಂದರೆ ಪರಲೋಕದಲ್ಲಿ ಸುಖವನ್ನು ಹೊಂದಲು ದುಃಖದಿಂದ ಪಾರಾಗಲು ಪ್ರಯತ್ನಿಸುವ ಅವಕಾಶವು ಕೊನೆಗೊಂಡಂತೆ. ಮರಣವು ಇಹಲೋಕದ ಸುಖಗಳಿಗೆ ಮಾತ್ರ ಅಂತ್ಯವಲ್ಲ, ಅನೇಕ ವೇಳೆ ಅದು ಪರಲೋಕದ ಸುಖದ ಅಂತ್ಯವೂ ಆಗಿ ಬಿಡುತ್ತದೆ. ಈ ವಾಸ್ತವಿಕತೆಯನ್ನು ಮರೆತು ಬಿಡುವವರ ಮಟ್ಟಿಗೆ ಅದು ಹಾಗೆಯೇ ಆಗಿ ಬಿಡುವುದು ಅನಿವಾರ್ಯವೆನಿಸುತ್ತದೆ. ಈ ಲೋಕದಲ್ಲಿ ಸಮಯವನ್ನು ಆಟ ವಿನೋದಗಳಲ್ಲಿ ಕಳೆಯುವಾಗ, ಈ ನಿಮಿಷ ಅಥವಾ ಮುಂದಿನ ನಿಮಿಷ ಇಲ್ಲದಿದ್ದರೆ ನಾಳೆಯೋ ನಾಡಿದ್ದೋ ಇವೆಲ್ಲವೂ ಕೊನೆಗೊಳ್ಳುವುದು. ಬಳಿಕ ಸುದೀರ್ಘವಾದ ಇನ್ನೊಂದು ಜೀವನವನ್ನು ಎದುರಿಸಬೇಕಾಗಿದೆ ಎಂಬುದು ನೆನಪಿನಲ್ಲಿರಬೇಕು. ಹಾಗಿದ್ದರೆ ಮಾತ್ರ ಆ ಜೀವನಕ್ಕೆ ಅಗತ್ಯವಾದ ಸಾಮಗ್ರಿಗಳನ್ನು ಸಂಗ್ರಹಿಸಲು ಸಾಧ್ಯವಾಗಬಹುದು. ಇಲ್ಲದಿದ್ದರೆ ಕ್ಷುಲ್ಲಕವಾದ ಆಟ ವಿನೋದಗಳೊಂದಿಗೆ ಈ ಜೀವನವು ಕೊನೆಗೊಂಡು ನಾಳೆ ಶಾಶ್ವತವಾದ ಯಾತನಾಮಯ ಜೀವನವನ್ನು ಸ್ವೀಕರಿಸಬೇಕಾಗಿ ಬರಬಹುದು.



## 36. ಇಸ್ಲಾಮ್ ಮತ್ತು ಅಜ್ಞಾನ

عَنْ أَبِي ذَرٍّ قَالَ سَابَبْتُ رَجُلًا فَعَيَّرْتُهُ بِأُمِّهِ فَقَالَ لِي النَّبِيُّ ﷺ
يَا أَبَا ذَرٍّ أَعَيَّرْتَهُ بِأُمِّهِ إِنَّكَ امْرُؤٌ فِيكَ جَاهِلِيَّةٌ. إِخْوَانُكُمْ
خَوَلُكُمْ جَعَلَهُمُ اللَّهُ تَحْتَ أَيْدِيكُمْ فَمَنْ كَانَ أَخُوهُ تَحْتَ يَدِهِ
فَلْيُطْعِمْهُ مِمَّا يَأْكُلُ وَلْيُلْبِسْهُ مِمَّا يَلْبَسُ وَلَا تُكَلِّفُوهُمْ مَا يَغْلِبُهُمْ
فَإِنْ كَلَّفْتُمُوهُمْ فَأَعِينُوهُمْ. (بخاری)

ಅಬೂದರ್(ರ)ರ ಹೇಳುತ್ತಾರೆ: ''ನಾನು ಒಬ್ಬರೊಂದಿಗೆ ಜಗಳಾಡುತ್ತಿರುವಾಗ ಅವರ ತಾಯಿಯನ್ನು ಅವಹೇಳನ ಮಾಡಿದೆ. ಅದನ್ನು ತಿಳಿದ ಪ್ರವಾದಿ(ಸ) ನನ್ನೊಂದಿಗೆ ಈ ರೀತಿ ಹೇಳಿದರು: 'ಹೇ ಅಬೂದರ್! ನೀನು ಅವನ ತಾಯಿಯನ್ನು ಅವಹೇಳನ ಮಾಡಿದೆಯಾ? ಖಂಡಿತವಾಗಿಯೂ ನಿಮ್ಮೊಳಗೆ ಅಜ್ಞಾನವು ಇನ್ನೂ ಮನೆ ಮಾಡಿಕೊಂಡಿದೆ. ನಿಮ್ಮ ಸೇವಕರು ನಿಮ್ಮ ಸಹೋದರರಾಗಿದ್ದಾರೆ. ಅಲ್ಲಾಹನು ಅವರನ್ನು ನಿಮ್ಮ ಅಧೀನಗೊಳಿಸಿರುವನು. ಯಾರದಾದರೂ ಕೈ ಕೆಳಗೆ ಅವನ ಸಹೋದರನಿದ್ದರೆ ತಾನು ತಿನ್ನುವುದನ್ನೇ ಅವನಿಗೂ ಉಣಿಸಬೇಕು. ತಾನು ಉಡುವುದನ್ನೇ ಅವನಿಗೂ ಉಡಿಸಬೇಕು. ಅವರಿಂದ ಸಾಧ್ಯವಾಗದ ಕೆಲಸವನ್ನು ಅವರ ಮೇಲೆ ಹೊರಿಸಬಾರದು. ಹಾಗೆ ಮಾಡುವುದಾದರೆ ನೀವೂ ಅವರಿಗೆ ಕೆಲಸದಲ್ಲಿ ಸಹಾಯ ಮಾಡಬೇಕು.'' (ಬುಖಾರಿ)

ಪ್ರಾಮುಖ್ಯವಾದ ಎರಡು ವಿಷಯಗಳ ಮೇಲೆ ಇಲ್ಲಿ ಬೆಳಕು ಚೆಲ್ಲಲಾಗಿದೆ. ಒಂದನೆಯದಾಗಿ, ವ್ಯಕ್ತಿಯ ಅಭಿಮಾನಕ್ಕೆ ಇಸ್ಲಾಮ್ ನೀಡುವ ಗೌರವ. ಗಂಡಾದರೂ ಹೆಣ್ಣಾದರೂ ದೊಡ್ಡವನಾದರೂ ಸಣ್ಣವನಾದರೂ ಇತರ ಮನುಷ್ಯರನ್ನು ಅವಹೇಳನ ಮಾಡಲು ಅಪಮಾನಿಸಲು ಯಾರಿಗೂ ಅವಕಾಶವಿಲ್ಲ. ಇಸ್ಲಾಮೀ ಶರೀಅತ್‌ನ ಪ್ರಕಾರ ಮನುಷ್ಯನ ಮಾನಮರ್ಯಾದೆ ಎಂಬುದು ಅವನ ಜೀವನ, ಸಂಪತ್ತಿನಂತೆಯೇ ಸಂರಕ್ಷಿಸಲ್ಪಡಬೇಕಾದ ವಿಷಯವಾಗಿದೆ.

ಹದೀಸ್‌ನ ವಿದ್ವಾಂಸರು ಈ ಹದೀಸಿನ ಹಿನ್ನಲೆಯನ್ನು ಈ ರೀತಿ ವಿವರಿಸಿದ್ದಾರೆ. ಅಬೂದರ್(ರ) ಆರಂಭಕಾಲದ ಸತ್ಯವಿಶ್ವಾಸಿಗಳ ಪೈಕಿ ಬಹಳ ಸಾತ್ವಿಕರೂ ಪ್ರಮುಖರೂ ಆಗಿದ್ದರು. ತನ್ನ ಸ್ವಂತ ಊರು ಮತ್ತು ಮನೆಮಠಗಳನ್ನು ತೊರೆದು ಪ್ರವಾದಿ ಮುಹಮ್ಮದರ(ಸ) ಜೊತೆಗೆ ಬಂದಿದ್ದ ಆ ವ್ಯಕ್ತಿ ಸ್ವಲ್ಪ ಮುಂಗೋಪಿಯಾಗಿದ್ದರು. ಅಬೂದರ್(ರ) ಜಗಳವಾಡಿದ್ದು ಪ್ರಸಿದ್ಧ ಸಹಾಬಿ ಹ.ಬಿಲಾಲ್(ರ)ರೊಂದಿಗಾಗಿತ್ತು. ಆಫ್ರಿಕಾದ ಓರ್ವ ನೀಗ್ರೋ ಗುಲಾಮರಾಗಿದ್ದ ಬಿಲಾಲ್(ರ) ಇಸ್ಲಾಮ್ ಸ್ವೀಕರಿಸಿದ ಕಾರಣಕ್ಕೆ ಅನುಭವಿಸಿದ, ಎದುರಿಸಿದ ಸಂಕಷ್ಟ ಯಾತನೆಗಳಿಗೆ ಲೆಕ್ಕವಿಲ್ಲ. ಬಳಿಕ ಅಬೂಬಕರ್(ರ) ಬನೂ ಜುನುಹ್ ಗೋತ್ರವನಾದ ಅದರ ಒಡೆಯನಿಗೆ ಹಣವನ್ನು ನೀಡಿ ಬಿಲಾಲ್‌ರನ್ನು ಗುಲಾಮಗಿರಿಯಿಂದ ಮುಕ್ತಗೊಳಿಸಿದ್ದರು. ಗುಲಾಮಗಿರಿಯಿಂದ ಮುಕ್ತಿಹೊಂದಿದ ಬಳಿಕ ಅವರು ಸ್ವತಂತ್ರರಾಗಿ ಕೆಲಸ ಮಾಡಿಕೊಂಡಿದ್ದರು. ಈ ಬಿಲಾಲ್‌ರೊಂದಿಗೆ ಅಬೂದರ್, ಜಗಳಾಡಿದ್ದರು. ಅವರು ತಮ್ಮ ವರದಿಯಲ್ಲಿ ಬಿಲಾಲ್(ರ)ರ ಹೆಸರನ್ನು ಪ್ರಸ್ತಾಪಿಸದೆ ಕೈ ಬಿಟ್ಟಿರುವುದು ಅದು ಒಂದು ನಿಂದನೆಯಾಗಿ ಬಿಟ್ಟರೆ ಎಂಬ ಹೆದರಿಕೆಯಿಂದಾಗಿತ್ತು. ಕೇವಲ ಅಬೂದರ್ ಮಾತ್ರ ಜಗಳಾಡಿದ್ದಲ್ಲ, ಎರಡೂ ಕಡೆಗಳಿಂದ ವಾಗ್ಯುದ್ಧ ನಡೆದಿತ್ತೆಂದು ಕೆಲವು ವರದಿಗಳಲ್ಲಿದೆ. ಈ ಮಧ್ಯೆ ಅಬೂದರ್ ಎದುರಾಳಿಯ ತಾಯಿಯನ್ನು ಅವಹೇಳನ ಮಾಡಿದರು. ನಾನು ಅವರನ್ನು 'ಏ ಇಬ್ನು ಸೌದಾ' ಎಂದು ಕರೆದೆ ಎಂದು ಅಬೂದರ್(ರ) ಇನ್ನೊಂದು ಕಡೆ ಹೇಳಿಕೊಂಡಿದ್ದಾರೆ. 'ಬಹಳ ಕಪ್ಪಗಿರುವವಳ ಮಗನೇ' ಎಂಬುದು ಇದರ ಸಾಮಾನ್ಯ ಅರ್ಥವಾಗಿದೆ. ಒಂದು ಜಗಳಾಡುವಿಕೆ ಎಂಬ ನೆಲೆಯಲ್ಲಿ ಬಹಳ ಕಠೋರವಾದ ಶೈಲಿಯಲ್ಲಿ ನಮ್ಮ ಭಾಷೆಯಲ್ಲಿ ಇದನ್ನು ಹೇಳುವಾಗ 'ಕರ್ರಗಿನವಳ ಮಗನೇ' ಎಂದು ಕರೆದಿದ್ದರು ಎಂದು ಹೇಳಬಹುದು. ನಮ್ಮ ಸಮುದಾಯದಲ್ಲಿ ಜನರು ವಾಗ್ವಾದ ನಡೆಸುವಾಗ ಬಳಸುವ ಅಸಭ್ಯ ಮಾತುಗಳೊಂದಿಗೆ ತುಲನೆ ಮಾಡಿದಾಗ ಇದೆಷ್ಟು ಕ್ಷುಲ್ಲಕ ವಿಷಯವೆಂದು ಆಲೋಚಿಸಿ ನೋಡಿರಿ.

ಮೊದಲು ಗುಲಾಮರಾಗಿದ್ದ ಓರ್ವ ಸೇವಕನೊಂದಿಗೆ ಅಬೂದರ್ ಬಳಸಿದ ಮಾತು ಪ್ರವಾದಿಯವರ(ಸ) ಮುಂದೆ ಒಂದು ವ್ಯಾಜ್ಯವಾಗಿ ತಲುಪಿತು. ಆ ಸಂದರ್ಭವನ್ನು ಪ್ರವಾದಿ(ಸ) ನೇರವಾಗಿ ನೋಡಿರಲಿಲ್ಲ, ಆಲಿಸಿರಲಿಲ್ಲ. ಬಿಲಾಲ್(ರ) ಪ್ರವಾದಿಯವರ(ಸ) ಬಳಿ ಬಂದು ಈ ವಿಷಯದಲ್ಲಿ ಪ್ರವಾದಿಯವರೊಂದಿಗೆ ದೂರು ನೀಡಿದರೆಂದು ಕೆಲವು ವರದಿಗಳಲ್ಲಿ ಬಂದಿರುತ್ತದೆ. ಓರ್ವ ಸೇವಕನೊಂದಿಗೆ ಅವನ ಮಾಲಕ ಏನೋ ಹೇಳಿಬಿಟ್ಟ ವಿಷಯದಲ್ಲಿ ತನಗೇನು ಕೆಲಸ ಎಂದು ಭಾವಿಸಿ ಪ್ರವಾದಿಯವರು(ಸ) ಈ ದೂರನ್ನು ಕಡೆಗಣಿಸಲಿಲ್ಲ ಅಥವಾ 'ಬಿಲಾಲ್ ನಿಮ್ಮ ತಾಯಿಯವರು ಕರ್ರಗಿನ ಮಹಿಳೆ ಹೌದಲ್ಲವೇ? ಅದನ್ನು ಅಬೂದರ್ ನೆನಪಿದ್ದು ಮಾತ್ರವಲ್ಲವೇ? ಅದಕ್ಕಿಷ್ಟು ಕೋಪಗೊಳ್ಳಬೇಕೆ?' ಎಂದು ಹೇಳಿ ಬೆನ್ನು ನೇವರಿಸಿ ಸಮಾಧಾನ ಪಡಿಸಿ ಕಳುಹಿಸುವ ಕೆಲಸವನ್ನು ಪ್ರವಾದಿ(ಸ) ಮಾಡಲಿಲ್ಲ. ಅವರದನ್ನು ಒಂದು ಗಂಭೀರ ದೂರೆಂಬ ನೆಲೆಯಲ್ಲಿ ಸ್ವೀಕರಿಸಿದರು. ಅಬೂದರ್(ರ)ರನ್ನು ಕರೆದು ವಿಚಾರಣೆ

ನಡೆಸಿದರು. ಅವರು ತಪ್ಪನ್ನು ಒಪ್ಪಿಕೊಂಡಾಗ ಪ್ರವಾದಿ(ಸ) ಈ ರೀತಿ ಹೇಳಿದರು- 'ತಾವು ಒಳಗಿಂದೊಳಗೆ ಈಗಲೂ ಅಜ್ಞಾನವನ್ನು ಇಟ್ಟು ಪೋಷಿಸುತ್ತಿರುವ ಓರ್ವ ವ್ಯಕ್ತಿಯಾಗಿರುವಿರಿ.' ಸಮುದಾಯದಲ್ಲಿ ವ್ಯಕ್ತಿ ಯಾವುದೇ ಪದವಿಯನ್ನು ಹೊಂದಿರಲಿ ಅಥವಾ. ಸಾಮಾನ್ಯ ವ್ಯಕ್ತಿಯಾಗಿರಲಿ. ಮಾತಿನಿಂದ ಅಥವಾ ಪ್ರವೃತ್ತಿಯಿಂದ ಅವನನ್ನು ಅಪಮಾನಿಸುವುದು ಇಸ್ಲಾಮಿನ ದೃಷ್ಟಿಕೋನದಲ್ಲಿ ಎಷ್ಟು ದೊಡ್ಡ ಅಪರಾಧವೆಂದರೆ ಅಂತಹದ್ದೇನಾದರೂ ಸಂಭವಿಸಿ ಬಿಟ್ಟರೆ ಹೊಣೆಗಾರಿಕೆಯನ್ನು ಹೊಂದಿದ ವ್ಯಕ್ತಿಗಳು ಸ್ವೀಕರಿಸಬೇಕಾದ ತೀರ್ಮಾನಗಳೇನು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆದರೆ ಮಾತಿನಿಂದ ಇತರರನ್ನು ಅಪಮಾನಿಸುವುದನ್ನು ಬಹಳ ಕ್ಷುಲ್ಲಕ ವಿಷಯವೆಂದು ಹೆಚ್ಚಿನವರು ಭಾವಿಸುತ್ತಾರೆ. ಸಮಾಜದಲ್ಲಿ ಪರಸ್ಪರ ಸಂಬಂಧಗಳು ಶಿಥಿಲಗೊಳ್ಳುವಲ್ಲಿ, ಸಂಸ್ಕಾರ ರಾಹಿತ್ಯ ಬೆಳೆದು ಬರುವಲ್ಲಿ ಈ ದುರಭ್ಯಾಸದ ಕೊಡುಗೆ ಸಣ್ಣದೇನಲ್ಲ.

ವ್ಯಕ್ತಿಯ ಅಭಿಮಾನಕ್ಕೆ ಕುಂದು ಉಂಟು ಮಾಡುವುದು ಅಜ್ಞಾನದ ಲಕ್ಷಣವೆಂಬುದು ಈ ಹದೀಸ್‌ನಿಂದ ಮನವರಿಕೆಯಾಗುವ ಎರಡನೆಯ ಸುಪ್ರಧಾನ ಸಂಗತಿಯಾಗಿದೆ. ಇಸ್ಲಾಮಿನ ವಿರುದ್ಧಾರ್ಥಕ ಪದವಾಗಿ ಅಜ್ಞಾನವನ್ನು ಬಳಸಲಾಗುತ್ತದೆ. ಈ ಅರ್ಥದಲ್ಲಿ ಕುಫ್ರ್ ಮತ್ತು ಶಿರ್ಕ್‌ನ ಪರ್ಯಾಯ ಪದವೂ ಇದಾಗಿದೆ. ಇಸ್ಲಾಮ್ ಎಂದರೆ ಕೇವಲ ಕೆಲವು ವಿಶ್ವಾಸ ಮತ್ತು ಆಚರಣೆಗಳಲ್ಲ, ಸಂಸ್ಕಾರ ಮತ್ತು ಧರ್ಮವೆಲ್ಲವೂ ಅದರ ಅವಿಭಾಜ್ಯ ಅಂಗಗಳಾಗಿವೆ. ಜನರೊಂದಿಗೆ ಗೌರವಾದರದೊಂದಿಗೆ, ಮರ್ಯಾದೆಯಿಂದ ವ್ಯವಹರಿಸಬೇಕು ಎಂಬುದು ಇಸ್ಲಾಮಿನ ಉದ್ದೇಶವಾಗಿದೆ. ಕೆಲವರು ಬೇರೆ ಕೆಲವರಿಗಿಂತ ಉನ್ನತರೂ ಹಾಗೂ ಅವಕಾಶ ಮತ್ತು ಅಧಿಕಾರ ಹೆಚ್ಚುಳ್ಳವರೆಂಬ ಮನೋಭಾವನೆಯೇ ಅಜ್ಞಾನದಿಂದಾಗಿದೆ. ಮಹಾನರಾದ ಅಬೂದರ್ರ್ ಗಿಫಾರಿ(ರ)ಯವರಂತಹ ತ್ಯಾಗಮಯಿ ಮತ್ತು ಅಪಾರ ದೇವಭಯವುಳ್ಳ ವ್ಯಕ್ತಿಯೂ ಜನರನ್ನು ಗೌರವಿಸುವುದಿಲ್ಲ ಗೌರವಪೂರ್ವಕ ವ್ಯವಹರಿಸುವುದಿಲ್ಲ ಎಂದಾದರೆ ಅವರೂ 'ಅಜ್ಞಾನ'ದಿಂದ ಮುಕ್ತರಾಗಿಲ್ಲ.

ಪ್ರವಾದಿಯವರ(ಸ) ಅನುಯಾಯಿಗಳಿಗೆ ಸಂಬಂಧಿಸಿ ಅಬೂದರ್‌ರಂತಹ ಮಹಾನರಾದ ಸಹಾಬಿಗಳಿಗೆ ಸಂಬಂಧ ಪಟ್ಟಂತೆ ವಿಶೇಷವಾಗಿ ಜಾಹಿಲಿಯ್ಯತ್ (ಅಜ್ಞಾನ) ಎಂಬ ಆಕ್ಷೇಪವು ಬಹಳ ಕಠಿಣವಾದುದಾಗಿದೆ. ಏಕೆಂದರೆ ಜೀವನದಿಂದ ಅಜ್ಞಾನವನ್ನು ಕಿತ್ತಸೆದವರು ಎಂಬ ನೆಲೆಯಲ್ಲಿ ಅವರು ಮುಸ್ಲಿಮರೆಂದು ಅಭಿಮಾನ ಪಡುತ್ತಿದ್ದರು. ಅಜ್ಞಾನವನ್ನು ವಿರೋಧಿಸಿದ ಕಾರಣಕ್ಕಾಗಿಯೇ ಅವರು ಚರಿತ್ರೆಯಲ್ಲಿ ಹೋಲಿಕೆಯಿಲ್ಲದ ಹಸಿವು ಮತ್ತು ಪೀಡನೆಗಳನ್ನು ಅನುಭವಿಸಬೇಕಾಯಿತು. ಮನೆ-ಮಾರು, ದೇಶವನ್ನು ತೊರೆದು ಪಲಾಯನ ಮಾಡಬೇಕಾಗಿ ಬಂತು. ಇಂತಹ ವ್ಯಕ್ತಿಗಳ ಬಗ್ಗೆ ಅಜ್ಞಾನದ ಸ್ವಭಾವವನ್ನು ಬೆಳೆಸಿದವನು ಎಂಬುದಕ್ಕಿಂತ ಭಯಂಕರವಾದ ಆರೋಪ ಬೇರಾವುದಿದೆ? ಅಬೂದರ್ರ್‌ರ ಮೇಲೆ ಈ ರೀತಿಯ ಆರೋಪವನ್ನು ಹೊರಿಸಿದವರು ಸಾಮಾನ್ಯ ವ್ಯಕ್ತಿಯಲ್ಲ, ಸನ್ಮಾರ್ಗದರ್ಶಕ,

ಸತ್ಯದ ಪ್ರತೀಕ, ಅಲ್ಲಾಹನ ಸಂದೇಶವಾಹಕರಾದ ಪ್ರವಾದಿ ಮುಹಮ್ಮದ್(ಸ)ರಾಗಿದ್ದರು. ನಿಮ್ಮ ಆರಾಧನೆಗಳಾಗಲೀ, ಸರಳ ಜೀವನ ಶೈಲಿಯಾಗಲೀ, ವಲಸೆಯಾಗಲೀ ಇತರ ತ್ಯಾಗಗಳಾಗಲೀ ನಿಮ್ಮ ಜೀವನವನ್ನು ಅಜ್ಞಾನದಿಂದ ಸಂಪೂರ್ಣವಾಗಿ ಶುದ್ಧೀಕರಣಗೊಳಿಸಲಿಲ್ಲ ಅಥವಾ ನೀವಿನ್ನೂ ಸಂಪೂರ್ಣ ಮುಸ್ಲಿಮರಾಗಿಲ್ಲ ಎಂಬುದು ಈ ಹೇಳಿಕೆಯ ಉದ್ದೇಶವಾಗಿದೆ. ಸ್ವಂತ ಸಹೋದರನನ್ನು ಅವನು ಗುಲಾಮನಾಗಿದ್ದರೂ, ಮಾಲಿಕನಾಗಿದ್ದರೂ, ಕೆಲಸಗಾರನಾಗಿದ್ದರೂ, ಯಜಮಾನನಾಗಿದ್ದರೂ ತನ್ನಂತೆಯೇ ನೋಡಿಕೊಳ್ಳಬೇಕು. ತನಗಿಂತ ಕೀಳೆಂದೋ ನೀಚನೆಂದೋ ಭಾವಿಸುವುದು ಅಜ್ಞಾನದ ಅಂಶಗಳು, ಭಾವನೆಗಳು ಇನ್ನೂ ನಮ್ಮೊಳಗೆ ಜೀವಂತವಿರುವ ಕಾರಣದಿಂದಾಗಿದೆ.

ಸ್ವಲ್ಪ ಅಧಿಕಾರ ಸಿಕ್ಕಿಬಿಟ್ಟರೆ ಅಥವಾ ಸಂಪತ್ತು ಸಿಕ್ಕಿದರೆ, ಶಾರೀರಿಕವಾದ, ಜ್ಞಾನಕ್ಕೆ ಸಂಬಂಧಪಟ್ಟ ಯಾವುದಾದರೂ ಯೋಗ್ಯತೆ ಗಳಿಸಿಕೊಂಡರೆ ಇತರರನ್ನು ತುಚ್ಛವಾಗಿ ನೋಡುವುದು, ಅವಹೇಳನ ಮಾಡುವುದು, ಅವರ ಮೇಲೆ ದಬ್ಬಾಳಿಕೆ ನಡೆಸುವುದು ಮುಂತಾದವುಗಳನ್ನು ಮಾಡುವ ಸಮಕಾಲೀನ ಮನುಷ್ಯನ ಮನಸ್ಸಿನಲ್ಲಿ ಅಡಗಿರುವ ಅಜ್ಞಾನವು ಯಾವ ಮಟ್ಟದ್ದು ಎಂಬುದನ್ನು ಆಲೋಚಿಸಿ ನೋಡಿರಿ. ಈ ಅಜ್ಞಾನವೇ ವರ್ಣಭೇಧ ಮತ್ತು ವರ್ಗತಾರತಮ್ಯದ ನಿಜವಾದ ಮೂಲವಾಗಿದೆ.

ಮಹಾನರಾಗಿದ್ದ ಅಬೂದರ್ರ್ ಗಿಫಾರಿ(ರ)ಯವರು ಪ್ರವಾದಿಯವರು(ಸ) ಅವರ ಮೇಲೆ ಹೊರಿಸಿದ ಆರೋಪವನ್ನು ಗೌರವದೊಂದಿಗೆ ಸ್ವೀಕರಿಸಿದರು. ಪ್ರವಾದಿ(ಸ) ಹೇಳಿರುವುದರ ಅರ್ಥ ನಾನು ಪರಿಪೂರ್ಣ ಮುಸ್ಲಿಮನಾಗಿದ್ದೇನೆ ಎಂಬ ಅಭಿಮಾನವು ಮಿಥ್ಯವಾಗಿದೆ ಎಂಬುದನ್ನು ಬಹಳ ನೋವಿನೊಂದಿಗೆ ಅರಿತುಕೊಂಡರು. ಬಳಿಕ ತಮ್ಮ ಮುಖವನ್ನು ಮಣ್ಣಿಗೆ ಬಗ್ಗಿಸಿ ಹೇಳಿದರು. 'ಬಿಲಾಲ್ ತಮ್ಮ ಕಾಲಿನಿಂದ ನನ್ನ ಮುಖದ ಮೇಲೆ ಮೆಟ್ಟಲಿ. ನಾನು ಕತ್ತನ್ನು ಎತ್ತುವುದಿಲ್ಲ.' ಅಬೂದರ್ರ್‌ರಂತಹ ಮಹಾನ್ ವ್ಯಕ್ತಿಗಳು ಈ ರೀತಿ ಮಾಡಿದರೆಂದಾದರೆ 'ನಿನ್ನಲ್ಲಿ ಅಜ್ಞಾನವಿದೆ' ಎಂಬ ಪ್ರವಾದಿಯವರ ಆರೋಪವು ಆ ವ್ಯಕ್ತಿಯಲ್ಲಿ ಉಂಟು ಮಾಡಿದ ಆಘಾತವು ಎಷ್ಟು ಗುರುತರವಾಗಿತ್ತೆಂದು ಗ್ರಹಿಸಬಹುದಾಗಿದೆ.

ಹದೀಸಿನಲ್ಲಿರುವ 'ಖವಲ್' ಎಂಬ ಪದವನ್ನು ಸೇವಕ ಎಂದು ಭಾಷಾಂತರಿಸಲಾಗಿದೆ. ಇದಕ್ಕೆ ದಾಸರು, ಸಹಾಯಕರು, ಸೇವಕರು ಎಂಬಿತ್ಯಾದಿ ಅರ್ಥಗಳಿವೆ. ಈ ಎಲ್ಲ ಅರ್ಥಗಳೂ ಇದರಲ್ಲಿ ಒಳಗೊಂಡಿದೆ ಎಂಬುದು ಸಂದರ್ಭವನ್ನು ನೋಡಿದರೆ ಮನವರಿಕೆಯಾಗುತ್ತದೆ. 'ತಹ್‌ತ ಐದೀಕುಮ್' ಎಂಬ ವಾಕ್ಯವನ್ನು 'ನಿಮ್ಮ ಕೈಕೆಳಗೆ' ಎಂದು ಅನುವಾದಿಸಲಾಗಿದೆ. ನಿಮ್ಮ ಅಧೀನದಲ್ಲಿ, ಅಧಿಕಾರದಲ್ಲಿ, ಜವಾಬ್ದಾರಿಕೆಯಲ್ಲಿ, ಸಂರಕ್ಷಣೆಯಲ್ಲಿ ಮುಂತಾದ ಅರ್ಥಗಳೆಲ್ಲವೂ 'ನಿಮ್ಮ ಕೈಕೆಳಗೆ' ಎಂಬ ಪದಕ್ಕಿದೆ. ಕೆಲಸವನ್ನು ನೀಡುವಾಗ ಎಂದು ಅನುವಾದಿಸಿರುವ 'ತುಕಲ್ಲಿಫು' ಎಂಬ ಪದದ ಭಾಷಾರ್ಥ ತೊಂದರೆಗೊಳಪಡಿಸುವುದು, ಪೀಡಿಸುವುದು, ನಿಯಮಗಳನ್ನು ಹೇರುವುದು, ನಿರ್ಬಂಧಿಸುವುದು ಮುಂತಾದವುಗಳಾಗಿವೆ.

ಒಬ್ಬನ ಶರೀರವನ್ನು ತೊಂದರೆಗೀಡು ಮಾಡುವ ಕೆಲಸಕ್ಕೆ ಒತ್ತಾಯಿಸುವುದು, ಮಾನಸಿಕವಾಗಿ ಅಸಹ್ಯ ತರುವ ಕೆಲಸಗಳಿಗೆ ಒತ್ತಾಯಿಸುವುದು ಕೂಡಾ ಇದರಲ್ಲಿ ಒಳಗೊಳ್ಳುತ್ತವೆ.

ಮುಸ್ಲಿಮರಿಗೆ ಸಂಬಂಧಿಸಿದಂತೆ ಎಲ್ಲ ಮನುಷ್ಯರ ಅಭಿಮಾನವೂ ಗೌರವಾರ್ಹವಾಗಿದೆ. ಉದ್ದೇಶಪೂರ್ವಕವಾಗಿ ಅದಕ್ಕೆ ಹಾನಿಯನ್ನುಂಟು ಮಾಡುವುದು ಅಜ್ಞಾನದ ಲಕ್ಷಣವಾಗಿದೆ ಎಂದು ಬಹಳ ಸ್ಪಷ್ಟವಾಗಿ ಹೇಳಿದ ಬಳಿಕ ಪ್ರವಾದಿ(ಸ) ಅಬೂದರ್(ರ)ರಿಗೆ ಬಹಳ ಮುಖ್ಯವಾದ ಇನ್ನೊಂದು ನಿಯಮವನ್ನು ಕಲಿಸಿರುವರು. ಮನುಷ್ಯರೆಂಬ ನೆಲೆಯಲ್ಲಿ ಸೇವಕ-ಮಾಲಕ, ಗುಲಾಮ-ಯಜಮಾನ, ನೇತಾರ-ಅನುಯಾಯಿ, ರಾಜ-ಪ್ರಜೆ ಎಲ್ಲರೂ ಸಮಾನರೂ ಸಹೋದರರೂ ಆಗಿರುತ್ತಾರೆ ಎಂಬುದೇ ಆ ನಿಯಮ.

ಸ್ವಭಾವ, ಬುದ್ಧಿಶಕ್ತಿ, ಆರೋಗ್ಯ, ದೇಹಾಕೃತಿ, ಸಂಪತ್ತು ಎಲ್ಲವೂ ಪ್ರತಿಯೊಬ್ಬ ಮನುಷ್ಯರಲ್ಲೂ ಭಿನ್ನವಾಗಿರುತ್ತದೆ. ಅಲ್ಲಾಹನು ಮನುಷ್ಯರನ್ನು ಹಲವು ವರ್ಗಗಳಾಗಿಯೂ, ಸ್ವಭಾವವುಳ್ಳವರಾಗಿಯೂ ಮಾಡಿರುವುದು ಕೆಲವರು ಕೆಲವರಿಗಿಂತ ಶ್ರೇಷ್ಠರು ಅಥವಾ ನಿಕೃಷ್ಟರು ಎಂಬ ಕಾರಣದಿಂದಲ್ಲ, ಮನುಷ್ಯನು ವಿವೇಕ ಮತ್ತು ಸ್ವಾತಂತ್ರ್ಯವುಳ್ಳ ಇಚ್ಛಾಶಕ್ತಿಯಿರುವ ಸೃಷ್ಟಿ ಎಂಬ ನೆಲೆಯಲ್ಲಿ ಈ ಭೂಮಿಯಲ್ಲಿ ಅವನ ಜೀವನವು ಬೆಳೆಯುವುದರಲ್ಲಿ, ವಿಭಿನ್ನ ಪರಿಸ್ಥಿತಿ, ಸ್ವಭಾವ, ಸಹಕಾರ ಅನಿವಾರ್ಯವಾಗಿದೆ. ಎಲ್ಲ ಮನುಷ್ಯರೂ ಒಂದೇ ರೀತಿಯ ಸ್ವಭಾವ, ಪ್ರಕೃತಿ, ಸಮಾನವಾದ ಜ್ಞಾನ ಮತ್ತು ಆರೋಗ್ಯ ಸಾಮರ್ಥ್ಯವುಳ್ಳವರಾಗಿ ಸೃಷ್ಟಿಸಲ್ಪಟ್ಟಿದ್ದರೆ ಮನುಷ್ಯರಲ್ಲಿ ವ್ಯಕ್ತಿತ್ವ ಎಂಬುದು ಇರುತ್ತಿರಲಿಲ್ಲ, ಒಬ್ಬ ಮನುಷ್ಯನಿಗೆ ಇನ್ನೊಬ್ಬ ಮನುಷ್ಯನ ಮಧ್ಯೆ ಇರುವ ವ್ಯತ್ಯಾಸವು ಸಮುದ್ರದ ಒಂದು ತೊಟ್ಟು ನೀರಿಗೆ ಇನ್ನೊಂದು ತೊಟ್ಟು ನೀರಿಗಿರುವ ವ್ಯತ್ಯಾಸ ಮಾತ್ರವಾಗಿರುತ್ತಿತ್ತು. ಅಲ್ಲಾಹನು ಪ್ರತಿಯೊಬ್ಬ ಮನುಷ್ಯನಿಗೂ ಜೀವನವನ್ನು ಅರಿಯಲು, ಅನುಭವಿಸಲು ಬೇಕಾದ ವಿಶೇಷವಾದ ಯೋಗ್ಯತೆಯಿರುವ ವ್ಯಕ್ತಿತ್ವವನ್ನು ನೀಡಿರುತ್ತಾನೆ. ಕೆಲವರು ನಾಯಕರು ಇನ್ನು ಕೆಲವರು ಅನುಯಾಯಿಗಳು. ಕೆಲವರು ಸೇವಕರು ಮತ್ತೆ ಕೆಲವರು ಮಾಲಕರು. ಆದರೆ ಈ ವೈವಿಧ್ಯತೆ ಮನುಷ್ಯನ ಮೂಲ ಅವಸ್ಥೆಗೆ ಅನ್ವಯಿಸುವುದಿಲ್ಲ. ಪರಸ್ಪರರನ್ನು ಅರಿಯಲು, ವೈವಿಧ್ಯಮಯ ಯೋಗ್ಯತೆಗಳನ್ನು ಪರಸ್ಪರ ಹಂಚಿ ಕೆಲಸ ಮಾಡಲು ಸಮಾನತೆಯೊಂದಿಗೆ ಸಹೋದರ ಭಾವದಿಂದ ಜೀವಿಸಲಿಕ್ಕಿರುವ ಉಪಾಧಿಯೇ ಈ ವ್ಯತ್ಯಾಸವಾಗಿದೆ.

ಯೋಗ್ಯತೆ ಮತ್ತು ಸಾಮರ್ಥ್ಯದ ವಿವಿಧತೆಯ ಆಧಾರದಲ್ಲಿ ಕೆಲವರು ಕೆಲವರಿಗಿಂತ ಮೇಲೆ-ಕೆಳಗೆ ಅನಿಸುವುದು ಸ್ವಾಭಾವಿಕವಾಗಿದೆ. ಗಿಡ್ಡ ವ್ಯಕ್ತಿಗಳು ಆಜಾನುಬಾಹುಗಳಾದ ವ್ಯಕ್ತಿಗಳ ಮುಂದೆ ಎತ್ತರದಲ್ಲಿ ಸಣ್ಣವರಾಗಿರುತ್ತಾರೆ. ಇದರಿಂದ ಎತ್ತರವಾಗಿರುವವರು ಶ್ರೇಷ್ಠರು ಕುಳ್ಳಗಿನವರು ನೀಚರು ಎಂದಾಗುವುದಿಲ್ಲ. ಅದೇ ರೀತಿ ಅನುಯಾಯಿಗಳು ನಾಯಕರ, ಸೇವಕರು ಯಜಮಾನರ ಕೆಳಗಿರುತ್ತಾರೆ. ಈ ಮೇಲು ಕೀಳುಗಳು ಸ್ವಾಭಾವಿಕವಾಗಿದೆ. ಅದನ್ನೇ ಇಲ್ಲಿ ಪ್ರವಾದಿ(ಸ) 'ಅಲ್ಲಾಹನು ಅವರನ್ನು ನಿಮ್ಮ ಅಧೀನಗೊಳಿಸಿರುವನು'

ಎಂದು ಹೇಳಿರುವರು. ನಮ್ಮ ಸಾಮರ್ಥ್ಯ ಮತ್ತು ಮಹಾನತೆಯ ಕಾರಣದಿಂದ ನಾವು ಶ್ರೇಷ್ಠರಾಗಿದ್ದೇವೆಂದು ಮೇಲಿರುವವರಾರೂ ಭಾವಿಸಬಾರದು. ಕೆಳಗಿರುವವರು ನಾವು ಕೆಟ್ಟವರಾದ ಕಾರಣ ಈ ಸ್ಥಿತಿಯಲ್ಲಿದ್ದೇವೆಂದು ದುಃಖಿಸುವ ಅಗತ್ಯವಿಲ್ಲ. ಅಲ್ಲಾಹನು ಕೆಲವರಿಗೆ ಇನ್ನು ಕೆಲವರಿಗಿಂತ ಹೆಚ್ಚು ಯೋಗ್ಯತೆಯನ್ನು ನೀಡಿರುವುದು, ಆ ಯೋಗ್ಯತೆಯನ್ನು ಹೊಂದಿ ಅವರು ಅರಿವಿಲ್ಲದವರ ದೇವರಾಗಿ ಮೆರೆಯಲು ಅಥವಾ ಅವರನ್ನು ಶೋಷಿಸಲಿಕ್ಕೆ ಅಲ್ಲ. ಯೋಗ್ಯತೆಗಳನ್ನು ನೀಡಿರುವುದು ಪರಸ್ಪರ ಹಂಚಿಕೊಳ್ಳಲು ಮತ್ತು ಪರಸ್ಪರರ ಸಂರಕ್ಷಣೆ ಮಾಡಲಿಕ್ಕಾಗಿದೆ. ಸೇವಕ ತನ್ನ ಕೆಲಸ ಮಾಡುವ ಸಾಮರ್ಥ್ಯವನ್ನು ಯಜಮಾನನೊಂದಿಗೆ ಹಂಚಿಕೊಳ್ಳುತ್ತಾನೆ. ಯಜಮಾನನು ಅದಕ್ಕೆ ಪ್ರತಿಯಾಗಿ ತನ್ನಲ್ಲಿರುವ ಹಣವನ್ನು ಸೇವಕನೊಂದಿಗೆ ಹಂಚಿಕೊಳ್ಳುತ್ತಾನೆ. ಸೇವಕ-ಯಜಮಾನನ ಸಂಬಂಧದಲ್ಲಿ ಸೇವಕನು ಯಜಮಾನನ ಅಧೀನದಲ್ಲಿರುವುದು ಸ್ವಾಭಾವಿಕವಾಗಿದೆ. ಈ ಮೇಲು-ಕೀಳುಭಾವನೆ ಕೇವಲ ಯಜಮಾನ-ಸೇವಕ ಎಂಬ ಸಂಬಂಧಕ್ಕೆ ಮಾತ್ರ ಸೀಮಿತವಾಗಿದೆ. ಮನುಷ್ಯರೆಂಬ ನೆಲೆಯಲ್ಲಿ ಅವರು ಸಮಾನರೂ ಸಹೋದರರೂ ಆಗಿದ್ದಾರೆ.

ಸೇವಕ ಯಜಮಾನನ ಕೈ ಕೆಳಗಿರುವಾಗ ಯಜಮಾನನಿಗೆ ಸೇವಕನ ಸಂರಕ್ಷಣೆಯ ಹೊಣೆಗಾರಿಕೆ ವಹಿಸಲ್ಪಡುತ್ತದೆ. ನಿಶ್ಚಿತವಾದ ಸಂಬಳವನ್ನು ನಿಗದಿ ಪಡಿಸಿದ ಸೇವಕನಾಗಿದ್ದರೆ ಅವನ ಕೆಲಸ ಮುಗಿದು ಬೆವರಾರುವ ಮುನ್ನವೇ ಅವನ ವೇತನವನ್ನು ನೀಡಬೇಕು. ಸದಾ ಜೊತೆಗಿರುವ ಸೇವಕನಾಗಿದ್ದರೆ ಯಜಮಾನನು ತನಗೆ ಮಾಡಿದ ಜೀವನದ ಅನುಕೂಲವನ್ನು ಅವನಿಗೂ ಒದಗಿಸಬೇಕು. ಕೆಲವರು ಮಾಡುತ್ತಿರುವಂತೆ ಕೆಲಸದವರಿಗೆ ಹಳೆಯದ್ದು, ಹಳಸಿದ್ದು ಕೊಟ್ಟರೆ ಸಾಲದು. ತಾನು ತಿನ್ನುವುದನ್ನೇ ಅವನಿಗೂ ತಿನ್ನಿಸಬೇಕು. ತಾನು ಉಡುವಾಗ ಅವನಿಗೂ ಉಡಿಸಬೇಕು. ಇದುವೇ ಇಸ್ಲಾಮ್ ಉದ್ದೇಶಿಸಿರುವ ಸಮಾನತೆಯಾಗಿದೆ. ಪ್ರಾಯೋಗಿಕ ಸಮಾನತೆಯೂ ಇದುವೇ ಆಗಿದೆ. ಅವರ ಮಧ್ಯೆ ವರ್ಗ ಕಲಹಕ್ಕೆ, ರಕ್ತದೋಕುಳಿಗೆ ಅವಕಾಶವಿಲ್ಲ. ಭೌತಿಕವಾದಿಗಳ ಸಮಾನತೆಯ ಮೂಲವು ಯಜಮಾನನೊಂದಿಗಿನ ದ್ವೇಷ ವೈರವಾಗಿದ್ದರೆ, ಇಸ್ಲಾಮ್ ಉದ್ದೇಶಿಸಿರುವ ಸಮಾನತೆಯ ಮೂಲವು ಪ್ರೀತಿ ಮತ್ತು ಸಹಕಾರವಾಗಿದೆ. ಇಲ್ಲಿ ಸೇವಕನನ್ನು ಹೊಡೆಯುವುದಕ್ಕೆ ಪೀಡಿಸಿವುದಕ್ಕೆ ಅವಕಾಶವಿಲ್ಲ. ಸೇವಕನಿಂದ ಅವನ ಸಾಮರ್ಥ್ಯಕ್ಕೆ ಅನುಗುಣವಾದುದನ್ನು ಮಾತ್ರ ನಿರೀಕ್ಷಿಸಬಹುದು. ಹೆಚ್ಚು ಕಠಿಣ ಪರಿಶ್ರಮ ಪಡಬೇಕಾದ ಕೆಲಸವನ್ನು ವಹಿಸುವಾಗ ಯಜಮಾನನೂ ಕೂಡಾ ಅವನೊಂದಿಗೆ ಒಟ್ಟು ಸೇರಿ ಕೆಲಸ ಮಾಡಬೇಕು. ಆ ಮೂಲಕ ಸಹಾನುಭೂತಿಯನ್ನು ಸಮಾನತೆಯನ್ನು ಸಾಕ್ಷಾತ್ಕರಿಸಿ ತೋರಿಸಬೇಕು.

ಇವುಗಳಾವುವೂ ಬರೇ ನೀತಿ ನಿಬಂಧನೆಗಳಲ್ಲ. ಅಲ್ಲಾಹನಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ಅಚಲವಾದ ವಿಶ್ವಾಸವಿರುವ ಇಸ್ಲಾಮ್ ಧರ್ಮದಲ್ಲಿ ನಿಷ್ಕಳಂಕ ವಿಶ್ವಾಸವುಳ್ಳವರ ಪ್ರಾಯೋಗಿಕ ಜೀವನ ರೀತಿ ಇದಾಗಿರುತ್ತದೆ. ಪ್ರವಾದಿಗಳ, ಸಹಾಬಿಗಳ

ಚರಿತ್ರೆಯನ್ನು ಅಧ್ಯಯನ ಮಾಡುವವರು ಈ ರೀತಿಯ ವ್ಯಕ್ತಿತ್ವಗಳಿಗೆ ಅದೆಷ್ಟೋ ಉದಾಹರಣೆಗಳನ್ನು ಇತಿಹಾಸದಲ್ಲಿ ನೋಡಬಹುದಾಗಿದೆ. ಒಡೆಯನಾರು ಗುಲಾಮನಾರು ಎಂಬುದನ್ನು ಬೇರ್ಪಡಿಸಿ ತಿಳಿಯಲು ಸಾಧ್ಯವಾಗದ ರೀತಿಯಲ್ಲಿ ಒಂದೇ ಪಾತ್ರೆಯಲ್ಲಿ ಉಂಡು, ಒಂದೇ ಚಾಪೆಯಲ್ಲಿ ಮಲಗುವವರು ಅವರಲ್ಲಿದ್ದರು. ಒಂಟೆಯ ಮೇಲೆ ಗುಲಾಮನನ್ನು ಕುಳ್ಳಿರಿಸಿ ಒಂಟೆಯ ದಾರವನ್ನು ಹಿಡಿದು ನಡೆದ ಖಲೀಫರನ್ನು, ಸಾಮ್ರಾಜ್ಯಾಧಿಪತಿಯನ್ನು ಉಂಟು ಮಾಡಲು ಇಸ್ಲಾಮ್ ಧರ್ಮಕ್ಕಲ್ಲದೆ ಲೋಕದ ಬೇರಾವ ನೀತಿ ಸಂಹಿತೆಗಳಿಗೂ ಸಾಧ್ಯವಾಗಿಲ್ಲ.



## 37. ಮಾತು ಮತ್ತು ಕೃತಿ

عَنْ أُسَامَةَ بْنِ زَيْدٍ رَضِيَ اللّٰهُ عَنْهُ قَالَ سَمِعْتُ رَسُولَ اللّٰهِ ﷺ
يَقُولُ يُؤْتَى بِالرَّجُلِ يَوْمَ الْقِيَامَةِ فَيُلْقَى فِي النَّارِ فَتَنْدَلِقُ أَقْتَابُ بَطْنِهِ
فَيَدُورُ بِهَا كَمَا يَدُورُ الْحِمَارُ بِالرَّحَى فَيَجْتَمِعُ إِلَيْهِ أَهْلُ النَّارِ
فَيَقُولُونَ يَا فُلَانُ مَا لَكَ أَلَمْ تَكُنْ تَأْمُرُ بِالْمَعْرُوفِ وَتَنْهَى عَنِ الْمُنْكَرِ
فَيَقُولُ بَلَى كُنْتُ آمُرُ بِالْمَعْرُوفِ وَلَا آتِيهِ وَأَنْهَى عَنِ الْمُنْكَرِ وَآتِيهِ. (مسلم)

ಪ್ರವಾದಿ(ಸ) ಹೇಳಿರುವುದಾಗಿ ಹ. ಉಸಾಮಾ ಬಿನ್ ಝೈದ್(ರ) ವರದಿ ಮಾಡುತ್ತಾರೆ- ನಿರ್ಣಾಯಕ ದಿನದಂದು ಒಬ್ಬ ವ್ಯಕ್ತಿಯನ್ನು ತಂದು ನರಕಕ್ಕೆ ಎಸೆಯಲಾಗುವುದು. ಅವನ ಕರುಳುಗಳು ಹೊರಗೆ ಬರುವುವು. ಅವನು ಅವುಗಳನ್ನು ಹೊತ್ತು, ಕತ್ತೆಯು ಗಾಣದ ಸುತ್ತ ತಿರುಗುವಂತೆ ಸುತ್ತು ಬರುವನು. ಇತರ ನರಕವಾಸಿಗಳು ಅವನ ಸುತ್ತು ನೆರೆಯುವರು ಮತ್ತು 'ಇದೇನು ನಿನ್ನ ಅವಸ್ಥೆ? ನೀನು ಇಲ್ಲಿಗೆ ಹೇಗೆ ಬಂದೆ? ನೀನು ನಮಗೆ ಒಳಿತಿನ ಆಜ್ಞೆ ನೀಡುತ್ತಿದ್ದೆ, ಕೆಡುಕಿನಿಂದ ತಡೆಯುತ್ತಿದ್ದೆಯಲ್ಲ.' ಎಂದು ಹೇಳುವರು. ಆಗ ಅವನು ಹೀಗೆ ಉತ್ತರಿಸುವನು. 'ನಾನು ನಿಮಗೆ ಒಳಿತಿನ ಆಜ್ಞೆ ಕೊಡುತ್ತಿದ್ದೆ, ಆದರೆ ನಾನು ಅದರಂತೆ ನಡೆಯುತ್ತಿರಲಿಲ್ಲ, ನಿಮ್ಮನ್ನು ಕೆಡುಕಿನಿಂದ ತಡೆಯುತ್ತಿದ್ದೆ, ಆದರೆ ನಾನು ಸ್ವತಃ ಆ ಕೆಡುಕನ್ನು ಮಾಡುತ್ತಿದ್ದೆ.' (ಮುಸ್ಲಿಮ್)

ಮಾತು ಮತ್ತು ಕರ್ಮಗಳ ಮಧ್ಯೆ ಇರುವ ಅಂತರದ ದಯನೀಯ ಪರಿಣಾಮದ ಕುರಿತು ಈ ಪ್ರವಾದಿ ವಚನವು ಮನವರಿಕೆ ಮಾಡಿಸುತ್ತದೆ. ಮಾತು ಮತ್ತು ಕರ್ಮಗಳ ನಡುವೆ ಏಕತೆಯು ವ್ಯಕ್ತಿಗಳು, ಸಮೂಹ, ಆಡಳಿತಗಾರರು, ವಿದ್ವಾಂಸರ ಮುಂತಾದ ಎಲ್ಲರ ನಿಷ್ಕಳಂಕತೆ ಮತ್ತು ಸತ್ಯಸಂಧತೆಯ ಚಿಹ್ನೆಯಾಗಿದೆ. ಮಾತು ಮತ್ತು ಕರ್ಮಗಳ ಮಧ್ಯೆ ಅಂತರವಿರುವವರಲ್ಲಿ ಕಾಪಟ್ಯವೂ ಇರುತ್ತದೆ.

ಮಾತು ಮತ್ತು ಕೃತಿಯು ಒಂದೇ ರೀತಿ ಇರಬೇಕೆಂದು ತಿಳಿದು ಅದನ್ನು ಕಡ್ಡಾಯವಾಗಿ ಪಾಲಿಸುವವರಿಗೆ ಅಸತ್ಯ ನುಡಿಯಲು ಅಧರ್ಮ ಆಚರಿಸಲು ಮತ್ತು ಅದರಂತೆ ವರ್ತಿಸಲು

ಸಾಧ್ಯವೇ ಇಲ್ಲ. ಆದುದರಿಂದಲೇ ಸತ್ಯ, ಸಮಾಧಾನವು ತುಂಬಿ ತುಳುಕುವ ಒಂದು ಸಮಾಜವನ್ನು ಕಟ್ಟಿ ಬೆಳೆಸಲು ಆಗ್ರಹಿಸುವ ಇಸ್ಲಾಮ್ ಧರ್ಮವು ಮಾತು ಮತ್ತು ಕರ್ಮಗಳ ಮಧ್ಯೆ ಸಾಮ್ಯತೆ ಇರಬೇಕೆಂಬುದನ್ನು ವ್ಯಕ್ತಿಗಳಿಗೂ ಸಮಾಜಕ್ಕೂ ಕಡ್ಡಾಯಗೊಳಿಸಿದೆ.

ಹೇಳದ್ದನ್ನು ಮಾಡುವುದು. ಮಾಡದ್ದನ್ನು ಹೇಳುವುದು ಅಲ್ಲಾಹನಿಗೆ ಹೆಚ್ಚು ಅಪ್ರಿಯವಾದ ಕೆಲಸಗಳು. ಪವಿತ್ರ ಕುರ್‌ಆನ್ ಒಂದೆಡೆ ಸತ್ಯವಿಶ್ವಾಸಿಗಳೊಂದಿಗೆ ಈ ರೀತಿ ಪ್ರಶ್ನಿಸುತ್ತದೆ. 'ನೀವು ಮಾಡದ್ದನ್ನು ಆಡುತ್ತೀರೇಕೆ? ಮಾಡದ್ದನ್ನು ಆಡುವುದು ಅಲ್ಲಾಹನ ಬಳಿ ಅತ್ಯಂತ ಅಪ್ರಿಯ ಕೃತ್ಯವಾಗಿದೆ.' ಅಲ್ಲಾಹನಿಗೆ ಕೋಪವನ್ನುಂಟು ಮಾಡುತ್ತದೆ. ಕೋಪವನ್ನುಂಟು ಮಾಡಲು ಕಾರಣವಿದೆ. ಒಳಿತನ್ನು ಹೇಳುವವರು ಆದರೆ ಕೆಡುಕನ್ನು ಮಾಡುವವರು ದುರ್ಜನರು ಮಾತ್ರವಲ್ಲ ಅವರು ಜನರನ್ನು ವಂಚಿಸುತ್ತಾರೆ. ಅಲ್ಲಾಹನನ್ನು ತಮಾಷೆ ಮಾಡುತ್ತಾರೆ. ಎಲ್ಲಾ ರೀತಿಯಲ್ಲಿಯೂ ಸಮಾಜದಲ್ಲಿ ಮೌಲ್ಯಗಳನ್ನು ಇಲ್ಲವಾಗಿಸುವವರೂ ಅದಕ್ಕೆ ಕಾರಣಕರ್ತರೂ ಆಗಿರುತ್ತಾರೆ.

ಆಧುನಿಕ ಕಾಲದಲ್ಲಿ ಮೌಲ್ಯಗಳು ಅತಿ ಹೆಚ್ಚು ಇಲ್ಲದಾಗಿರುವ ಸಮೂಹದೆಡೆಗೆ ನೋಡೋಣ. ಅಲ್ಲೆಲ್ಲಾ ನಮಗೆ ಬಹಳ ಸ್ಪಷ್ಟವಾಗಿ ಕಂಡು ಬರುವ ವಿಷಯ ಮಾತು ಮತ್ತು ಕರ್ಮಗಳ ಮಧ್ಯೆ ಇರುವ ವೈರುಧ್ಯಗಳು. ಅವರು ಸದಾ ಶಾಂತಿಯ ಕುರಿತು ಮಾತನಾಡುತ್ತಾರೆ. ಜಗತ್ತಿನ ಶಾಂತಿಗೆ ಸದಾ ಕಾವಲುಗಾರರಾಗಿರುವವರು ತಾವೆಂದು ಘೋಷಿಸಿಕೊಳ್ಳುತ್ತಾರೆ. ಅದೇ ವೇಳೆ ಒಂದು ನಿಮಿಷದಲ್ಲೇ ಇಡೀ ಜಗತ್ತನ್ನು ಸುಟ್ಟು ಭಸ್ಮಗೊಳಿಸುವ ಸಾಮರ್ಥ್ಯವುಳ್ಳ ಆಯುಧಗಳನ್ನು ನಿರ್ಮಿಸುತ್ತಲೂ ಇದ್ದಾರೆ. ಅವರು ಸಾಮ್ರಾಜ್ಯಶಾಹಿತ್ವ ದಾಸ್ಯತನ, ಶೋಷಣೆಯ ವಿರುದ್ಧ ಬಹಳಷ್ಟು ಪ್ರತಿಭಟನೆಗಳನ್ನು ಮಾಡುತ್ತಾರೆ. ಆದರೆ ಲೋಕದ ಅತಿ ದೊಡ್ಡ ಸಾಮ್ರಾಜ್ಯಶಾಹಿ ಶಕ್ತಿಗಳು ಅವರೇ ಆಗಿದ್ದಾರೆ. ಬಹಿರಂಗವಾಗಿಯೂ ರಹಸ್ಯವಾಗಿಯೂ ಜಗತ್ತಿನ ಅನೇಕ ದುರ್ಬಲ ರಾಷ್ಟ್ರಗಳನ್ನು ದಾಸ್ಯತನಕ್ಕೀಡು ಮಾಡಿದ್ದಾರೆ. ಆಜ್ಞಾನುವರ್ತಿಗಳನ್ನಾಗಿಸುತ್ತಿದ್ದಾರೆ. ದುರ್ಬಲ ಸಮುದಾಯವನ್ನು ಅತಿ ಹೆಚ್ಚು ಶೋಷಿಸುವವರೂ ಬೇರಾರೂ ಅಲ್ಲ, ಕಾರುಣ್ಯದ ಬಗ್ಗೆಯೂ, ದಯೆಯ ಬಗ್ಗೆಯೂ ಅತಿಹೆಚ್ಚು ಚರ್ಚೆ ಮಾಡುವವರೂ ಈ ಮೌಲ್ಯಗಳು ನಾಶ ಹೊಂದಿದ ಸಮೂಹದ ಜನರೇ ಆಗಿದ್ದಾರೆ. ಅಭಿವೃದ್ದಿಯ ಹೆಸರಿನಲ್ಲಿ ಸಮೂಹವನ್ನು ಇಂಚಿಂಚಾಗಿ ಕೊಲ್ಲುವವರೂ ಅವರೇ ಆಗಿದ್ದಾರೆ.

ಕಪಟಿಗಳು, ಸ್ವಾರ್ಥಿಗಳು ಧರ್ಮದ ಕುರಿತು, ಸಚ್ಚಾರಿತ್ರ್ಯದ ಕುರಿತು ಮಾತನಾಡುತ್ತಿದ್ದಾರೆ. ಅದೇ ವೇಳೆ ಅವರು ಅಧರ್ಮದಲ್ಲೂ ಅತ್ಯಾಚಾರದಲ್ಲೂ ತೊಡಗಿಸಿ ಕೊಂಡಿದ್ದಾರೆ. ಇದನ್ನೆಲ್ಲಾ ನೋಡುವವರು, ವಿಶೇಷವಾಗಿ ಯುವಕರು ಸತ್ಯ, ಧರ್ಮ ಮುಂತಾದವುಗಳೆಲ್ಲ ಅರ್ಥಶೂನ್ಯವೆಂದು ಭಾವಿಸಕೊಳ್ಳುತ್ತಾರೆ. ಈ ಜಗತ್ತಿನ ಅತಿ ದೊಡ್ಡ ಸತ್ಯ ಸ್ವಾರ್ಥಲಾಭ ಮತ್ತು ಸ್ವಂತ ಸುಖದ ಬಗ್ಗೆ ಚಿಂತಿಸುವುದು ಎಂಬುದಾಗಿ ಅವರು ಭಾವಿಸುತ್ತಾರೆ. ಈ ನಿಟ್ಟಿನಲ್ಲಿ ಆಲೋಚಿಸಿದಾಗ ಈ ಲೋಕದ ಅತಿಭಯಾನಕ ಮತ್ತು ನೀಚವಾದ ಪಾಪಕೃತ್ಯವು ಮಾತು

ಮತ್ತು ಕರ್ಮಗಳ ಮಧ್ಯೆ ಇರುವ ವ್ಯತ್ಯಾಸವಾಗಿದೆ ಎಂಬುದು ಮನವರಿಕೆಯಾಗುತ್ತದೆ. ಅದಕ್ಕಾಗಿಯೇ ಅಲ್ಲಾಹನಿಗೆ ಕೋಪವನ್ನುಂಟು ಮಾಡುತ್ತದೆ ಎಂಬುದಾಗಿ ಇದರ ಬಗ್ಗೆ ವಿಶೇಷವಾಗಿ ಹೇಳಲಾಗಿದೆ.

ಮಾಡದ್ದನ್ನು ಆಡುವ ಮತ್ತು ಆಡದ್ದನ್ನು ಮಾಡುವ ವ್ಯಕ್ತಿಗಳಿಗೆ ಸಿಗುವ ಶಿಕ್ಷೆಯ ಭಯಾನಕತೆಯ ಕುರಿತು ಈ ಪ್ರವಾದಿ ವಚನದಲ್ಲಿ ಬಹಳ ಸ್ಪಷ್ಟವಾಗಿ ವಿವರಿಸಲಾಗಿದೆ. ಘೋರವಾದ ಶಾರೀರಿಕ ಶಿಕ್ಷೆಯ ಜೊತೆಗೆ ತಾನು ಉಪದೇಶಿಸುತ್ತಿದ್ದವನ ಪೈಕಿ ನರಕದಲ್ಲಿ ಯಾರೆಲ್ಲ ಇರುವರೋ ಅವರೆಲ್ಲರ ಪರಿಹಾಸ್ಯ ಮತ್ತು ತೆಗಳಿಕೆಗೆ ಕೂಡಾ ಅವರು ಒಳಗಾಗುತ್ತಾರೆ.

ಮಾತು ಮತ್ತು ಕೃತಿಗಳ ಮಧ್ಯೆ ಸಾಮ್ಯತೆ ಶಿಕ್ಷಣದಿಂದ ಅಥವಾ ಬುದ್ಧಿಶಕ್ತಿಯಿಂದ ಉಂಟಾಗುವುದಿಲ್ಲ. ಸತ್ಯಸಂಧತೆ, ಆತ್ಮನಿಯಂತ್ರಣದ ಬಲದೊಂದಿಗೆ ಮಾತ್ರ ಅದನ್ನು ಸಾಧಿಸಬಹುದು. ಸತ್ಯಸಂಧತೆ ದುರ್ಬಲವಾದಾಗ, ಆತ್ಮನಿಯಂತ್ರಣ ನಷ್ಟ ಹೊಂದುವಾಗ ಶೈತಾನ್ ನಮ್ಮ ಹೃದಯಕ್ಕೆ ಪ್ರವೇಶಿಸಿ ನಮ್ಮ ಮಾತು ಮತ್ತು ಕೃತಿಯನ್ನು ಬೇರೆಯಾಗಿಸುತ್ತಾನೆ.

ಧರ್ಮದ ಬಗ್ಗೆ ಜ್ಞಾನ ಧಾರಾಳವಾಗಿದ್ದರೂ ವ್ಯಕ್ತಿಯ ಜೀವನ ಅದಕ್ಕೆ ಅನುಗುಣವಾಗಿರಬೇಕೆಂದೇನಿಲ್ಲ. ಜ್ಞಾನವು ಮನಸ್ಸು ಮತ್ತು ಮಸ್ತಿಷ್ಕವನ್ನು ಹೊಂದಿಕೊಂಡಿರುತ್ತದೆ. ಒಂದು ವಿಷಯದ ಕುರಿತು ಅರಿವು ಮತ್ತು ಅದನ್ನು ಕಾರ್ಯರೂಪದಲ್ಲಿ ಅನುಷ್ಠಾನಗೊಳಿಸುವುದು ಎರಡೂ ವ್ಯತ್ಯಾಸವುಳ್ಳ ಕೆಲಸಗಳಾಗಿವೆ.

ವೈಜ್ಞಾನಿಕ ರಂಗವು ಸದಾ ನೆನಪಿಸುವ ವಿಜ್ಞಾನಿ ಅಬೂ ಅಲಿ ಇಬ್ನ್ ಸೀನ. ಹೋಲಿಕೆಯಿಲ್ಲದ ವಿಜ್ಞಾನಿ, ಅತಿ ಪ್ರಬುದ್ಧವಾದ ಧಾರ್ಮಿಕ ಚಿಂತಕ ಎಂಬುದಾಗಿ ಎಲ್ಲಾ ಕಾಲಗಳಲ್ಲೂ ಆದರಿಸಲ್ಪಡುವ ವ್ಯಕ್ತಿತ್ವ ಇಷ್ಟಿದ್ದರೂ ಅವರ ಚಾರಿತ್ರ್ಯ ಚೆನ್ನಾಗಿರಲಿಲ್ಲ ಎಂಬ ಆಕ್ಷೇಪವಿದೆ. ಒಮ್ಮೆ ಓರ್ವ ವಿದ್ವಾಂಸರಿಂದ ವಿಮರ್ಶೆಗೊಳಗಾದಾಗ ಇಬ್ನ್‌ಸೀನರ ಪ್ರತಿಕ್ರಿಯೆ ಈ ರೀತಿ ಇತ್ತು. 'ಸಚ್ಚಾರಿತ್ರ್ಯದ ಮಹತ್ವದ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿರುವ ನನ್ನ ಕುರಿತು ಸಚ್ಚಾರಿತ್ರ್ಯವಂತನಲ್ಲ ಎಂದು ಹೇಳಿದರೆ ಅದು ಹೇಗೆ ಸರಿಯಾಗುತ್ತದೆ?'

ವಿದ್ವಾಂಸ ಮುಗುಳ್ನಗುತ್ತಾ ಈ ರೀತಿ ಉತ್ತರಿಸಿದರು– 'ಒಳ್ಳೆಯ ಚಾರಿತ್ರ್ಯವೆಂದರೇನೆಂದು ಇಬ್ನುಸೀನರಿಗೆ ತಿಳಿದಿಲ್ಲವೆಂದು ನಾನೆಂದೂ ಹೇಳಿಲ್ಲ. ಆದರೆ ವ್ಯಕ್ತಿ ಉತ್ತಮ ಚಾರಿತ್ರ್ಯವನ್ನು ಹೊಂದಿಲ್ಲ ಎಂದು ಮಾತ್ರ ನಾನು ಹೇಳಿದ್ದೇನೆ.'

ಈ ಚಾರಿತ್ರಿಕ ವರದಿ ಎಷ್ಟರ ಮಟ್ಟಿಗೆ ಸರಿಯಾಗಿದೆ ಎಂಬುದು ನಮಗೆ ತಿಳಿದಿಲ್ಲ. ಹಾಗಿದ್ದರೂ ಒಂದು ದೊಡ್ಡ ವಾಸ್ತವಿಕತೆಯನ್ನು ನಾವು ಈ ಮೂಲಕ ಮನದಟ್ಟು ಮಾಡಬಹುದಾಗಿದೆ. ಉತ್ತಮ ಚಾರಿತ್ರ್ಯದ ಕುರಿತು ದೊಡ್ಡ ಗ್ರಂಥಗಳನ್ನು ರಚಿಸುವುದು, ಅತ್ಯುತ್ತಮ ಭಾಷಣ ಮಾಡುವುದು ಮುಂತಾದವುಗಳು ವ್ಯಕ್ತಿಯನ್ನು ಸಚ್ಚಾರಿತ್ರ್ಯದ ವ್ಯಕ್ತಿಯಾಗಿಸಬೇಕೆಂದೇನಿಲ್ಲ. ಅದಕ್ಕೆ ಈ ಮೊದಲು ಪ್ರಸ್ತಾಪಿಸಿದಂತೆ ಅತಿಶ್ರೇಷ್ಠವಾದ ಆತ್ಮನಿಯಂತ್ರಣ, ಯಾವುದೇ ಕಾಲದಲ್ಲೂ ಸ್ಥಿರವಾಗಿ ನಿಲ್ಲುವ ಸತ್ಯಸಂಧತೆ ಇರಲೇಬೇಕು.

ಪ್ರತಿಯೊಬ್ಬರೂ ದಿನಾಲೂ ತಮ್ಮ ಮಾತು ಮತ್ತು ಕೃತಿಯು ಒಂದೇ ಆಗಿದೆಯೇ ಎಂದು ಪರೀಕ್ಷಿಸುತ್ತಿರಬೇಕು. ಅದರಲ್ಲಿ ಅಂತರಗಳು ಕಂಡುಬಂದರೆ ಆ ಕೂಡಲೇ ಸರಿಪಡಿಸುತ್ತಿರಬೇಕು. ಆಡುವುದನ್ನು ಮಾಡುತ್ತೇನೆ ಮತ್ತು ಮಾಡಿದ್ದನ್ನೇ ಆಡುತ್ತೇನೆ ಎಂದು ಪ್ರತಿಜ್ಞೆ ಮಾಡಬೇಕು.

ಮಾತು ಮತ್ತು ಕೃತಿಗಳ ಮಧ್ಯೆ ಇರುವ ವೈರುಧ್ಯತೆಗಳನ್ನು ಕಡೆಗಣಿಸಿದರೆ ಅದು ಬಹಳ ಶೀಘ್ರವಾಗಿ ಬೆಳೆಯುವುದು. ಮನಸ್ಸು ಪೂರ್ತಿಯಾಗಿ ಕಾಪಟ್ಯದಿಂದ ತುಂಬಿ ಬಿಡಲು ಹೆಚ್ಚು ಸಮಯ ಬೇಕಾಗುವುದಿಲ್ಲ. ಅದರ ಭಯಾನಕವಾದ ಅಂತಿಮ ಪರಿಣಾಮದ ಕುರಿತು ಈ ವಚನವು ಬೆಳಕು ಚೆಲ್ಲುತ್ತದೆ.



# 38. ಗೋಮುಖ ವ್ಯಾಘ್ರತೆ

عَنْ أَبِي هُرَيْرَةَ رَضِيَ اللَّهُ عَنْهُ قَالَ: قَالَ النَّبِيُّ ﷺ تَجِدُ مِنْ شَرِّ النَّاسِ يَوْمَ الْقِيَامَةِ
عِنْدَ اللَّهِ ذَا الْوَجْهَيْنِ الَّذِي يَأْتِي هَؤُلَاءِ بِوَجْهٍ وَهَؤُلَاءِ بِوَجْهٍ. (بخاری)

ಪ್ರವಾದಿ(ಸ) ಹೇಳಿರುವುದಾಗಿ ಹ. ಅಬೂ ಹುರೈರ(ರ) ವರದಿ ಮಾಡುತ್ತಾರೆ- 'ನೀವು ನಿರ್ಣಾಯಕ ದಿನದಂದು ಅತ್ಯಂತ ದುಷ್ಟನೊಬ್ಬನನ್ನು ಕಾಣುವಿರಿ. ಅವನು ಈ ಲೋಕದಲ್ಲಿ 2 ರೂಪಗಳನ್ನು ಹೊಂದಿದ್ದನು. ಕೆಲವರೊಂದಿಗೆ ಒಂದು ರೂಪದಲ್ಲಿ ಭೇಟಿಯಾಗುತ್ತಿದ್ದನು. ಇನ್ನು ಕೆಲವರೊಂದಿಗೆ ಬೇರೆಯೇ ರೂಪದೊಂದಿಗೆ ಮಾತನಾಡುತ್ತಿದ್ದನು.' (ಬುಖಾರಿ)

ಮನುಷ್ಯರಲ್ಲಿರುವ ಬಹಳ ಮಾರಕವಾದ ಒಂದು ದುಷ್ಟ ಸ್ವಭಾವದ ಕುರಿತು ಈ ಹದೀಸಿನಲ್ಲಿ ಪ್ರಸ್ತಾಪಿಸಲಾಗಿದೆ. ಮುಸ್ಲಿಮರು ನಿಷ್ಕಳಂಕರೂ, ಸರಳ ಸ್ವಭಾವ ಚಾರಿತ್ರ್ಯವನ್ನು ಹೊಂದಿದವರೂ ಆಗಿರಬೇಕೆಂದು ಇಸ್ಲಾಮ್ ಬಯಸುತ್ತದೆ. ಜನರ ಚಾರಿತ್ರ್ಯವನ್ನು ಸಂಸ್ಕರಿಸುವುದು ಇಸ್ಲಾಮಿನ ಬಹಳ ದೊಡ್ಡ ಗುರಿಯಾಗಿದೆ. ಉನ್ನತವಾದ ಸ್ವಭಾವಗಳನ್ನು ಗಳಿಸಲು ಮತ್ತು ದುರ್ಗುಣಗಳನ್ನು ದೂರೀಕರಿಸಲು ಅಗತ್ಯವಾದ ಅನೇಕ ಮಾರ್ಗದರ್ಶನ'ಗಳನ್ನು ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಕಾಣಬಹುದು. ವ್ಯಕ್ತಿ ಮತ್ತು ಸಮೂಹದ ವರ್ತನೆಗಳು ಸತ್ಯ ಸಂಧವೂ, ಸಂಸ್ಕಾರ ಸಂಪನ್ನವೂ ಆಗಿರಬೇಕೆಂದು ಅದು ಬಯಸುತ್ತದೆ. ನಿಷ್ಕಳಂಕತೆ, ಪ್ರಾಮಾಣಿಕತೆ, ಪ್ರೀತಿ, ಸಹಕಾರ ಮುಂತಾದ ಉತ್ಕೃಷ್ಟ ಗುಣಗಳನ್ನು ಮೈಗೂಡಿಸಲು ಇಸ್ಲಾಮ್ ಮುಸ್ಲಿಮರೊಂದಿಗೆ ಗೌರವಪೂರ್ವಕವಾಗಿ ನೆನಪಿಸುತ್ತದೆ. ಏಕನಾದ ಅಲ್ಲಾಹನಿಗೆ ಸಾಷ್ಟಾಂಗವೆರಗುವುದು, ಅವನಿಗೆ ವಿಧೇಯನಾಗಿರುವುದು ಮುಂತಾದವುಗಳಂತೆಯೇ ಉತ್ತಮ ಕೆಲಸಗಳನ್ನು ಮಾಡುವುದರ ಪ್ರಾಮುಖ್ಯತೆಯನ್ನೂ ಪವಿತ್ರ ಕುರ್‌ಆನ್ ಹೇಳುತ್ತದೆ. ಅಲ್ಲಾಹನು ಹೇಳುತ್ತಾನೆ. 'ನೀವು ವಿಜಯಿಗಳಾಗಬೇಕಾದರೆ ಅಲ್ಲಾಹನಿಗೆ ವಿಧೇಯರಾಗಿರಿ, ಸಾಷ್ಟಾಂಗವೆರಗಿರಿ, ನಿಮ್ಮ ಪ್ರಭುವಿನ ಆರಾಧನೆ ಮಾಡಿರಿ. ಒಳಿತುಗಳನ್ನು ಮಾಡುತ್ತಲಿರಿ.'

ಒಬ್ಬ ವ್ಯಕ್ತಿಯು ಇನ್ನೊಬ್ಬನನ್ನು ಭೇಟಿಯಾಗುವಾಗ ಅವನನ್ನು ಪ್ರಲೋಭನೆಗೊಳಪಡಿಸುವಂತೆ, ಮರಳು ಮಾಡುವಂತೆ ಮಾತನಾಡುವುದು ಮತ್ತು ವರ್ತಿಸುವುದು.

ಅದೇ ವ್ಯಕ್ತಿ ಮೊದಲು ಭೇಟಿಯಾದ ವ್ಯಕ್ತಿಯ ವಿರೋಧಿಯಾದ ಇನ್ನೊಬ್ಬ ವ್ಯಕ್ತಿಯ ಜೊತೆ ಮಾತನಾಡುವಾಗ ಅವನನ್ನು ಪ್ರಲೋಭನೆಗೊಳಿಸುವಂತೆ ಮರುಳು ಮಾಡುವಂತೆ ವರ್ತಿಸುವುದು ಮತ್ತು ಮಾತನಾಡುವುದು. ಈ ರೀತಿಯ ವ್ಯಕ್ತಿಗಳು ಮತ್ತು ಸಮೂಹವು ಎಲ್ಲೆಡೆಯೂ ಕಾಣಸಿಗುತ್ತಾರೆ. ವಿವಿಧ ಮುಖಗಳೊಂದಿಗೆ ವಿವಿಧ ಜನರನ್ನು ಸಮೀಪಿಸಿ ಜನರನ್ನು ಪರಸ್ಪರ ಶತ್ರುಗಳಾಗಿಸಿ, ತಮ್ಮ ಪರವಾಗಿಸಿ ಸ್ವಾರ್ಥ ಲಾಭ ಗಳಿಸುವುದು ಅವರ ಉದ್ದೇಶವಾಗಿರುತ್ತದೆ. ಸ್ವಾರ್ಥಕ್ಕಾಗಿ ಒಂದಕ್ಕಿಂತ ಹೆಚ್ಚು ರೂಪಗಳನ್ನು ಹೊಂದಿರುವವರನ್ನೇ ಸಾಂಕೇತಿಕವಾಗಿ ಮುನಾಫಿಕರು(ಕಪಟ ವಿಶ್ವಾಸಿಗಳು) ಎಂದು ಕರೆಯಲಾಗುತ್ತದೆ.

ಕಾಪಟ್ಯವುಳ್ಳ ವ್ಯಕ್ತಿಗಳು ಯಾವುದೇ ಸಮಾಜದಲ್ಲಿದ್ದರೂ ಅದಕ್ಕೆ ಶಾಪವಾಗಿದ್ದಾರೆ. ವ್ಯಕ್ತಿಗಳ ಮಧ್ಯೆ, ಸಮೂಹಗಳ ಮಧ್ಯೆ ಶತ್ರುತ್ವವನ್ನು ಪೋಷಿಸುವವರೂ ವಿಷಬೀಜ ಬಿತ್ತುವವರೂ ಹೆಚ್ಚು ಕಡಿಮೆ ಸ್ವಾರ್ಥಿಗಳಾದ ಕಪಟಿಗಳಾಗಿರುತ್ತಾರೆ ಎಂಬುದು ಅನುಭವವೇದ್ಯ ಸತ್ಯವಾಗಿದೆ. ಸ್ವಹಿತ ಚಿಂತನೆ, ಲಾಭದ ಬಗ್ಗೆ ಮಾತ್ರ ಚಿಂತಿಸುವ ಇಂತಹ ವ್ಯಕ್ತಿಗಳಿಗೆ ಸಮಾಜದ ಆವಶ್ಯಕತೆ ಮತ್ತು ಹಿತಚಿಂತನೆಯ ಬಗ್ಗೆ ಯಾವುದೇ ಕಾಳಜಿ ಇರುವುದಿಲ್ಲ. ತಮಗೆ ಲಾಭವಾಗುತ್ತದೆಯೆಂದಾದರೆ ಇಡೀ ಸಮೂಹವನ್ನು ಬಲಿ ನೀಡಲು ಮುನಾಫಿಕರು ಹಿಂದೆ ಮುಂದೆ ನೋಡುವುದಿಲ್ಲ. ಆದುದರಿಂದಲೇ ಮುನಾಫಿಕರ ಶಾಶ್ವತ ವಾಸಸ್ಥಾನವು ನರಕದ ತಳಭಾಗವಾಗಿದೆಯೆಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿರುತ್ತದೆ.

ಒಂದಕ್ಕಿಂತ ಹೆಚ್ಚು ರೂಪವನ್ನು ಧರಿಸುವವರು ವಾಸ್ತವದಲ್ಲಿ ರೂಪವಿಲ್ಲದವರಾಗಿದ್ದಾರೆ. ಕ್ಷುದ್ರವಾದ, ಬೀಭತ್ಸವಾದ ಸ್ವಾರ್ಥ ಮಾತ್ರ ಅವರೊಂದಿಗಿರುತ್ತದೆ. ಅದನ್ನು ಅಡಗಿಸಲು ಸಂದರ್ಭಕ್ಕೆ ತಕ್ಕಂತೆ ವಿವಿಧ ರೂಪಗಳನ್ನು ಅವರು ಹೊಂದುತ್ತಾರೆ. ಸತ್ಯವಿರಲಿ, ಮಿಥ್ಯವಿರಲಿ ಯಾವುದಾದರೂ ಒಂದು ಮೌಲ್ಯವನ್ನು ಸ್ಥಿರವಾಗಿ ಪಾಲಿಸುವವರಿಗೆ ಮಾತ್ರ ಒಂದೇ ರೂಪವಿರುತ್ತದೆ.

ಸಂದರ್ಭಕ್ಕೆ ತಕ್ಕಂತೆ ವಿವಿಧ ರೂಪಗಳನ್ನು ತಾಳುವ ವ್ಯಕ್ತಿಗಳು ಸಮೂಹವನ್ನು ವಿವಿಧ ರೀತಿಯಲ್ಲಿ ವಂಚಿಸುತ್ತಾರೆ. ಕೆಲವೊಮ್ಮೆ ಆಕ್ಷೇಪವು ಅವರ ಆಯುಧವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಹೊಗಳಿಕೆ ಮತ್ತು ಪ್ರಶಂಸೆಯನ್ನು ಅವರು ಆಯುಧವಾಗಿ ಸ್ವೀಕರಿಸುತ್ತಾರೆ. ಇನ್ನು ಕೆಲವೊಮ್ಮೆ ಸಹಾಯ, ಸಹಕಾರ, ಔದಾರ್ಯದ ವಿವಿಧ ರೂಪಗಳ ಮೂಲಕ ಅವರು ಜನರನ್ನು ವಂಚಿಸುತ್ತಾರೆ. ಮನುಷ್ಯನ ಮನಸ್ಸಿನಲ್ಲಿ ಕಾಪಟ್ಯವು ತುಂಬುವುದರೊಂದಿಗೆ ಧೈರ್ಯ, ಪ್ರಾಮಾಣಿಕತೆ, ಸ್ಥೈರ್ಯ ಮುಂತಾದ ಗುಣಗಳು ಅವರಿಂದ ಮಾರು ದೂರ ಹೋಗುತ್ತದೆ. ಆದುದರಿಂದ ಸ್ವಾರ್ಥ ಲಾಭಕ್ಕಾಗಿ ಯಾವುದೇ ರೂಪವನ್ನು ಹೊಂದಲು ಕಪಟಿಗಳು ಹಿಂದೇಟು ಹಾಕುವುದಿಲ್ಲ. ಆದರೂ ಚಾಡಿ, ಪರದೂಷಣೆ ಮತ್ತು ಮುಖಸ್ತುತಿ ಇಂತಹವರು ಹೆಚ್ಚಾಗಿ ಉಪಯೋಗಿಸುವ ಆಯುಧಗಳಾಗಿವೆ.

ಚಾಡಿ ಮತ್ತು ಪರದೂಷಣೆಯು ಕಾಪಟ್ಯ ಮತ್ತು ಮುಖವಾಡದ ಸ್ಪಷ್ಟವಾದ ಲಕ್ಷಣಗಳಾಗಿರುತ್ತವೆ. ಆದುದರಿಂದಲೇ ಒಂದಕ್ಕಿಂತ ಹೆಚ್ಚು ರೂಪವನ್ನು ಧರಿಸುವವರಂತೆಯೇ

ಚಾಡಿ ಹೇಳುವವರೂ ಅತ್ಯಂತ ದುಷ್ಟರು ಎಂದು ಪ್ರವಾದಿ(ಸ) ಹೇಳಿರುವರು. ತಬ್ರಾನಿಯಲ್ಲಿ ಇಮಾಮ್ ಅಹ್ಮದ್ ವರದಿ ಮಾಡಿರುವ ಪ್ರವಾದಿ ವಚನದಲ್ಲಿ ಈ ರೀತಿ ಇದೆ. 'ಅಲ್ಲಾಹನ ದಾಸರ ಪೈಕಿ ಅತ್ಯಂತ ಕೆಟ್ಟ ವ್ಯಕ್ತಿಗಳು ಚಾಡಿ ಮಾತುಗಳನ್ನು ಪ್ರಚಾರ ಮಾಡುವವರಾಗಿದ್ದಾರೆ. ಸ್ನೇಹಿತರನ್ನು ಜಗಳಾಡಿಸುವುದು, ನಿರಪರಾಧಿಗಳ ಬಗ್ಗೆ ಕೆಟ್ಟ ಮಾತುಗಳನ್ನಾಡಿ ಆಕ್ರಮಿಸುವುದು ಇಂತಹವರ ಕೆಲಸವಾಗಿದೆ. ಆದರೆ ಚಾಡಿ ಮಾತುಗಳನ್ನು ಆಲಿಸುವವರು ಸಾಮಾನ್ಯವಾಗಿ ಪ್ರವಾದಿ ಮುಹಮ್ಮದರ(ಸ) ಆದೇಶಗಳನ್ನು ಪರಿಗಣಿಸುವುದಿಲ್ಲ, ಚಾಡಿ ಮಾತುಗಳನ್ನು, ಪರದೂಷಣೆಯನ್ನು ಉತ್ಸಾಹದೊಂದಿಗೆ 'ಆಸ್ವಾದಿಸುವವರು' ಆ ಮೂಲಕ ನಿಜವಾಗಿ ಒಂದು ಸಮೂಹಕ್ಕೆ ದ್ರೋಹ ಬಗೆಯಲು ಪ್ರೋತ್ಸಾಹ ನೀಡುತ್ತಿದ್ದೇವೆ ಎಂಬುದನ್ನು ನೆನಪಿಸಿಕೊಳ್ಳಬೇಕು.

ಒಂದಕ್ಕಿಂತ ಅಧಿಕ ರೂಪವನ್ನು ಹೊಂದಿದವರ ಮತ್ತೊಂದು ಸುಪ್ರಧಾನವಾದ ಅಸ್ತ್ರ ಮುಖಸ್ತುತಿ. ತಮಗೇನಾದರೂ ಲಾಭ ಸಿಗುತ್ತದೆ ಎಂದು ಗೊತ್ತಾದರೆ ಯಾರನ್ನು ಬೇಕಿದ್ದರೂ ಲೆಕ್ಕವಿಲ್ಲದಷ್ಟು ಸ್ತುತಿಸಲು ಯಾವ ನೀಚರನ್ನು ಬೇಕಾದರೂ ಹೊಗಳಲು ಅವರು ತಯಾರಾಗಿರುತ್ತಾರೆ. ಯಾವುದಾದರೂ ಲಾಭವಿರುವುದಾದರೆ ಈ ಮೊದಲು ಹೊಗಳಿದ, ಪ್ರಶಂಸಿಸಿದ ವ್ಯಕ್ತಿಗಳನ್ನೇ ನಿಂದಿಸಲೂ, ಪರಿಹಾಸ್ಯ ಮಾಡಲೂ ಅವರು ಹಿಂದೇಟು ಹಾಕುವುದಿಲ್ಲ.

ಕಪಟ ಪ್ರಶಂಸೆಯು ಪ್ರಶಂಸಿಸುವವನಿಗೂ ಪ್ರಶಂಸೆಗೊಳಪಡುವವನಿಗೂ ಒಂದೇ ರೀತಿಯಲ್ಲಿ ವಿನಾಶಕಾರಿಯಾಗಿದೆ. ಪ್ರಶಂಸಿಸುವವನ ಬಗ್ಗೆ ಹೇಳುವುದಾದರೆ ಈ ನಿರರ್ಥಕ, ಕಪಟತೆಯಿಂದ ಕೂಡಿದ ಕೆಲಸ ಅವನ ವ್ಯಕ್ತಿತ್ವವನ್ನು ನಾಶಪಡಿಸುತ್ತದೆ. ಪ್ರಶಂಸಿಸಲ್ಪಡುವವರೂ ಸಾಕಷ್ಟು ಮನೋದಾರ್ಢ್ಯ ಇಲ್ಲದವನಾದರೆ ಮುಖಸ್ತುತಿಯಲ್ಲಿ ಮುಳುಗಿ ತನ್ನನ್ನೇ ಮರೆತು ಬಿಡುತ್ತಾನೆ. ಮುಂದುವರಿದು ಸ್ವತಃ ಆತ್ಮಾವಲೋಕನ ನಡೆಸುವುದನ್ನು ತೊರೆಯುತ್ತಾನೆ. ಇದಕ್ಕೆ ಕಾರಣವೇನೆಂದರೆ ಅವನು ಒಳ್ಳೆಯ ಕೆಲಸಗಳನ್ನು ಮಾಡಿದಾಗಲೂ ಕೆಟ್ಟ ಕಲಸಗಳನ್ನು ಮಾಡಿದಾಗಲೂ ಮುಖಸ್ತುತಿ ಮಾಡುವವರು ಒಂದೇ ರೀತಿಯಲ್ಲಿ ಪ್ರಶಂಸೆಯ ಮಾತುಗಳನ್ನು ಆಡಿರುತ್ತಾರೆ. ಮುಖಸ್ತುತಿ ಮಾಡುವವರ ಬಲೆಗೆ ಬೀಳುವವರಲ್ಲಿ ಕ್ರಮೇಣ ಅತಿಯಾದ ಆತ್ಮವಿಶ್ವಾಸ ಬೆಳೆಯುವುದು. ಅವರು ಅಹಂಕಾರಿಗಳೂ, ಸ್ವೇಚ್ಛಾಚಾರಿಗಳೂ ಆಗಿ ಬದಲಾಗಿ ಬಿಡುತ್ತಾರೆ. ಆ ಬಳಿಕ ಅವರ ಕೆಲಸವನ್ನು ಯಾರಾದರೂ ವಿಮರ್ಶಿಸಿದರೆ, ತಪ್ಪುಗಳನ್ನು ತೋರಿಸಿ ಕೊಡುವ ಕೆಲಸ ಮಾಡಿದರೆ ಅದನ್ನು ಸಹಿಸಲು ಸಾಧ್ಯವಾಗದ ಅತ್ಯಂತ ಅಪಾಯಕಾರಿಯಾದ ಒಂದು ಅವಸ್ಥೆಗೆ ತಲುಪುತ್ತಾರೆ. ಈ ರೀತಿಯಲ್ಲಿ ಮುಖಸ್ತುತಿಯು ಅದಕ್ಕೆ ಬಲಿಯಾಗುವವರನ್ನು ನಾಶಪಡಿಸುತ್ತದೆ. ಬುಖಾರಿ ಮತ್ತು ಮುಸ್ಲಿಮ್‌ನಲ್ಲಿ ವರದಿಯಾಗಿರುವ ಅಬೂ ಮೂಸಾ(ರ) ವರದಿ ಮಾಡಿರುವ ಒಂದು ಹದೀಸ್ ಈ ರೀತಿ ಇದೆ. ಒಮ್ಮೆ ಒಬ್ಬ ವ್ಯಕ್ತಿಯನ್ನು ಅತಿ ಹೆಚ್ಚಾಗಿ ಸ್ತುತಿಸುವುದನ್ನು ಪ್ರಶಂಸಿಸುವುದನ್ನು ಕೇಳಿದಾಗ ಪ್ರವಾದಿ(ಸ) ಈ ರೀತಿ ಹೇಳಿದರು. 'ನೀವು ಆ ಮನುಷ್ಯನನ್ನು ನಾಶ ಮಾಡಿದಿರಿ. ಇಲ್ಲದಿದ್ದರೆ ನೀವು ಅವನ ಬೆನ್ನನ್ನು ಮುರಿದು ಬಿಟ್ಟಿರಿ.'

ಪ್ರಶಂಸನೀಯವಾದ ಕೆಲಸಗಳನ್ನು ಮಾಡಿದವರನ್ನು ಅಭಿನಂದಿಸಬಾರದೆಂದು ಇದರರ್ಥವಲ್ಲ. ಒಳ್ಳೆಯ ಕೆಲಸಗಳನ್ನು ಯಾರು ಮಾಡಿದರೂ ಅದನ್ನು ಸೂಕ್ತ ರೀತಿಯಲ್ಲಿ ಪ್ರಶಂಸಿಸುವುದು ಅಪೇಕ್ಷಣೀಯವಾಗಿದೆ. ಅದು ಸತ್ಯವಿಶ್ವಾಸಿಗಳ ಕಡ್ಡಾಯ ಕರ್ತವ್ಯವಾದ ಒಳಿತುಗಳನ್ನು ಪ್ರೋತ್ಸಾಹಿಸುವುದರ ಭಾಗವಾಗಿದೆ. ತಮ್ಮ ಶಿಷ್ಯರು ಪ್ರಶಂಸನೀಯವಾದ ಕೆಲಸಗಳನ್ನು ಮಾಡಿದಾಗಲೆಲ್ಲ ಅದನ್ನು ಪ್ರಶಂಸಿಸಲು, ಅಭಿನಂದಿಸಲು ಪ್ರವಾದಿ(ಸ)ಯವರು ಹಿಂದೇಟು ಹಾಕಿರಲಿಲ್ಲ. ಆದರೆ ಆ ಪ್ರಶಂಸೆ ಮತ್ತು ಅಭಿನಂದನೆಗಳಿಗೆ ಒಂದು ಮಿತಿಯಿತ್ತು. ಪ್ರವಾದಿ(ಸ) ಎಂದೂ ವ್ಯಕ್ತಿಯನ್ನು ಅರ್ಹತೆಗಿಂತ ಅಧಿಕವಾಗಿ ಪ್ರಶಂಸಿಸುವ ಮತ್ತು ಅಭಿನಂದಿಸುವ ಕೆಲಸವನ್ನು ಮಾಡಿರಲಿಲ್ಲ. ಮೇರೆ ಮೀರಿದ ಪ್ರಶಂಸೆಯು ಒಂದು ರೀತಿಯಲ್ಲಿ ಕಾಪಟ್ಯವಾಗಿರುವುದು. ಮಾತ್ರವಲ್ಲ ಸರ್ವಸ್ತುತಿಗಳು ಅಲ್ಲಾಹನಿಗೆ ಮಾತ್ರವಾಗಿದೆ ಎಂಬುದು ಸತ್ಯವಿಶ್ವಾಸಿಗಳ ಸಾಕ್ಷ್ಯವಾಗಿದೆ. ಯಾರನ್ನೂ ಅಲ್ಲಾಹನಿಗಿಂತ ಅಧಿಕ ಸ್ತುತಿಸುವುದಾಗಲೀ, ಪ್ರಶಂಸಿಸುವುದಾಗಲಿ ಮಾಡಬಾರದೆಂದು ಪ್ರವಾದಿ ಮುಹಮ್ಮದ್‌ರು(ಸ) ಕಲಿಸಿರುವರು.

ಮುಖಸ್ತುತಿಯನ್ನು ಆಲಿಸುವುದು ಹಲವರಿಗೆ ಬಹಳ ಸಂತೋಷವನ್ನುಂಟು ಮಾಡುತ್ತದೆ. ಇಂತಹವರೇ ಮುಖಸ್ತುತಿಗೆ ಮಹತ್ವವನ್ನು ನೀಡುತ್ತಾರೆ. ವಾಸ್ತವದಲ್ಲಿ ತಮ್ಮನ್ನೂ, ತಮ್ಮ ಸದ್ಗುಣಗಳನ್ನೂ ಸಾಯಿಸುವ ಕೆಲಸವನ್ನು ಮುಖಸ್ತುತಿ ಮಾಡುವವರು ಮಾಡುತ್ತಿದ್ದಾರೆ ಎಂಬುದನ್ನು ಅವರು ಅರ್ಥ ಮಾಡಿಕೊಳ್ಳುವುದಿಲ್ಲ. ಪ್ರಶಂಸಿಸುವವರನ್ನು ಹೊಡೆದೋಡಿಸಬೇಕೆಂದು ಪ್ರವಾದಿಯವರು(ಸ) ಕಲಿಸಿರುವರು. ಮಿಕ್ದಾದ್‌ರಿಂದ ವರದಿಯಾಗಿರುವ ಮುಸ್ಲಿಮ್‌ನಲ್ಲಿರುವ ಪ್ರವಾದಿ ವಚನವೊಂದು ಈ ರೀತಿ ಇದೆ. 'ಒಮ್ಮೆ ಒಬ್ಬ ವ್ಯಕ್ತಿ ಹ.ಉಸ್ಮಾನ್(ರ)ರ ಮುಖಸ್ತುತಿ ಮಾಡುತ್ತಿದ್ದನು. ಇದನ್ನು ಕೇಳಿ ಮಿಕ್ದಾದ್ ಒಂದು ಹಿಡಿ ಮಣ್ಣನ್ನು ಮುಖಸ್ತುತಿ ಮಾಡುವವನ ಮುಖಕ್ಕೆ ಎಸೆದರು. ಏಕೆ ಈ ರೀತಿ ಮಾಡಿದಿರೆಂದು ಉಸ್ಮಾನ್(ರ) ಪ್ರಶ್ನಿಸಿದಾಗ ಮಿಕ್ದಾದ್(ರ) ಹೇಳಿದರು. ಪ್ರವಾದಿ(ಸ) ಹೇಳಿರುವರು. 'ಮುಖಸ್ತುತಿ ಮಾಡುವವರನ್ನು ಕಂಡರೆ ನೀವು ಅವರ ಮುಖಕ್ಕೆ ಮಣ್ಣನ್ನು ಎಸೆಯಿರಿ.'



# 39. ಪರಸ್ಪರ ಹಕ್ಕು ಬಾಧ್ಯತೆಗಳು

لِلْمُؤْمِنِ عَلَى الْمُؤْمِنِ سَبْعَةَ حُقُوقٍ وَاجِبَةٌ مِنَ اللهِ عَزَّ وَجَلَّ
الإِجْلَالُ لَهُ فِي عَيْنِهِ وَالْوُدُّ لَهُ فِي صَدْرِهِ وَ الْمُوَاسَاةُ لَهُ فِي مَالِهِ
وَأَنْ يُحَرِّمَ غِيبَتَهُ وَ أَنْ يَعُودَهُ فِي مَرَضِهِ وَ أَنْ يُشَيِّعَ جَنَازَتَهُ وَ
أَنْ لاَ يَقُولَ فِيهِ بَعْدَ مَوْتِهِ إِلاَّ خَيْرًا. (ابن بابويه)

"ಓರ್ವ ಸತ್ಯವಿಶ್ವಾಸಿಗೆ ಇನ್ನೋರ್ವ ಸತ್ಯವಿಶ್ವಾಸಿಯೊಂದಿಗೆ ಪ್ರತಾಪಶಾಲಿಯೂ ಅಜೇಯನೂ ಆದ ಅಲ್ಲಾಹನು ಕಡ್ಡಾಯಗೊಳಿಸಿರುವ ಏಳು ಹಕ್ಕು ಬಾಧ್ಯತೆಗಳಿವೆ. ಅವನನ್ನು ಆದರದಿಂದ ನೋಡಬೇಕು. ಮನಸ್ಸಿನಲ್ಲಿ ಅವನ ಬಗ್ಗೆ ಪ್ರೀತಿ ಇರಬೇಕು. ತನ್ನ ಸಂಪತ್ತಿನಲ್ಲಿ ಅವನಿಗೆ ಅವಕಾಶ ನೀಡಬೇಕು. ಅವನ ಬಗ್ಗೆ ಪರದೂಷಣೆ ಮಾಡುವುದನ್ನು ನಿಷಿದ್ಧಗೊಳಿಸಬೇಕು. ಅವನು ರೋಗಿಯಾದರೆ ಸಂದರ್ಶಿಸಬೇಕು. ಮರಣ ಹೊಂದಿದರೆ ಜನಾಝ ನಮಾಝ್ ನಿರ್ವಹಿಸಬೇಕು. ಮರಣಾನಂತರ ಅವನ ಬಗ್ಗೆ ಒಳ್ಳೆಯದನ್ನು ಮಾತ್ರ ಹೇಳಬೇಕು ."

(ಇಬ್ನು ಬಾಬವೈಹಿ)

ಸತ್ಯವಿಶ್ವಾಸಿಗಳ ಮಧ್ಯೆ ಪರಸ್ಪರ ಇರಬೇಕಾದ ಸಂಬಂಧಗಳ ರೂಪುರೇಷೆಗಳನ್ನು ಈ ಪ್ರವಾದಿ ವಚನದಲ್ಲಿ ವಿವರಿಸಲಾಗಿದೆ. ಇಬ್ನು ಬಾಬವೈಹಿ ಉದ್ಧರಿಸಿರುವ ಈ ಹದೀಸನ್ನು ವರದಿ ಮಾಡಿದವರಾರೆಂದು ಸ್ಪಷ್ಟವಿಲ್ಲ. ಸತ್ಯವಿಶ್ವಾಸಿಗಳು ಇತರ ಸತ್ಯವಿಶ್ವಾಸಿಗಳೊಂದಿಗೂ ಇತರರೊಂದಿಗೂ ಸೌಹಾರ್ದದೊಂದಿಗೆ ವರ್ತಿಸಬೇಕೆಂಬುದು ಒಂದು ಸಾಮಾನ್ಯ ನಿಯಮವಾಗಿದೆ. ಆದರೆ ಎದುರು ಪಕ್ಷದವರು ಈ ಸೌಹಾರ್ದಕ್ಕೆ ಭಂಗ ತರುತ್ತಲೂ ಶತ್ರುಗಳಂತೆ ವರ್ತಿಸುತ್ತಲೂ ಇರುವಾಗ ಸತ್ಯವಿಶ್ವಾಸಿಗಳು ಕೂಡಾ ಅವರನ್ನು ಅದೇ ರೀತಿ ಎದುರಿಸಬೇಕಾಗಿ ಬರುವುದು ಬಹಳ ದೌರ್ಭಾಗ್ಯಕರ ಅವಸ್ಥೆಯಾಗಿದೆ. ಅನೇಕ ಸಂದರ್ಭಗಳಲ್ಲಿ ಇಂತಹ ಪರಿಸ್ಥಿತಿ ಬಂದೊದಗುವುದು ಸ್ವತಃ ಸತ್ಯವಿಶ್ವಾಸಿಗಳ ದೌರ್ಬಲ್ಯ ಮತ್ತು ಕೆಟ್ಟ ನಡೆ ನುಡಿಯ ಕಾರಣದಿಂದಾಗಿರುವುದು. ಸತ್ಯವಿಶ್ವಾಸಿಗಳು ಸತ್ಯವಿಶ್ವಾಸದ ಉದ್ದೇಶವನ್ನು ಸರಿಯಾಗಿ

ಅನುಸರಿಸಿ ಜೀವಿಸದೆ ಅವಿಶ್ವಾಸಿಗಳ ಸ್ವಭಾವ ಚರ್ಯೆಗಳನ್ನು ಅಳವಡಿಸಿಕೊಂಡಾಗ, ಅವರ ಮೂಲವು ಶಿಥಿಲಗೊಳ್ಳುವಾಗ, ಇತರ ಸಮೂಹಗಳಿಗೆ ಅವರನ್ನು ಎದುರಿಸಲು ಮತ್ತು ಅವರ ಮೇಲೆ ದಾಳಿ ನಡೆಸಲು ಧೈರ್ಯ ಮತ್ತು ಪ್ರಚೋದನೆ ಸಿಗುತ್ತದೆ. ಆರೋಗ್ಯಕರವಾದ ರೀತಿಯಲ್ಲಿ ಪರಸ್ಪರರ ಮಧ್ಯೆ ಇರುವ ಸಂಬಂಧವನ್ನು ಭದ್ರಪಡಿಸದೆ ಹೋದರೆ ಎಷ್ಟು ಸಹನೆ ಮತ್ತು ಸೌಹಾರ್ದದೊಂದಿಗೆ ವರ್ತಿಸಿದರೂ ಅವರು ಇತರ ಜನವಿಭಾಗಗಳ ಅಕ್ರಮ ಮತ್ತು ದಬ್ಬಾಳಿಕೆಗೆ ಒಳಗಾಗ ಬೇಕಾಗುವುದು.

ಒಂದು ಸಮುದಾಯವು ಉನ್ನತಿಯ ಮೆಟ್ಟಿಲುಗಳನ್ನು ಏರಲು ಸಾಧ್ಯವಾಗುವುದು ಆ ಸಮುದಾಯದ ಪರಸ್ಪರ ಐಕ್ಯ ಮತ್ತು ಸಹಕಾರದಿಂದ ಕೂಡಿದ ಪ್ರಯತ್ನದಿಂದಾಗಿರುವುದು. ವ್ಯಕ್ತಿಗಳು ವೈಯಕ್ತಿಕವಾಗಿ ಎಷ್ಟು ಸಾಮರ್ಥ್ಯವುಳ್ಳವರಾಗಿದ್ದರೂ ಪರಸ್ಪರ ಸಂಬಂಧಗಳನ್ನು ಸರಿಪಡಿಸದೆ, ಸಹಕಾರಿಗಳಾಗದೆ ಅವರಿಗೆ ಮುಂದುವರಿಯಲು ಸಾಧ್ಯವಿಲ್ಲ. ವೈಜ್ಞಾನಿಕ ಕ್ಷೇತ್ರದಲ್ಲೂ, ಶೈಕ್ಷಣಿಕ, ಸೇವಾರಂಗ, ಆರ್ಥಿಕ ರಂಗಗಳಲ್ಲೂ, ಸೈದ್ಧಾಂತಿಕ ರಂಗದಲ್ಲೂ ಅವರು ಹಿಂದೆ ಉಳಿಯಬೇಕಾಗಿ ಬರುವುದು. ಇದಕ್ಕೆ ವಿರುದ್ಧವಾಗಿ ವೈಯಕ್ತಿಕವಾಗಿ ಜನರು ಎಷ್ಟೇ ಹಿಂದುಳಿದಿದ್ದರೂ, ಎಲ್ಲರೂ ಒಟ್ಟು ಸೇರಿ ಚಿಂತಿಸಿ ಕೆಲಸ ಮಾಡಿದರೆ ಅವರ ಸಣ್ಣ ಮಟ್ಟದ ಜ್ಞಾನವೇ ಅವರನ್ನು ವಿದ್ವಾಂಸರಿಗಿಂತಲೂ ಮುಂದಕ್ಕೊಯ್ಯುವುದು.

ಈ ಲೋಕದಲ್ಲಿ ಮನುಷ್ಯರ ಮಧ್ಯೆ ಸಮಾನತೆ ಮತ್ತು ಸಹಾನುಭೂತಿಯನ್ನು ಉಂಟು ಮಾಡಲು ಸಾಧ್ಯವಿರುವ ಯಾವುದಾದರೂ ಶಕ್ತಿಯಿದ್ದರೆ ಅದು ಪ್ರೀತಿ ಮತ್ತು ಸೌಹಾರ್ದತೆಯಿಂದ ಕೂಡಿದ ಪರಸ್ಪರ ಸಂಬಂಧಕ್ಕೆ ಮಾತ್ರವಿದೆ. ಯಾವುದಾದರೂ ಒಂದು ವಿಭಾಗಕ್ಕೆ ಸರ್ವಾಧಿಕಾರ ಸಿಕ್ಕಿದ ಕಾರಣದಿಂದ ಅಥವಾ ಸಂಪತ್ತನ್ನು ಎಲ್ಲರಿಗೂ ಸಮಾನವಾಗಿ ಪಾಲು ಮಾಡುವ ವ್ಯವಸ್ಥೆಯಿಂದ ಸಮಾನತೆಯನ್ನು ಪಾಲಿಸಲು ಸಾಧ್ಯವಾಗಿಲ್ಲ. ಇನ್ನು ಮುಂದೆಯೂ ಅದನ್ನು ಸಾಧಿಸಲು ಸಾಧ್ಯವಿಲ್ಲವೆಂಬುದು ಇಂದು ಎಲ್ಲರಿಗೂ ಮನದಟ್ಟಾಗಿ ಬಿಟ್ಟಿರುತ್ತದೆ.

ಈ ವಾಸ್ತವಿಕತೆಗಳನ್ನು ಮುಂದಿಟ್ಟುಕೊಂಡು ಆಲೋಚಿಸಿದರೆ ಮೇಲೆ ಉದ್ಧರಿಸಿದ ಪ್ರವಾದಿ ವಚನದ ಮಹತ್ವವು ತಿಳಿಯುತ್ತದೆ. ಇದೇ ರೀತಿಯ ಆಶಯವನ್ನು ಹೊಂದಿರುವ ಅನೇಕ ಪ್ರವಾದಿ ವಚನಗಳಿವೆ. 'ಸತ್ಯವಿಶ್ವಾಸಿಗಳು ಒಂದು ಶರೀರದಂತೆ, ಅದರ ಒಂದು ಅಂಗಕ್ಕೆ ನೋವಾದರೂ ಇಡೀ ಶರೀರವೂ ನೋವನ್ನನುಭವಿಸುತ್ತದೆ.' 'ಸತ್ಯವಿಶ್ವಾಸಿಗಳು ಒಂದು ಸುಭದ್ರ ಕಟ್ಟಡದಂತೆ. ಅದರ ಒಂದು ಕಲ್ಲು ಕಿತ್ತು ಹೋದರೂ ಇಡೀ ಕಟ್ಟಡವು ಉರುಳಿ ಬೀಳುವುದು.' 'ನೆರೆಮನೆಯವನು ಹಸಿವಿನಿಂದ ಮಲಗಿರುವಾಗ ಹೊಟ್ಟೆತುಂಬಾ ತಿನ್ನುವವನು ನನ್ನ ಸಮುದಾಯಕ್ಕೆ ಸೇರಿದವನಲ್ಲ.' ಮುಂತಾದ ವಚನಗಳು ಇದಕ್ಕೆ ಉದಾಹರಣೆಗಳಾಗಿವೆ.

ಇಲ್ಲಿ ಸತ್ಯವಿಶ್ವಾಸಿಗಳ ಪರಸ್ಪರ ಸಂಬಂಧವನ್ನು ಸುಭದ್ರಗೊಳಿಸುವ ಏಳು ವಿಷಯಗಳನ್ನು ಹೇಳಲಾಗಿದೆ. ಈ ವಿಷಯಗಳನ್ನು ಸತ್ಯವಿಶ್ವಾಸಿಗಳು ಪಾಲಿಸಿದರೆ ಒಳಿತೆಂದು ಹೇಳಿರುವುದಲ್ಲ. ಬದಲಾಗಿ ಇವುಗಳನ್ನು ಸತ್ಯವಿಶ್ವಾಸಿಗಳ ಹಕ್ಕುಗಳೆಂದು ಹೇಳಲಾಗಿದೆ. ಅದು ಧಾರ್ಮಿಕ

ಹಕ್ಕು ಮಾತ್ರವಲ್ಲ ಕಡ್ಡಾಯ ಹಕ್ಕುಗಳೆಂದು ವಿಶೇಷವಾಗಿ ಸೂಚಿಸಲಾಗಿದೆ. ಕಡ್ಡಾಯ ಹಕ್ಕುಗಳೆಲ್ಲವೂ ಅಲ್ಲಾಹನಿಂದ ನಿರ್ದೇಶಿಸಲ್ಪಟ್ಟವುಗಳೆಂಬ ವಿಷಯದಲ್ಲಿ ಸತ್ಯವಿಶ್ವಾಸಿಗೆ ಯಾವುದೇ ಸಂಶಯವಿಲ್ಲ. ಆದರೂ ಈ ಹದೀಸಿನಲ್ಲಿ ಅಲ್ಲಾಹನೇ ಇವುಗಳನ್ನು ಕಡ್ಡಾಯಗೊಳಿಸಿರುವನೆಂದು ಕೂಡಾ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಇದರಿಂದ ಈ ಏಳು ಹಕ್ಕುಗಳ ಮಹತ್ವ ಮತ್ತು ಗೌರವವನ್ನು ಮನದಟ್ಟು ಮಾಡಬಹುದಾಗಿದೆ.

ಒಬ್ಬ ಸತ್ಯವಿಶ್ವಾಸಿಯ ದೃಷ್ಟಿಯಲ್ಲಿ ಇನ್ನೋರ್ವ ಸತ್ಯವಿಶ್ವಾಸಿ ಗೌರವಾರ್ಹನಾಗಿರಬೇಕೆಂದು ಪ್ರಥಮವಾಗಿ ಹೇಳಲಾಗಿದೆ. ಅಂದರೆ ತನ್ನ ಸಹೋದರನನ್ನು ಗೌರವದೊಂದಿಗೆ ನೋಡಬೇಕು ಎಂಬುದು ಒಬ್ಬ ಸತ್ಯವಿಶ್ವಾಸಿಯ ಪ್ರಥಮ ಹಕ್ಕಾಗಿದೆ. ಮನುಷ್ಯನೆಂಬ ನೆಲೆಯಲ್ಲಿ ವ್ಯಕ್ತಿಗಿರುವ ಮಹತ್ವವನ್ನು ಅಂಗೀಕರಿಸಿ ಅದಕ್ಕನುಗುಣವಾಗಿ ವ್ಯವಹರಿಸಬೇಕು. ಇನ್ನೊಬ್ಬ ಸತ್ಯವಿಶ್ವಾಸಿ ನಿಮ್ಮ ಪತ್ನಿಯಾಗಿರಬಹುದು, ಸೇವಕನಾಗಿರಬಹುದು, ಸಹೋದರನಾಗಿರಬಹುದು, ಮಗನಾಗಿರಬಹುದು ಅಥವಾ ನಿಮಗಿಂತ ದರಿದ್ರ, ವಿದ್ಯಾಭ್ಯಾಸ ಕಡಿಮೆಯಿರುವವನು, ಸಾಮರ್ಥ್ಯವಿಲ್ಲದವನೂ ಆಗಿರಬಹುದು. ಇವ್ಯಾವುವೂ ಮನುಷ್ಯನೆಂಬ ನೆಲೆಯಲ್ಲಿ ಅವನ ಗೌರವ ಮತ್ತು ಅಂತಸ್ತನ್ನು ಬಾಧಿಸುವುದಿಲ್ಲ. ಆದಮರ ಎಲ್ಲ ಸಂತಾನಗಳನ್ನು ಅಲ್ಲಾಹನು ಗೌರವಾರ್ಹ ಗೊಳಿಸಿದ್ದಾನೆ ಎಂದು ಪವಿತ್ರ ಕುರ್‌ಆನ್ ಹೇಳುತ್ತದೆ. ಲೋಕನಿಯಂತ್ರಕನಾದ ಅಲ್ಲಾಹನು ಗೌರವಿಸಿರುವ ಓರ್ವ ಮನುಷ್ಯನು ಅಲ್ಲಾಹನ ಮೇಲೆ ವಿಶ್ವಾಸವಿರುವ ವಿನೀತನಾದ ಓರ್ವ ದಾಸನ ದೃಷ್ಟಿಯಲ್ಲಿ ಅನಾದರಣೀಯನಾಗಬಾರದು.

ಸಮಾಜದಲ್ಲಿ ವ್ಯಕ್ತಿಗಳ ಅಂತಸ್ತನ್ನು ಹೆಚ್ಚಿಸುವುದರಲ್ಲೂ ಸಮಾನತೆಯನ್ನುಂಟು ಮಾಡುವುದರಲ್ಲೂ ಪರಸ್ಪರರನ್ನು ಗೌರವಿಸುವುದಕ್ಕೆ ಬಹಳ ಪ್ರಮುಖವಾದ ಪಾತ್ರವಿದೆ. ಈ ರೀತಿಯ ಗೌರವಾದರ ಇರುವ ಸಮಾಜದಲ್ಲಿ ವರ್ಣ ಭೇಧ, ಜಾತಿ ವ್ಯವಸ್ಥೆ ಬೆಳೆದು ಬರಲಾರದು. ಜಾತಿ ಪದ್ಧತಿ, ವರ್ಣಾಶ್ರಮ ವ್ಯವಸ್ಥೆ ಇರುವ ಸಮಾಜದಲ್ಲಿ ಈ ರೀತಿಯ ಪರಸ್ಪರ ಗೌರವಾದರ ಮತ್ತು ಅದರಿಂದ ಉಂಟಾಗುವ ಮನುಷ್ಯ ಶ್ರೇಷ್ಠತೆ, ಸಮಾನತೆ ಉಂಟಾಗಲು ಸಾಧ್ಯವಿಲ್ಲ.

ಸೌಹಾರ್ದತೆ ಮತ್ತು ಸಮಾನತೆಯ ಆರಂಭದ ಮೆಟ್ಟಿಲು ವ್ಯಕ್ತಿಗಳ ಪರಸ್ಪರ ಗೌರವಾದರಗಳಾಗಿವೆ. ಇತರರನ್ನು ನಿಂದ್ಯರಂತೆ, ತನಗಿಂತ ಕೆಳಗಿನವರಂತೆ ನೋಡುವವರಿಗೆ ಅವರನ್ನು ಸಮಾನತೆಯಿಂದ ನೋಡಲು, ಪ್ರಾಮಾಣಿಕವಾಗಿ ಸೌಹಾರ್ದವನ್ನು ಬೆಳೆಸಲು ಸಾಧ್ಯವಿಲ್ಲ. ಪರಸ್ಪರರನ್ನು ಗೌರವಿಸುವುದು ಆರೋಗ್ಯಪೂರ್ಣ ವ್ಯಕ್ತಿ ಸಂಬಂಧದ ಬಾಗಿಲಾಗಿದೆ. ಅದರ ಮೂಲಕ ಒಳಹೋಗುವವರಿಗೇ ಪರಸ್ಪರ ಸ್ನೇಹ ಸಂಬಂಧ ಬೆಳೆಸಲು ಸಾಧ್ಯ, ಆದುದರಿಂದಲೇ ಸತ್ಯವಿಶ್ವಾಸಿಯ ಮೊದಲ ಕಡ್ಡಾಯ ಸ್ವಭಾವವಾಗಿ ಅಲ್ಲಾಹನು ಪರಸ್ಪರ ಗೌರವಾದರಗಳನ್ನು ನಿಶ್ಚಯಿಸಿರುವನು.

ಮನಸ್ಸಿನಲ್ಲಿ ಇತರರ ಬಗ್ಗೆ ಪ್ರೀತಿ ಇರುವುದು ಎರಡನೆಯ ಹಕ್ಕಾಗಿದೆ. ಮೊದಲ ಹಕ್ಕನ್ನು ಸರಿಯಾಗಿ ಪಾಲಿಸಿದವರಿಗೆ ಮಾತ್ರ ಈ ಎರಡನೆಯ ಹಕ್ಕನ್ನು ಪೂರ್ತಿಗೊಳಿಸಲು ಸಾಧ್ಯ. ಪರಸ್ಪರರ ಬಗ್ಗೆ ಇರುವ ಗೌರವವು ಬರೇ ನಾಟಕವಾದರೆ ಸಾಲದು. ಉಚ್ಚ-ನೀಚತೆಯ

ಭಾವವೂ ಅಲ್ಲಿರಬಾರದು. ಬದಲಾಗಿ ನಿಷ್ಕಳಂಕವಾಗಿ ಗೌರವವನ್ನು ನೀಡಬೇಕು. ಹಾಗೆ ನೀಡುವಾಗ ಅದು ಪರಿಮಿತವಾಗಿರಲೂ ಬಾರದು. ಏಕೆಂದರೆ ಅದು ಪರಸ್ಪರ ಸ್ನೇಹವಾಗಿ ಬೆಳೆಯಬೇಕು. ಪರಸ್ಪರ ಪ್ರೀತಿಸಬೇಕು ಎಂಬ ಎರಡನೆಯ ಹಕ್ಕು, ಪರಸ್ಪರ ಗೌರವಿಸಬೇಕು ಎಂಬುದರ ವಿಕಸಿತ ರೂಪವೇ ಆಗಿದೆ.

ಮೂರನೆಯದಾಗಿ ಪ್ರಸ್ತಾಪಿಸಲ್ಪಟ್ಟಿರುವುದು ಸಂಪತ್ತಿನ ಸಮಾನತೆಯಾಗಿದೆ. ವ್ಯಕ್ತಿಯ ಒಡೆತನದಲ್ಲಿರುವ ಸೊತ್ತುಗಳಲ್ಲಿ ಇತರರಿಗೂ ಸಮಾನವಾದ ಅಧಿಕಾರವನ್ನು ನೀಡಬೇಕು ಎಂಬುದು ಇದರ ಅರ್ಥವಲ್ಲ, ಅದು ಕೃತಕ ಸಮಾನತೆಯಾಗುತ್ತದೆ. ಜೀವನದ ಪ್ರಾಥಮಿಕ ಅವಶ್ಯಕತೆಗಳನ್ನು ಪೂರೈಸುವ ವಿಷಯದಲ್ಲಿ ವ್ಯಕ್ತಿಯು ಸಂಕಷ್ಟದಲ್ಲಿದ್ದರೆ, ಆಗ ಇನ್ನೊಬ್ಬ ವ್ಯಕ್ತಿಯ ಸಂಪತ್ತಿನಲ್ಲಿಯೂ ಅವನಿಗೆ ಸಮಾನವಾದ ಅಧಿಕಾರ ಉಂಟಾಗುತ್ತದೆ ಎಂಬುದನ್ನು ಇಲ್ಲಿ ಉದ್ದೇಶಿಸಲಾಗಿದೆ. ನೆರೆಮನೆಯವರು ಹಸಿದಿರುವಾಗ, ನಾವು ಹೊಟ್ಟೆ ತುಂಬಾ ತಿಂದು ಮಲಗಬಾರದು. ನೆರೆಯುವನ ಹಸಿವನ್ನು ನೀಗಿಸಲು ಆಗತ್ಯವಾದ ಆಹಾರವನ್ನು ನೀಡಬೇಕು. ಇದಕ್ಕೆ ಬದಲಾಗಿ ತನ್ನ ಸಂಪತ್ತಿನಿಂದ ಅರ್ಧಪಾಲನ್ನು ಅವನಿಗೆ ನೀಡಬೇಕು ಎಂಬುದು ಇದರರ್ಥವಲ್ಲ. ಸಂಪತ್ತನ್ನು ಗಳಿಸುವ ಮತ್ತು ಸಂಗ್ರಹಿಸಿಡುವ ಕೆಲಸವನ್ನು ಪ್ರತಿಯೊಬ್ಬನೂ ತನ್ನ ಸಾಮರ್ಥ್ಯಕ್ಕನುಗುಣವಾಗಿ ಮಾಡಬಹುದಾಗಿದೆ. ಇದನ್ನು ಇಸ್ಲಾಮ್ ತಡೆದಿಲ್ಲ, ಪ್ರೋತ್ಸಾಹಿಸುತ್ತದೆ. ಆದರೆ ಅವನು ಸಂಪಾದಿಸಿ ಇಟ್ಟುಕೊಂಡಿರುವುದರಲ್ಲಿ, ಸಾಕಷ್ಟು ಸಂಪಾದನೆ ಮಾಡಲು ಸಾಧ್ಯವಾಗದ ಇತರರ ಮೂಲ ಅವಶ್ಯಕತೆಗಳನ್ನು ಪೂರ್ತಿಗೊಳಿಸಲು ಸಹಾಯ ಮಾಡಬೇಕು. ಇದು ಪ್ರಸಕ್ತವೂ, ಮಹತ್ವವುಳ್ಳ ವಿಷಯವೂ ಆಗಿದೆ. ಹೆಚ್ಚು ಸಂಪಾದಿಸಲು ಸಾಧ್ಯವಿರುವವರನ್ನು ಪ್ರೋತ್ಸಾಹಿಸಿರುವುದು ಇದೇ ಕಾರಣಕ್ಕಾಗಿದೆ. ಇದನ್ನು ಬಿಟ್ಟು ವ್ಯಕ್ತಿ ಸ್ವಂತ ಜೀವನ ಸೌಕರ್ಯಗಳನ್ನು ಕೇವಲ ತನಗಾಗಿ ಮಾತ್ರ ಸಂಗ್ರಹಿಸಿಡುತ್ತಾ ಹೋಗುವುದಲ್ಲ.

ಸಂಪತ್ತಿನ ವಿಷಯದಲ್ಲಿ ಪಾಲಿಸಬೇಕೆಂದು ಆದೇಶಿಸಲ್ಪಟ್ಟಿರುವ ಈ ಸಮಾನತೆಯನ್ನು ಕಾನೂನಿನ ಮೂಲಕ ಅಥವಾ ಅಧಿಕಾರ ಬಲ ಪ್ರಯೋಗಿಸಿ ಜಾರಿಗೊಳಿಸಬೇಕಾಗಿಲ್ಲ. ಈ ಮೊದಲು ಪ್ರಸ್ತಾಪಿಸಿರುವ ಪರಸ್ಪರರನ್ನು ಗೌರವಿಸಬೇಕು ಮತ್ತು ಪ್ರೀತಿಸಬೇಕು ಎಂಬುದರ ಪ್ರಾಯೋಗಿಕ ರೂಪ ಇದಾಗಿದೆ. ಪರಸ್ಪರರನ್ನು ಗೌರವಿಸುವ ಮತ್ತು ಪ್ರೀತಿಸುವ ಇಬ್ಬರು ವ್ಯಕ್ತಿಗಳ ಪೈಕಿ ಒಬ್ಬನು ಸುಖಾಡಂಬರಗಳಲ್ಲಿ ತಲ್ಲೀನನಾಗಿರುವಾಗ ಇನ್ನೊಬ್ಬನು ಸಂಕಷ್ಟದಲ್ಲಿರುವ ಅವಸ್ಥೆಯುಂಟಾಗಲು ಸಾಧ್ಯವಿಲ್ಲ. ಸುಖ ದುಃಖಗಳಲ್ಲಿ ಪರಸ್ಪರ ಸಹಭಾಗಿಗಳಾಗಲು ಪ್ರೀತ್ಯಾದರವು ಅವರನ್ನು ನಿರ್ಬಂಧಿಸುತ್ತದೆ.

ಇನ್ನೊಬ್ಬ ಸತ್ಯವಿಶ್ವಾಸಿಯ ಬಗ್ಗೆ ಪರದೂಷಣೆಯನ್ನು ಮಾಡುವುದನ್ನು ನಿಷಿದ್ಧವಾಗಿಸುವುದು ಎಂಬುದು ನಾಲ್ಕನೆಯ ಹಕ್ಕಾಗಿದೆ. ಪರದೂಷಣೆ ಎಂಬುದು ಪರಸ್ಪರ ಪ್ರೀತಿ ಮತ್ತು ಗೌರವಾದರಗಳಿಗೆ ಹಾನಿಯನ್ನುಂಟು ಮಾಡುವ ವಿಷಯವಾಗಿದೆ. ಪರದೂಷಣೆ ಮಾಡುವುದಿಲ್ಲ ಅಥವಾ ಪರದೂಷಣೆ ಮಾಡಬಾರದು ಎಂದು ಇಲ್ಲಿ ಹೇಳಲಾಗಿಲ್ಲ, ಪರದೂಷಣೆಯನ್ನು

ನಿಷಿದ್ಧಗೊಳಿಸಬೇಕು ಎಂದು ಇಲ್ಲಿ ಹೇಳಲಾಗಿದೆ. ಪರರನ್ನು ದೂಷಿಸುವುದರಿಂದ, ಅದನ್ನು ಆಲಿಸುವುದರಿಂದ ಮತ್ತು ಅದಕ್ಕೆ ಅವಕಾಶಗಳನ್ನು ಉಂಟು ಮಾಡುವುದರಿಂದ ಎಲ್ಲಾ ರೀತಿಯಲ್ಲಿ ದೂರ ಉಳಿಯಬೇಕೆಂಬುದು ಇದರ ಉದ್ದೇಶವಾಗಿದೆ.

ರೋಗಿಯಾದರೆ ಸಂದರ್ಶಿಸಿ ಸಾಂತ್ವನವನ್ನು ನೀಡುವುದು ಆರನೆಯ ಹಕ್ಕಾಗಿದೆ. ಇದು ಕೂಡಾ ಪ್ರೀತಿ ಮತ್ತು ಗೌರವಾದರಗಳ ಭಾಗವಾಗಿದೆ. ಓರ್ವ ರೋಗಿಯ ಮಟ್ಟಿಗೆ ಪ್ರೀತಿಸುವವರು ಅವರನ್ನು ಸಂದರ್ಶಿಸುವುದು, ಸಾಂತ್ವನವನ್ನು ನೀಡುವುದು ಅವನ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತದೆ. ಅದು ಸಂದರ್ಶಕ ಮತ್ತು ರೋಗಿಯ ಮಧ್ಯೆ ಅವಿನಾವಭಾವ ಸಂಬಂಧವನ್ನುಂಟು ಮಾಡುತ್ತದೆ. ರೋಗಿಗೆ ಸಂಬಂಧ ಪಟ್ಟಂತೆ ಇದು ಬಹಳ ಉತ್ತಮ ಚಿಕಿತ್ಸೆಯೂ ಆಗಿದೆ.

ಓರ್ವ ಸತ್ಯವಿಶ್ವಾಸಿಯ ಉಪಸ್ಥಿತಿಯಲ್ಲಿ ಇನ್ನೋರ್ವ ಸತ್ಯವಿಶ್ವಾಸಿಯ ಮೃತ ದೇಹವು ಅನಾಥವಾಗಬಾರದು. ಅವನ ಕುಟುಂಬವು ಕಡೆಗಣಿಸಲ್ಪಡಬಾರದು. ಓರ್ವ ಸಹೋದರನು ಮೃತಪಟ್ಟರೆ ಅವನನ್ನು ದಫನ ಮಾಡುವ ಎಲ್ಲಾ ಏರ್ಪಾಡುಗಳನ್ನು ಮಾಡುವುದರ ಜೊತೆಗೆ ಅವನ ಬಂಧು ಬಾಂಧವರನ್ನು ಸಮಾಧಾನ ಪಡಿಸುವುದು ಇನ್ನೋರ್ವ ಸತ್ಯವಿಶ್ವಾಸಿಯ ಕಡ್ಡಾಯ ಕರ್ತವ್ಯವಾಗಿದೆ.

ಮರಣ ಹೊಂದಿದವರ ಬಗ್ಗೆ ದೋಷವನ್ನೇನೂ ಹೇಳಬಾರದು ಎಂಬುದು ಏಳನೆಯ ಹಕ್ಕಾಗಿದೆ. ಮರಣ ಹೊಂದಿದವರು ಅವರ ಕರ್ಮಗಳ ಜೊತೆ ಅಲ್ಲಾಹನ ಬಳಿ ಹೋಗಿಯಾಯಿತು. ಇನ್ನು ಅಲ್ಲಾಹನು ಅವರ ವಿಚಾರಣೆಯನ್ನು ನಡೆಸುವನು. ಜೀವಂತವಿರುವವರು ಅವರ ಕುಂದು ಕೊರತೆಗಳನ್ನು ಹೇಳುತ್ತಿರುವುದರಿಂದ ಯಾವುದೇ ಪ್ರಯೋಜನವಿಲ್ಲ, ಮಾತ್ರವಲ್ಲ ಅವರ ಪಾಪಗಳ ಬಗ್ಗೆ ಹೇಳುತ್ತಿರುವುದರಿಂದ ಅವರ ಕುಟುಂಬಕ್ಕೆ ನೋವುಂಟಾಗುತ್ತದೆ. ಇದರಿಂದ ಅವರ ಮಧ್ಯೆ ಶತ್ರುತ್ವ ಉಂಟಾಗಬಹುದು. ಕೆಡುಕುಗಳನ್ನು ತಡೆಯಲು ಅಥವಾ ಕೆಟ್ಟು ಹೋದ ವ್ಯಕ್ತಿಯನ್ನು ಉತ್ತಮ ಪಡಿಸಲು ಉಪಕಾರವಾಗುವುದಾದರೆ ಮಾತ್ರ ಕೆಟ್ಟ ಕೆಲಸಗಳನ್ನು ಬಹಿರಂಗ ಪಡಿಸಲು ಇಸ್ಲಾಮ್ ಅನುಮತಿಯನ್ನು ನೀಡುತ್ತದೆ. ಇಲ್ಲದಿದ್ದರೆ ಅದು ಕೆಡುಕಿಗೆ ಪ್ರೋತ್ಸಾಹವನ್ನು ನೀಡಿದಂತೆ ಆಗುತ್ತದೆ.

ಆದರೆ ಮರಣ ಹೊಂದಿದವರ ಒಳಿತುಗಳನ್ನು ನೆನಪಿಸಿಕೊಳ್ಳುತ್ತಿರಬಹುದು. ಮಾತ್ರವಲ್ಲ ಸ್ಮರಣೆ ಮಾಡಿಕೊಳ್ಳಬೇಕಾಗಿದೆ. ಅದು ಒಳಿತಿಗಿರುವ ಪ್ರೋತ್ಸಾಹವಾಗಿದೆಯಲ್ಲವೇ? ಮರಣ ಹೊಂದಿದವರ ಒಳಿತುಗಳನ್ನು ಹೇಳುತ್ತಿದ್ದರೆ, ಅದು ಜೀವಂತವಿರುವವರನ್ನು ಒಳಿತಿನೆಡೆಗೆ ಪ್ರೋತ್ಸಾಹಿಸುತ್ತದೆ. ಜೀವಂತವಿರುವವರಿಗೆ ಅವರ ಬಗ್ಗೆ ಪ್ರೀತಿ, ಗೌರವಾದರ ಬೆಳೆಯಲು ಮತ್ತು ಅವರಿಗಾಗಿ ಪ್ರಾರ್ಥಿಸಲು ಇದು ಸಹಾಯ ಮಾಡುತ್ತದೆ. ಇದು ಎರಡೂ ಕಡೆಯವರಿಗೂ ಪ್ರಯೋಜನಕಾರಿಯಾದ ಕೆಲಸಗಳಾಗಿವೆ.



# 40. ಪೀಡಿಸಬಾರದು

عن سعدبن مالك رَضِيَ اللَّهُ عَنْهُ أَنَّ رَسُولَ اللَّهِ ﷺ قَالَ:
لَا ضَرَرَ وَلَا ضِرَارَ. (ابن ماجة)

ಸಅದ್ ಬಿನ್ ಮಾಲಿಕ್(ರ) ವರದಿ ಮಾಡುತ್ತಾರೆ: ಪ್ರವಾದಿ(ಸ) ಹೇಳಿರುವರು– 'ದ್ರೋಹ ಬಗೆಯ ಬಾರದು. ಪ್ರತಿಯಾಗಿಯೂ ದ್ರೋಹಿಸಬಾರದು.' (ಇಬ್ನು ಮಾಜ)

ಇಸ್ಲಾಮೀ ಶರೀಅತ್‌ನ ಬಹಳ ಪ್ರಾಮುಖ್ಯವಾದ ಮೂಲ ತತ್ವಗಳ ಪೈಕಿ ಒಂದನ್ನು ಈ ಸಣ್ಣ ಹದೀಸ್ ನಮಗೆ ಕಲಿಸಿಕೊಡುತ್ತದೆ. 'ದರರ್' ಎಂಬ ಅರಬಿ ಪದಕ್ಕೆ ದ್ರೋಹ, ಪೀಡನೆ, ಕಷ್ಟ ಕೊಡುವುದು ಮುಂತಾದ ಅರ್ಥಗಳಿವೆ. ತನಗೂ ಇತರರಿಗೂ ದ್ರೋಹ ಉಂಟಾಗುವ ಯಾವ ಕೆಲಸವನ್ನೂ ಸತ್ಯವಿಶ್ವಾಸಿ ಮಾಡಬಾರದು. ಬಹಳ ಸಂಕಷ್ಟಮಯವಾದ ಪರಿಸ್ಥಿತಿಯನ್ನು ಎದುರಿಸಬೇಕಾಗಿ ಬಂದರೂ ಅದರಿಂದ ಮುಕ್ತನಾಗುವ ಮಾರ್ಗವನ್ನು ಹುಡುಕಬೇಕು. ಬೇರೆ ಯಾರಿಂದಲಾದರೂ ದ್ರೋಹಕ್ಕೆ ಒಳಗಾದರೆ ಪ್ರತಿಕ್ರಿಯೆಯಾಗಿ ಅದೇ ರೀತಿಯಲ್ಲಿ ದ್ರೋಹಿಸಬಾರದು. ಇದು ಈ ವಚನದ ಸಾಮಾನ್ಯ ಅರ್ಥವಾಗಿದೆ.

ಇಲ್ಲಿ 'ದರರ್' ಎಂದು ಹೇಳಿರುವುದು ಸಾಮಾನ್ಯವಾಗಿ ನಾವು ಅಕ್ರಮ, ಕೆಡುಕು ಎಂದು ಭಾವಿಸುವವುಗಳ ಕುರಿತಲ್ಲ. ಓರ್ವನು ಇನ್ನೊಬ್ಬನನ್ನು ಹೊಡೆಯುವುದು ಅಥವಾ ಅವನ ಹಣವನ್ನು ಕಸಿಯುವಂತಹ ಕೆಲಸವನ್ನು ಮಾಡಿದರೆ ಅದು ದ್ರೋಹ ಬಗೆದಂತೆಯೇ ಆಗಿದ್ದರೂ ಸಾಂಕೇತಿಕವಾಗಿ ಅದು 'ದರರ್' ಅಲ್ಲ. ಅದು ಅಕ್ರಮ ಮತ್ತು ಪಾಪಕೃತ್ಯವಾಗಿದೆ. ಅದಕ್ಕೆ ಅದರದೇ ಆದ ನಿಯಮಗಳಿವೆ. ಓರ್ವನು ಪ್ರತ್ಯಕ್ಷವಾಗಿ ನಿಯಮವನ್ನು ಉಲ್ಲಂಘಿಸುವುದು ಅಥವಾ ಇತರರ ಮೇಲೆ ಅಕ್ರಮ ನಡೆಸುವುದು ಮಾಡದೆ ಇತರರನ್ನು ಉಪದ್ರವಿಸುವಂತಹ ಕೆಲಸಗಳಲ್ಲಿ ನಿರತನಾಗುವುದೇ 'ದರರ್'. ಉದಾಹರಣೆಗೆ ಪತ್ನಿಯೊಂದಿಗೆ ಜಗಳವಾಡಿ ಅವಳೊಂದಿಗೆ ಇನ್ನು ಮುಂದೆ ಸಹ ಜೀವನವನ್ನು ನಡೆಸುವುದಿಲ್ಲವೆಂದು ತೀರ್ಮಾನಿಸಿದ ಒಬ್ಬ ವ್ಯಕ್ತಿ, ಆ ಸ್ತ್ರೀಯು ಬೇರೆ ಯಾರನ್ನೂ ವಿವಾಹವಾಗಿ ರಕ್ಷಣೆ ಹೊಂದಬಾರದೆಂಬ ಉದ್ದೇಶದಿಂದ ಅವಳನ್ನು ನಿಯಮ ಪ್ರಕಾರ ವಿವಾಹ ವಿಚ್ಛೇದಿಸದೆ ಇಟ್ಟುಕೊಳ್ಳುವುದು. ತನ್ನ ಮರಣಾನಂತರ

ನಿಯಮ ಪ್ರಕಾರ ತನ್ನ ವಾರೀಸು ಹಕ್ಕನ್ನು ಪಡೆಯಬೇಕಾದವರಿಗೆ ಸಿಗಬಾರದೆಂಬ ಉದ್ದೇಶದಿಂದ ಅದನ್ನು ಅನರ್ಹರ ಮಧ್ಯೆ ಹಂಚಿ ಬಿಡುವುದು ಕೂಡಾ 'ದರರ್'ಗೆ ಉದಾಹರಣೆಗಳಾಗಿವೆ. ನಿಮ್ಮ ಮನೆಯ ಸಮೀಪವೇ ನೆರೆಮನೆಯವನ ಬಾವಿಯಿದೆ ಎಂದಿಟ್ಟುಕೊಳ್ಳಿ. ನೀವು ಅದರ ಸಮೀಪವೇ ನಿಮ್ಮ ಮನೆಯ ಶೌಚಗುಂಡಿಯನ್ನು ನಿರ್ಮಿಸುವುದು, ಇಲ್ಲದಿದ್ದರೆ ಅವರ ಮನೆಯ ಬಾವಿಯ ನೀರಿನ ಹರಿವು (ಒಸರು) ಕಡಿಮೆಯಾಗುವ ರೀತಿಯಲ್ಲಿ ಅದರ ಸಮೀಪವೇ ಇನ್ನೊಂದು ಬಾವಿ ತೋಡುವುದು, ತನ್ನ ಮನೆಯ ಮಲಿನ ನೀರನ್ನು ನೆರೆಮನೆಯ ಅಂಗಳಕ್ಕೆ ಹೋಗುವಂತೆ ಬಿಡುವುದು. ಈ ಕೆಲಸಗಳೆಲ್ಲ ಇಸ್ಲಾಮ್ ನಿಷೇಧಿಸಿರುವ 'ದರರ್' ನಲ್ಲಿ ಒಳಗೊಳ್ಳುತ್ತದೆ. ಪರಸ್ಪರ ಸಹಾಯ ಸೌಹಾರ್ದ ಸಂಬಂಧವಿರಬೇಕಾದ ನೆರೆಹೊರೆ ಸಂಬಂಧಕ್ಕೂ, ಸಾಮಾಜಿಕ ಜೀವನಕ್ಕೂ ಇದು ಮಾರಕವಾಗಿದೆ.

ಇತರರನ್ನು ತೊಂದರೆಗೊಳಪಡಿಸುವುದು ಮಾತ್ರವಲ್ಲ ಸ್ವತಃ ತೊಂದರೆಗೊಳಪಡುವುದನ್ನು ಕೂಡಾ 'ದ್ರೋಹ ಬಗೆಯಬಾರದು' ಎಂಬ ವಾಕ್ಯವು ಒಳಗೊಂಡಿದೆ ಎಂಬುದಾಗಿ ವಿದ್ವಾಂಸರು ಹೇಳುತ್ತಾರೆ. ಚಿಕಿತ್ಸೆಯ ಸೌಲಭ್ಯವಿದ್ದೂ ವ್ಯಕ್ತಿ ಸರಿಯಾಗಿ ಚಿಕಿತ್ಸೆಗೆ ಒಳಪಡದೆ ರೋಗಿಯಾಗಿಯೇ ದಿನ ಕಳೆಯುವುದು, ತಿನ್ನಲು ಆಹಾರವಿದ್ದರೂ ಹಸಿವೆಯಿಂದ ಇರುವುದು. ಇವುಗಳೆಲ್ಲವೂ ನಿಷಿದ್ಧವಾದ ದರರ್‌ಗಳಾಗಿವೆ. ಅಸಹ್ಯವಾದ ಪೀಡನೆಗೆ ಒಳಗಾದರೆ ಅದರಿಂದ ರಕ್ಷಣೆ ಹೊಂದಲು ಗರಿಷ್ಠ ಪ್ರಯತ್ನಿಸಬೇಕು. ಸುಮ್ಮನೆ ಅದಕ್ಕೆ ತನ್ನನ್ನು ಬಲಿ ನೀಡಬಾರದು. ಅಸಹನೀಯವಾದ ಹಸಿವೆಯಿಂದ ಜೀವ ಉಳಿಸಿಕೊಳ್ಳಲು ಕಷ್ಟಕರವೆಂದು ಭಾಸವಾಗುವ ಸಂದರ್ಭದಲ್ಲಿ ನಿಷಿದ್ಧವಾದ ಹಂದಿ ಮಾಂಸ, ಶವವನ್ನಾದರೂ ತಿಂದು ಜೀವ ಉಳಿಸಿಕೊಳ್ಳಬೇಕು. ಇಂತಹ ಸಂದರ್ಭಗಳಲ್ಲಿ ಇತರರ ಆಹಾರವನ್ನು ಕಸಿದು ತಿನ್ನುವುದಕ್ಕೂ ಅನುಮತಿ ಇದೆ. ಆದರೆ ಆ ವ್ಯಕ್ತಿ ತನ್ನಂತೆಯೇ ಹಸಿವಿನಿಂದ ಸಾಯಲು ಹೊರಟವನಾಗಿದ್ದರೆ, ಅವನ ಅವಶ್ಯಕತೆಯನ್ನು ಮುಗಿಸುವಷ್ಟು ಆಹಾರವಿಲ್ಲದವನಾಗಿದ್ದರೆ ಈ ಅನುಮತಿ ಇರುವುದಿಲ್ಲ.

ದ್ರೋಹ ಬಗೆಯುವಂತೆಯೇ ಪೀಡಿಸುವವರನ್ನು ಪ್ರತೀಕಾರವಾಗಿ ಪೀಡಿಸುವುದು ಕೂಡಾ ನಿಷಿದ್ಧವಾಗಿದೆ. ಜೀವ ಮತ್ತು ಸಂಪತ್ತಿನ ಮೇಲೆ ನಡೆಯುವ ಅಕ್ರಮಗಳಿಗೆ ಪ್ರತೀಕಾರವನ್ನು ಇಸ್ಲಾಮ್ ನಿಶ್ಚಯಿಸಿದೆ. ಇಲ್ಲಿ ಪ್ರತಿದ್ರೋಹ ಎನ್ನುವುದರಿಂದ ಅದನ್ನು ಉದ್ದೇಶಿಸಲಾಗಿಲ್ಲ, ಒಬ್ಬ ವ್ಯಕ್ತಿ ನಿಮಗೆ ಏನಾದರೂ ದ್ರೋಹ ಬಗೆದರೆ ನೀವೂ ತಿರುಗಿ ಅದೇ ರೀತಿ ಮಾಡಬಾರದು ಎಂದಾಗಿದೆ. ನೆರೆಮನೆಯವನು ನಿಮ್ಮ ಕುಟುಂಬದ ಮರ್ಯಾದೆಯನ್ನು ಕೆಡಿಸಿದರೆ, ಅದಕ್ಕೆ ಪ್ರತಿಯಾಗಿ ನೀವೂ ಅವರ ಕುಟುಂಬದ ಮರ್ಯಾದೆಯನ್ನು ಕೆಡಿಸುವುದು ಅದಕ್ಕಿರುವ ಪರಿಹಾರವಲ್ಲ, ಬದಲಾಗಿ ಆ ವ್ಯಕ್ತಿ ಮಾಡಿದ ಕೆಲಸಕ್ಕೆ ಪರಿಹಾರವಾಗಿ ನ್ಯಾಯ ಸಮ್ಮತ ತೀರ್ಮಾನಗಳನ್ನು ತೆಗೆದುಕೊಳ್ಳಬೇಕು. ಪೀಡನೆ ಎಂಬುದು ಯಾವ ರೂಪದಲ್ಲಿದ್ದರೂ ನಿಷಿದ್ಧವಾಗಿದೆ. ಯಾರಿಂದಲಾದರೂ ಅದು ನಡೆಯುತ್ತಿದ್ದರೆ ಅದನ್ನು ತಡೆಯಬೇಕು. ವ್ಯಕ್ತಿಯು ಸ್ವತಃ ತೊಂದರೆಗೊಳಗಾಗುವುದು, ಇತರರನ್ನು ತೊಂದರೆಗೊಳಪಡಿಸುವುದು ಮತ್ತು

ಪರಿಹಾರವಾಗಿ ತೊಂದರೆ ಮಾಡುವುದು ಎಲ್ಲವನ್ನೂ ಇಸ್ಲಾಮ್ ನಿಷೇಧಿಸಿದೆ. ಇಸ್ಲಾಮೀ ಸಾಮಾಜಿಕ ವ್ಯವಸ್ಥೆಯಲ್ಲಿ ಯಾವ ರೀತಿಯಲ್ಲಿಯಾದರೂ ಪೀಡನೆಗೊಳಗಾಗುವವರನ್ನು ಸಹಾಯ ಮಾಡುವುದು ಸಮುದಾಯದ ಕರ್ತವ್ಯವಾಗಿದೆ.

ಅಸಹ್ಯವಾದ ಸಂಕಷ್ಟ ಮತ್ತು ಪೀಡನೆಗಳನ್ನು ಅನುಭವಿಸಬೇಕಾಗಿ ಬರುವುದನ್ನು ಶರೀಅತ್ ಸಾಂಕೇತಿಕವಾಗಿ ಇದ್‌ತಿರಾರ್(ನಿರ್ಬಂಧಿತಾವಸ್ಥೆ) ಎಂದು ಕರೆಯುತ್ತದೆ. ಇದ್ ತಿರಾರ್‌ಗೆ ಸಂಬಂಧ ಪಟ್ಟಂತೆ ಐದು ನಿಯಮಗಳನ್ನು ಅದು ನಿರ್ದೇಶಿಸಿದೆ.

1) ನಿರ್ಬಂಧಿತಾವಸ್ಥೆಯು ನಿಷಿದ್ಧಗಳನ್ನು ಧರ್ಮಬದ್ಧಗೊಳಿಸುತ್ತದೆ. ಹಸಿವಿನಿಂದ ಸಾಯುವ ಸ್ಥಿತಿ ಬಂದು ಬಿಟ್ಟರೆ ಹಂದಿ ಮಾಂಸದ ಸೇವನೆಗೂ ಅನುಮತಿ ನೀಡಲಾಗಿರುವುದು ಇದಕ್ಕಿರುವ ಉದಾಹರಣೆಯಾಗಿದೆ.

2) ನಿರ್ಬಂಧಿತಾವಸ್ಥೆ ಸೃಷ್ಟಿಸುವ ಅನುಮತಿಯು ಆ ಅವಸ್ಥೆಯ ಉದ್ದೇಶವನ್ನು ಅನುಸರಿಸಿ ಇರುವುದು. ಅಂದರೆ ನಿರ್ಬಂಧಿತಾವಸ್ಥೆಯಿಂದ ಹೊರ ಬರಲು ಮಾತ್ರ ನಿಷಿದ್ಧ ವಸ್ತುವನ್ನು ಅನುಮತಿಸಲಾಗುತ್ತದೆ. ಅದಕ್ಕೂ ಮಿಕ್ಕಿ ಮುಂದುವರಿಸುವಂತಿಲ್ಲ. ಬಾಯಾರಿಕೆಯಿಂದ ಬೇರೆ ಏನಾದರೂ ಸಿಗದೆ ಮದ್ಯವನ್ನು ಕುಡಿಯಬೇಕಾಗಿ ಬಂದರೆ ತಾತ್ಕಾಲಿಕ ಬಾಯಾರಿಕೆ ನೀಗುವಷ್ಟು ಮಾತ್ರ ಕುಡಿಯಬಹುದು. ಅದಕ್ಕಿಂತ ಹೆಚ್ಚು ಕುಡಿಯಲು ಅನುಮತಿ ಇಲ್ಲ.

3) ಒಂದು ನಿರ್ಬಂಧಿತಾವಸ್ಥೆಯನ್ನು ಇನ್ನೊಂದು ಅದರಂತೆಯೇ ಇರುವ ಅಥವಾ ಅದಕ್ಕಿಂತ ದೊಡ್ಡದಾದ ಇನ್ನೊಂದು ನಿರ್ಬಂಧಿತಾವಸ್ಥೆಯಿಂದ ಪರಿಹರಿಸಬಾರದು. ಉದಾಹರಣೆಗೆ ಅಸಹನೀಯ ಹಸಿವುಳ್ಳ ವ್ಯಕ್ತಿ ಅದೇ ರೀತಿ ಹಸಿದಿರುವ ವ್ಯಕ್ತಿಯ ಆಹಾರವನ್ನು ಕಸಿದು ತಿನ್ನುವುದು.

4) ಎರಡು ಕೆಡುಕುಗಳ ಪೈಕಿ ಯಾವುದಾದರೂ ಒಂದನ್ನು ಸ್ವೀಕರಿಸಬೇಕಾದ ನಿರ್ಬಂಧಿತಾವಸ್ಥೆ ಬಂದರೆ ಅದರ ಪೈಕಿ ಕಡಿಮೆ ಕೆಡುಕು ಇರುವುದನ್ನು ಸ್ವೀಕರಿಸಬೇಕು.

5) ನಷ್ಟವನ್ನು ತಡೆಯುವುದು ಒಳಿತನ್ನು ಮಾಡುವುದಕ್ಕಿಂತಲೂ ಮಹತ್ವವುಳ್ಳದ್ದಾಗಿದೆ.



# 41. ಸಂಬಂಧಗಳನ್ನು ಸರಿಪಡಿಸಿಕೊಳ್ಳಿರಿ

وَعن أبي الدرداء رضي الله عنه قَالَ قَالَ رَسُولُ اللّٰهِ ﷺ
أَلَا أُخْبِرُكُمْ بِأَفْضَلَ مِنْ دَرَجَةِ الصِّيَامِ وَالصَّلَاةِ وَالصَّدَقَةِ قَالُوا: بَلَى،
قَالَ: إِصْلَاحُ ذَاتِ الْبَيْنِ فَإِنَّ فَسَادَ ذَاتِ الْبَيْنِ هِيَ الْحَالِقَةُ (ترمذي، ابو داود)

ಅಬೂದರ್ದಾ(ರ) ವರದಿ ಮಾಡುತ್ತಾರೆ- ಪ್ರವಾದಿ(ಸ) ಹೇಳಿದರು: 'ಗಮನಿಸಿರಿ ಉಪವಾಸಕ್ಕಿಂತಲೂ ನಮಾಝಿಗಿಂತಲೂ, ದಾನಕ್ಕಿಂತಲೂ, ಶ್ರೇಷ್ಠವಾದ ಪುಣ್ಯ ಕೆಲಸವೇನೆಂದು ನಾನು ನಿಮಗೆ ಹೇಳಿ ಕೊಡಲೇ?' ಅನುಯಾಯಿಗಳು 'ಆಯಿತು ಹೇಳಿರಿ' ಎಂದರು. ಪ್ರವಾದಿ(ಸ) ಹೇಳಿದರು: 'ಪರಸ್ಪರ ಸಂಬಂಧಗಳನ್ನು ಸರಿಪಡಿಸಿಕೊಳ್ಳಿರಿ. ನಿಶ್ಚಯವಾಗಿಯೂ ಪರಸ್ಪರ ಸಂಬಂಧಗಳ ಶಿಥಿಲತೆಯು ನಾಶಕ್ಕೇ ಹೇತುವಾಗಿರುವುದು.'

(ತಿರ್ಮಿದಿ, ಅಬೂ ದಾವೂದ್)

ಮನುಷ್ಯ ಸಂಬಂಧಗಳಿಗೆ ಇಸ್ಲಾಮ್ ನೀಡಿರುವ ಮಹತ್ವವನ್ನು ಈ ಹದೀಸ್ ತಿಳಿಸುತ್ತದೆ. ಈ ಹದೀಸ್‌ನ ಶೈಲಿಯೇ ಇದರ ಉದ್ದೇಶ, ಗೌರವ ಮತ್ತು ವಿಶೇಷತೆಯನ್ನು ಸೂಚಿಸುತ್ತದೆ. ಮೊದಲು 'ಅಲಾ' ಅಂದರೆ 'ಗಮನಿಸಿರಿ' ಎಂದು ಹೇಳುವ ಮೂಲಕ ಅನುಯಾಯಿಗಳನ್ನು ಜಾಗೃತಗೊಳಿಸಿದರು. ಮುಂದುವರಿಯುತ್ತಾ ತಾನು ಕಲಿಸ ಬಯಸಿರುವ ವಿಷಯವನ್ನು ಹೇಳಿಕೊಡಲೇ ಎಂದೂ ಅವರೊಂದಿಗೇ ಪ್ರಶ್ನಿಸಿದರು. ಅಲ್ಲಿ ನೆರೆದಿರುವವರ ಪೈಕಿ ಯಾರಿಗಾದರೂ ತಾನು ಹೇಳಿ ಕೊಡುವುದು ಇಷ್ಟವಿಲ್ಲದಿದ್ದರೆ ಎಂಬ ಸಂಶಯದಿಂದ ಈ ರೀತಿ ಹೇಳಿರುವುದಲ್ಲ ಬದಲಾಗಿ ಹೇಳುತ್ತಿರುವ ವಿಷಯವನ್ನು ಕೇಳುಗರು ಬಹಳ ಗೌರವದೊಂದಿಗೆ ಸ್ವೀಕರಿಸಲು ಸ್ವಯಂ ಸನ್ನದ್ಧರಾಗಿ ಮುಂದೆ ಬರಬೇಕು ಎಂದು ಈ ಶೈಲಿಯನ್ನು ಬಳಸಲಾಗಿದೆ.

'ಪರಸ್ಪರ ಸಂಬಂಧಗಳನ್ನು ಸರಿಪಡಿಸಿಕೊಳ್ಳಿರಿ. ಸಂಬಂಧದ ಶಿಥಿಲತೆಯು ನಾಶಕ್ಕೇ ಹೇತುವಾಗಿರುವುದು.' ಇದು ಬಹಳ ಗೌರವದೊಂದಿಗೆ ಕಲಿಸಲಾದ ವಿಷಯವಾಗಿದೆ. ಒಂದೇ ನೋಟದಲ್ಲಿ ಎಷ್ಟು ಸರಳವಾದ ವಿಷಯ ಎಂದೆನಿಸುತ್ತದೆ. ಸ್ವಲ್ಪ ಗಂಭೀರವಾಗಿ ಆಲೋಚಿಸಿದರೆ, ಈ ಸರಳವಾದ ವಿಷಯವೇ ಮನುಷ್ಯರಾಗಿ ಉನ್ನತಿ ಮತ್ತು ಅವನತಿಯ ಮೂಲವಾಗಿರುವುದನ್ನು ಗಮನಿಸಬಹುದಾಗಿದೆ. ಆಧುನಿಕ ಕಾಲವು ಎದುರಿಸುತ್ತಿರುವ

ಸಮಸ್ಯೆಗಳನ್ನೇ ಈ ವಚನವು ಬಹಳ ಸ್ಪಷ್ಟವಾಗಿ ಮನದಟ್ಟು ಮಾಡಿಸುತ್ತದೆ. ಕುಟುಂಬದ ಶಿಥಿಲತೆ, ನೆರೆಹೊರೆಯವರೊಂದಿಗೆ ಉಂಟಾಗುವ ಸಮಸ್ಯೆಗಳು, ಪ್ರಾದೇಶಿಕ ಸಮಸ್ಯೆಗಳು, ಸಂಘಟನೆಗಳ ಮಧ್ಯೆ ಸಂಘರ್ಷಗಳು, ರಾಷ್ಟ್ರಗಳ ಮಧ್ಯೆ ನಡೆಯುತ್ತಿರುವ ಸಮರಗಳು ಮಾತ್ರವಲ್ಲ, ಲೋಕವು ಎದುರಿಸುತ್ತಿರುವ ಎಲ್ಲ ಸಮಸ್ಯೆಗಳ ಹಿಂದೆ ಇರುವುದಾದರೂ ಏನು? ಪತಿ-ಪತ್ನಿಯರು, ಮಕ್ಕಳು, ಸಹೋದರ-ಸಹೋದರಿಯರು ಇವರ ಮಧ್ಯೆ ಪ್ರೀತಿ ಮತ್ತು ಹಕ್ಕು-ಕರ್ತವ್ಯಗಳ ಸಂಬಂಧವು ದುರ್ಬಲವಾದಾಗ ಸಮಸ್ಯೆಯು ಆರಂಭಗೊಳ್ಳುತ್ತದೆ. ಕುಟುಂಬವು ಶಿಥಿಲಗೊಳ್ಳುತ್ತದೆ. ನೆರೆಕರೆಯವರ ಮಧ್ಯೆ ಇರಬೇಕಾದ ಸುಮಧುರ ಬಾಂಧವ್ಯವು ಇಲ್ಲವಾಗುವಾಗ ಅಲ್ಲಿಯೂ ಕಲಹಗಳು ಆರಂಭವಾಗುತ್ತದೆ. ಈ ರೀತಿ ವ್ಯಕ್ತಿಯು ಕುಟುಂಬ, ನೆರೆಕರೆ ಹಾಗೂ ಸುತ್ತಮುತ್ತಲಿನ ಪರಿಸರದಿಂದ ಬೇರ್ಪಟ್ಟು ಏಕಾಂಗಿಯಾಗಿ ಬಿಡುತ್ತಾನೆ. ಸಮಾಜ ಜೀವಿಯಾದ ಮನುಷ್ಯನು ಈ ರೀತಿಯ ಏಕಾಂತದ ಕಾರಣದಿಂದಾಗಿ ಮಾನಸಿಕವಾದ ಶಾಂತಿ ಮತ್ತು ಸುರಕ್ಷೆಯ ಭಾವವನ್ನು ಕಳೆದುಕೊಳ್ಳುತ್ತಾನೆ. ಈ ಸಂಬಂಧ ಕಡಿದುಕೊಳ್ಳುವಿಕೆ ಸಂಘಟನೆಗಳ ಮಧ್ಯೆ, ಪ್ರದೇಶಗಳ ಮಧ್ಯೆ ಸಂಭವಿಸುವಾಗ ಇಡೀ ರಾಷ್ಟ್ರ ಮತ್ತು ಒಟ್ಟು ಸಮಾಜದ ಶಾಂತಿ ಮತ್ತು ಸುರಕ್ಷೆಯು ಬೆಲೆ ತೆರಬೇಕಾಗುತ್ತದೆ. ರಾಷ್ಟ್ರಗಳು ಒಟ್ಟಾಗುವಾಗ ಒಟ್ಟು ಲೋಕದ ಶಾಂತಿ ಮತ್ತು ಸುರಕ್ಷೆಯುಂಟಾಗುತ್ತದೆ. ಸಮಾಧಾನದೊಂದಿಗೆ ಸಂಸ್ಕಾರ ಸಂಪನ್ನವಾದ ಮನುಷ್ಯ ಜೀವನವು ಸಾಧಿತವಾಗುವುದು. ಇದುವೇ ಪರಸ್ಪರ ಸಂಬಂಧಗಳನ್ನು ಸರಿಪಡಿಸಿಕೊಳ್ಳುವುದು ಎಂಬುದರ ತಾತ್ಪರ್ಯವಾಗಿದೆ.

ಪ್ರೀತ್ಯಾದರ, ಸೌಹಾರ್ದಯುತ, ಸಹಕಾರದಿಂದ ಕೂಡಿದ ಪರಸ್ಪರ ಸಂಬಂಧವನ್ನು ಬೆಳೆಸುವುದು ನಮಾಝ್, ಉಪವಾಸವ್ರತ, ದಾನಧರ್ಮಗಳಿಗಿಂತಲೂ ಮಿಗಿಲಾದ ಪುಣ್ಯ ಕೆಲಸವಾಗಿದೆ ಎಂದು ಪ್ರವಾದಿ (ಸ) ಹೇಳಿರುವರು: ಮನುಷ್ಯನು ಶರೀರದ ಮೂಲಕ ನಡೆಸುವ ಅತ್ಯಂತ ಶ್ರೇಷ್ಠವಾದ ಆರಾಧನೆಯಾಗಿದೆ ನಮಾಝ್, ಉಪವಾಸ ಎಂಬುದು 'ನಾನೇ ಅದಕ್ಕೆ ಪ್ರತಿಫಲವನ್ನು ನೀಡುತ್ತೇನೆ' ಎಂದು ಅಲ್ಲಾಹನು ನೇರವಾಗಿ ಹೇಳಿರುವ ಆರಾಧನೆಯಾಗಿದೆ. ದಾನಧರ್ಮಗಳಿಗೆ ಇಸ್ಲಾಮ್ ನಿಗದಿ ಪಡಿಸಿರುವ ಪುಣ್ಯ ಪ್ರತಿಫಲವನ್ನು ಅರಿಯದವರಾರೂ ಇರಲಿಕ್ಕಿಲ್ಲ. ಇವೆಲ್ಲವುಗಳಿಗಿಂತ ಪರಸ್ಪರ ಸಂಬಂಧಗಳನ್ನು ಸರಿಪಡಿಸುವುದು ಶ್ರೇಷ್ಠ ಎಂದು ಹೇಳುವುದರ ಉದ್ದೇಶ ನಮಾಝ್, ಉಪವಾಸ, ದಾನಧರ್ಮಗಳು ಅಪ್ರಸ್ತುತ ಎಂದಲ್ಲ. ಈ ರೀತಿಯ ಆರಾಧನೆಗಳು ಮಹತ್ವಪೂರ್ಣವೂ, ಶ್ರೇಷ್ಠವೂ, ಪುಣ್ಯಕರವೂ ಆಗುವುದು ಮನುಷ್ಯರು ಅವುಗಳನ್ನು ನಿರ್ವಹಿಸುವ ಮೂಲಕ ಪರಸ್ಪರ ಪ್ರೀತಿ, ಮೈತ್ರಿ, ಸಹಕಾರವುಳ್ಳವರಾಗಿ ಪರಿವರ್ತನೆಯಾಗುವಾಗ ಎಂಬುದನ್ನು ಇಲ್ಲಿ ಉದ್ದೇಶಿಸಲಾಗಿದೆ. ಕುಟುಂಬ ಮತ್ತು ಅದರ ಸಂಬಂಧಗಳನ್ನು ಕಡಿಯುವವರ ನೆರೆಹೊರೆಯವರೊಂದಿಗೆ ವೈರತ್ವ ಹೊಂದಿರುವವರ, ಇತರ ಸಮುದಾಯದೊಂದಿಗೆ ದ್ವೇಷ ಇಟ್ಟುಕೊಳ್ಳುವವರ, ಇತರ ರಾಷ್ಟ್ರಗಳನ್ನು ನಾಶಪಡಿಸಲು ಅವಕಾಶ ಕಾಯುತ್ತಿರುವವರ ನಮಾಝ್, ಉಪವಾಸವ್ರತ ಮತ್ತು ದಾನಧರ್ಮಗಳಿಗೆ ಅಲ್ಲಾಹನು

## 42. ಸಹೋದರತೆಯ ಆಧಾರಸ್ಥಂಭಗಳು

عَنْ أَبِي هُرَيْرَةَ قَالَ قَالَ رَسُولُ اللَّهِ ﷺ لَا تَحَاسَدُوا وَلَا تَنَاجَشُوا
وَلَا تَبَاغَضُوا وَلَا تَدَابَرُوا وَلَا يَبِعْ بَعْضُكُمْ عَلَى بَيْعِ بَعْضٍ
وَكُونُوا عِبَادَ اللَّهِ إِخْوَانًا.
الْمُسْلِمُ أَخُو الْمُسْلِمِ لَا يَظْلِمُهُ وَلَا يَخْذُلُهُ وَلَا يَكْذِبُهُ وَلَا يَحْقِرُهُ
التَّقْوَى هَاهُنَا وَيُشِيرُ إِلَى صَدْرِهِ ثَلَاثَ مَرَّاتٍ .
بِحَسْبِ امْرِئٍ مِنَ الشَّرِّ أَنْ يَحْقِرَ أَخَاهُ الْمُسْلِمَ كُلُّ الْمُسْلِمِ عَلَى
الْمُسْلِمِ حَرَامٌ دَمُهُ وَمَالُهُ وَعِرْضُهُ . (مسلم)

ಪ್ರವಾದಿಯವರು(ಸ) ಹೇಳಿರುವುದಾಗಿ ಹ.ಅಬೂ ಹುರೈರಾ(ರ) ವರದಿ ಮಾಡುತ್ತಾರೆ: 'ನೀವು ಪರಸ್ಪರ ಅಸೂಯೆ ಪಡಬಾರದು. ಪ್ರಚೋದಿಸಬಾರದು, ದ್ವೇಷಿಸಬಾರದು, ಜಗಳಾಡಬಾರದು. ನಿಮ್ಮಲ್ಲಿ ಕೆಲವರು ವ್ಯಾಪಾರ ಮಾಡಿರುವುದರ ಮೇಲೆ ಇನ್ನು ಕೆಲವರು ವ್ಯಾಪಾರ ಮಾಡಬಾರದು. ನೀವೆಲ್ಲರೂ ಸಹೋದರರೂ, ದೇವನ ದಾಸರೂ ಆಗಿರಿ.'

ಮುಸ್ಲಿಮನು ಇನ್ನೋರ್ವ ಮುಸ್ಲಿಮನ ಸಹೋದರನಾಗಿರುತ್ತಾನೆ. ಮುಸ್ಲಿಮನು ಅವನನ್ನು ಆಕ್ರಮಿಸುವುದಿಲ್ಲ, ಅವನೊಂದಿಗೆ ಸುಳ್ಳಾಡುವುದಿಲ್ಲ, ಅವನನ್ನು ನಿಂದಿಸುವುದಿಲ್ಲ, ದೇವಭಯವು ಇಲ್ಲಿರುತ್ತದೆ ಎಂದು ಪ್ರವಾದಿ(ಸ) ಸ್ವತಃ ಮೂರು ಬಾರಿ ತಮ್ಮ ಎದೆಯ ಭಾಗಕ್ಕೆ ಬೆರಳು ತೋರಿಸುತ್ತಾ ಹೇಳಿದರು.

ತನ್ನ ಮುಸ್ಲಿಮ್ ಸಹೋದರನನ್ನು ನಿಂದಿಸುವುದು ಪಾಪ ಕೃತ್ಯವಾಗಿದೆ. ಮುಸ್ಲಿಮನಿಗೆ ಇನ್ನೋರ್ವ ಮುಸ್ಲಿಮನ ಎಲ್ಲವೂ ನಿಷಿದ್ಧವಾಗಿದೆ. ಅವನ ರಕ್ತ, ಸಂಪತ್ತು ಮತ್ತು ಅಭಿಮಾನ.

(ಮುಸ್ಲಿಮ್)

ಇಸ್ಲಾಮಿನ ಸಾಮೂಹಿಕ ಬಾಂಧವ್ಯ ಮತ್ತು ಸಹೋದರತೆಯ ಕೆಲವು ಮೂಲ ತತ್ವಗಳೆಡೆಗೆ ಗಮನ ಸೆಳೆಯುವ ಪ್ರವಾದಿ ವಚನವಿದು. ಪರಸ್ಪರ ಅಸೂಯೆ ಪಡಬಾರದು ಎಂಬುದು ಒಂದನೆಯ ವಿಷಯವಾಗಿದೆ. ಮುಸ್ಲಿಮರು ಪರಸ್ಪರ ಸಹೋದರರು. ಪರಸ್ಪರ ಸಹೋದರರಾಗಿಯೇ ಇರಬೇಕು ಎಂದು ಪವಿತ್ರ ಕುರ್‌ಆನ್ ಹೇಳಿರುತ್ತದೆ. ಇತರರ ಸಾಧನೆಯನ್ನು ತನ್ನದು ಎಂಬಂತೆ ಭಾವಿಸಿಕೊಂಡಾಗ ಸಹೋದರತೆಯು ನಿಜವಾಗುತ್ತದೆ. ಇತರರ ಸಾಧನೆಯನ್ನು ಕಂಡು ಕರುಬುವುದು. ಅದು ಅವನಿಂದ ನಷ್ಟಹೊಂದಿ ತನಗೆ ದೊರೆಯಬೇಕೆಂದು ಆಶಿಸುವುದು. ಒಂದು ವೇಳೆ ತನಗೆ ದೊರೆಯದಿದ್ದರೂ ಸರಿ. ಅವನಿಂದ ಕಳೆದು ಹೋಗಬೇಕೆಂದು ಭಾವಿಸುವುದು. ಈ ಎಲ್ಲಾ ಭಾವನೆಗಳ ಹೆಸರೇ ಅಸೂಯೆ ಎಂದಾಗಿದೆ. ಇದು ಸಹೋದರತೆಯನ್ನು ಬಾಧಿಸುವ ಬಹಳ ಮಾರಕವಾದ ವಿಷವಿದಾಗಿದೆ. ಆದುದರಿಂದಲೇ ಸಹೋದರತೆಯಿಂದ ಕೂಡಿದ ಸಾಮಾಜಿಕ ಸಂಬಂಧಗಳ ಪ್ರಾಥಮಿಕ ತತ್ವವಾಗಿ ಪ್ರವಾದಿಯವರು(ಸ) ಇದನ್ನು ಪ್ರಸ್ತಾಪಿಸಿರುವರು.

ಅಸೂಯೆ ಮತ್ತು ಮತ್ಸರ ಎರಡೂ ಒಂದೇ ವಿಷಯಗಳಲ್ಲ ಎಂಬುದನ್ನು ಕೂಡಾ ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ. ಇತರರಿಗೆ ದೊರೆತಿರುವುದು ಅಥವಾ ಅದಕ್ಕಿಂತಲೂ ಅಧಿಕ ತನಗೆ ಸಿಗಬೇಕೆಂದು ಓರ್ವನು ಆಶಿಸಿದರೆ ಅದು ಅಸೂಯೆಯಲ್ಲ ಮತ್ಸರವಾಗಿದೆ. ಮತ್ಸರವು ಅಸೂಯೆಯಾಗಿ ಪರಿವರ್ತನೆಯಾಗುವ ತನಕ ಆರೋಗ್ಯ ಪೂರ್ಣವಾಗಿರುವುದು. ಕೆಲವು ವಿಷಯಗಳಲ್ಲಿ ಮತ್ಸರ ಪಡುವುದನ್ನು ಪ್ರವಾದಿ(ಸ) ಸ್ವತಃ ಪ್ರೋತ್ಸಾಹಿಸಿರುವರು. ಉಧಾಹರಣೆಗೆ ಉದಾರ ವ್ಯಕ್ತಿಯಾದ ಓರ್ವ ಶ್ರೀಮಂತನನ್ನು ನೋಡಿ ಇನ್ನೊಬ್ಬ ವ್ಯಕ್ತಿ ಅವನಂತೆ ಅಥವಾ ಅವನಿಗಿಂತ ಅಧಿಕ ಹಣವನ್ನು ಸಂಪಾದಿಸಿ ಅವನಿಗಿಂತ ಉದಾರವಾಗಿ ಸಂಪತ್ತನ್ನು ಪರೋಪಕಾರಗಳನ್ನು ಮಾಡಲು ಖರ್ಚು ಮಾಡಬೇಕೆಂದು ಆಶಿಸುವುದು ಮತ್ತು ಅದಕ್ಕಾಗಿ ಪ್ರಯತ್ನಿಸುವುದು. ಉತ್ತಮ ರೀತಿಯಲ್ಲಿ ಕುರ್‌ಆನನ್ನು ಕಲಿತು ಅದನ್ನು ಚೆನ್ನಾಗಿ ಪಾರಾಯಣ ಮಾಡುವ ವ್ಯಕ್ತಿಯನ್ನು ಕಂಡು ಅದಕ್ಕಿಂತ ಹೆಚ್ಚಾಗಿ ಕುರ್‌ಆನನ್ನು ಕಲಿತು, ಅವನಿಗಿಂತಲೂ ಚೆನ್ನಾಗಿ ಕುರ್‌ಆನ್ ಪಾರಾಯಣ ಮಾಡಬೇಕೆಂದು ಆಗ್ರಹಿಸುವುದು ಆರೋಗ್ಯಕರವಾದ ಮತ್ಸರವೆಂಬುದು ಪ್ರವಾದಿ(ಸ) ನೀಡಿರುವ ಎರಡನೆಯ ಉದಾಹರಣೆಯಾಗಿದೆ.

'ತನಾಜಷೂ' ಎಂಬ ಮೂಲ ಪದವನ್ನು ಪ್ರಚೋದಿಸುವುದು ಎಂದು ಭಾಷಾಂತರ ಮಾಡಲಾಗಿದೆ. ಪ್ರೇರೇಪಿಸುವುದು, ಪ್ರಲೋಭನೆ ಮಾಡುವುದು ಮುಂತಾದವುಗಳೂ ಇದರ ಭಾಷಾಂತರವಾಗಿದೆ. ಒಂದು ಸರಕನ್ನು ಖರೀದಿಸುವ ಉದ್ದೇಶವಿಲ್ಲದೆ ಕೇವಲ ಇತರರನ್ನು ಖರೀದಿಸಲು ಪ್ರಚೋದಿಸುವ ಉದ್ದೇಶದಿಂದ ಹೆಚ್ಚಿನ ಬೆಲೆಯನ್ನು ಹೇಳುವುದು ಎಂಬ ಅರ್ಥದಲ್ಲಿ ಈ ಪದವು ಪ್ರಯೋಗಿಸಲ್ಪಟ್ಟಿದೆ. ವ್ಯಾಪಾರಿಯೊಂದಿಗಿನ ಧೋರಣೆಯ ಆಧಾರದಲ್ಲಿ ಇದು ನಡೆಯುತ್ತದೆ. ಮಾತ್ರವಲ್ಲ ಅಗತ್ಯವಿರುವವರಿಗೆ ದ್ರೋಹ ಬಗೆಯಲೂ ಈ ರೀತಿ

ಮಾಡುತ್ತಾರೆ. ಐದು ರೂಪಾಯಿ ಬೆಲೆಯುಳ್ಳ ಒಂದು ವಸ್ತುವನ್ನು ಒಬ್ಬ ವ್ಯಕ್ತಿ ಹತ್ತು ರೂಪಾಯಿಗೆ ಕೇಳುವಾಗ, ನಿಜವಾಗಿ ಅದರ ಅವಶ್ಯಕತೆ ಇರುವ ವ್ಯಕ್ತಿ ಹತ್ತು ಅಥವಾ ಹತ್ತೂವರೆ ರೂಪಾಯಿ ನೀಡಿ ಅದನ್ನು ಖರೀದಿಸಲು ಪ್ರೇರಿತನಾಗುತ್ತಾನೆ. ಇದು ಮೋಸ ಮತ್ತು ಶೋಷಣೆಯಾಗಿದೆ. ಈ ಪ್ರವಾದಿ ವಚನದಲ್ಲಿರುವ 'ವಲಾ ತನಾಜಶೂ' ಕೇವಲ ವ್ಯಾಪಾರಕ್ಕೆ ಮಾತ್ರ ಸೀಮಿತವಲ್ಲ. ಓರ್ವ ಸಹೋದರನಿಗೆ ನಷ್ಟವನ್ನುಂಟು ಮಾಡಿ ಇನ್ನೋರ್ವ ಸಹೋದರನಿಗೆ ಅನ್ಯಾಯವಾಗಿ ಲಾಭ ಒದಗಿಸಿಕೊಡುವ ಎಲ್ಲ ವರ್ತನೆಗಳಿಗೂ ಈ ನಿಷೇಧವು ಅನ್ವಯವಾಗುತ್ತದೆ.

ಏಲಂ ಕರೆದು ಸಾಮಗ್ರಿಗಳನ್ನು ಮಾರಾಟ ಮಾಡುವ ವಿಧಾನವು ಈ ಹದೀಸಿನ ಆಧಾರದಲ್ಲಿ ನಿಷಿದ್ಧವೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಖರೀದಿಸುವ ಉದ್ದೇಶವಿಲ್ಲದೆ ಕೇವಲ ಬೆಲೆಯನ್ನು ಹೆಚ್ಚಿಸಲಿಕ್ಕಾಗಿ ಮಾತ್ರ ಈ ಏಲಂ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ವ್ಯಕ್ತಿಗಳನ್ನು ಇಲ್ಲಿ ತಡೆಯಲಾಗಿದೆ. ನಿಜವಾದ ಅಗತ್ಯವುಳ್ಳ ವ್ಯಕ್ತಿಗಳು ಪರಸ್ಪರ ಅದಕ್ಕಾಗಿ ಸ್ಪರ್ಧಿಸುವುದಕ್ಕೆ ಇದು ಅನ್ವಯವಾಗುವುದಿಲ್ಲ.

ಸರಕನ್ನು ಖರೀದಿಸುವ ಉದ್ದೇಶವಿಲ್ಲದೆ, ಕೇವಲ ಬೆಲೆಯನ್ನು ಹೆಚ್ಚಿಸಲಿಕ್ಕಾಗಿ ಅದು ವ್ಯಾಪಾರಿಗೆ ಸಹಾಯ ಮಾಡಲಿಕ್ಕಾದರೂ ಗ್ರಾಹಕನಿಗೆ ದ್ರೋಹ ಬಗೆಯಲಿಕ್ಕಾದರೂ ಸರಿ. ಅದು ಪಾಪ ಕೆಲಸವಾಗಿದೆ ಎಂಬ ವಿಷಯದಲ್ಲಿ ಹದೀಸ್ ವ್ಯಾಖ್ಯಾನಕಾರರು ಒಮ್ಮತಾಭಿಪ್ರಾಯವನ್ನು ಹೊಂದಿದ್ದಾರೆ. ಆದರೆ ಹಾಗೆ ನಡೆಯುವ ವ್ಯಾಪಾರವು ಧರ್ಮಸಮ್ಮತವೆಂಬುದು ಬೇರೆ ಕೆಲವು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ಈ ರೀತಿ ವಸ್ತುವನ್ನು ಖರೀದಿಸಿದ ವ್ಯಕ್ತಿಗೆ ಬಹಳ ನಷ್ಟ ಸಂಭವಿಸಿದೆ ಎಂದು ಮನವರಿಕೆಯಾದಾಗ, ಆ ವ್ಯಕ್ತಿಗೆ ವ್ಯಾಪಾರವನ್ನು ರದ್ದುಗೊಳಿಸುವ ಸ್ವಾತಂತ್ರ್ಯ (ಖಿಯಾರ್) ಇದೆ ಎಂದು ಇಮಾಮ್ ಅಹ್ಮದ್ ಮತ್ತು ಇಮಾಮ್ ಮಾಲಿಕ್(ರ) ಅಭಿಪ್ರಾಯ ಪಟ್ಟಿದ್ದಾರೆ.

ಪರಸ್ಪರ ಹಗೆ ಮತ್ತು ದ್ವೇಷವನ್ನು ಹುಟ್ಟಿಸದಿರಿ ಎಂಬುದು ಮುಂದಿನ ನಿಯಮವಾಗಿದೆ. ಹಗೆತನ ಮತ್ತು ದ್ವೇಷವಿರುವಲ್ಲಿ ಪ್ರೀತಿ ಮತ್ತು ಸಹೋದರತೆಗೆ ಮಾತ್ರವಲ್ಲ, ಶಾಂತಿ ಸಮಾಧಾನಕ್ಕೂ ಅವಕಾಶವಿರುವುದಿಲ್ಲ.

'ವಲಾತದಾಬರೂ' ಎಂಬುವುದರ ಭಾಷಾಂತರ ಪರಸ್ಪರ ಮುಖ ತಿರುಗಿಸಬಾರದು ಎಂದಾಗಿದೆ. ಕಡೆಗಣಿಸುವುದು, ಜಗಳಾಡುವುದು ಮುಂತಾದ ಅರ್ಥಗಳಲ್ಲಿ ಈ ಪದವು ಉಪಯೋಗಿಸಲ್ಪಡುತ್ತದೆ. ಈ ಎರಡೂ ಅರ್ಥಗಳನ್ನು ಇಲ್ಲಿ ಉದ್ದೇಶಿಸಲಾಗಿದೆ. ಸಮಾಜದಲ್ಲಿರುವ ಶ್ರೀಮಂತರು-ಬಡವರು, ಹಿರಿಯರು-ಕಿರಿಯರು, ಪಂಡಿತರು-ಪಾಮರರು ಎಲ್ಲರೂ ಪರಸ್ಪರ ಸಹಕರಿಸುತ್ತಾ ಗೌರವಾದರಗಳೊಂದಿಗೆ ಜೀವಿಸಬೇಕು. ಅಲ್ಲಾಹನು ಮನುಷ್ಯರೆಲ್ಲರನ್ನು ಗೌರವಾರ್ಹವಾಗಿ ಸೃಷ್ಟಿಸಿರುವನು. ಈ ಗೌರವವನ್ನು ಪರಸ್ಪರರಿಗೆ ನೀಡುವುದು ಪ್ರತಿಯೊಬ್ಬರ ಬಾಧ್ಯತೆಯಾಗಿದೆ. ಮನುಷ್ಯರು ಪರಸ್ಪರ ಈ ಹಕ್ಕನ್ನು ನಿರ್ವಹಿಸುತ್ತಿದ್ದರೆ ಮಾತ್ರ ವರ್ಗ ಸಂಘರ್ಷಗಳಿಲ್ಲದ ಸಮಾಜವು ನಿರ್ಮಾಣವಾಗಬಲ್ಲದು.

ನಿಮ್ಮಲ್ಲಿ ಕೆಲವರು ವ್ಯಾಪಾರ ಮಾಡಿದುದರ ಮೇಲೆ ವ್ಯಾಪಾರ ಮಾಡಬಾರದು ಎಂದಿರುವುದರ ಅರ್ಥವೇನೆಂದರೆ, ಓರ್ವ ವ್ಯಕ್ತಿ ಖರೀದಿಸಲಿಕ್ಕಾಗಿ ಬೆಲೆ ನಿಗದಿ ಪಡಿಸಿರುವ ವಸ್ತುವನ್ನು ಅವರದನ್ನು ವಶಕ್ಕೆ ತೆಗೆದುಕೊಳ್ಳುವ ಮುನ್ನ ಅಥವಾ ತನ್ನ ವ್ಯಾಪಾರವನ್ನು ರದ್ದುಗೊಳಿಸುವ ಸ್ವಾತಂತ್ರ್ಯವಿರುವ ಅವಧಿಯಲ್ಲಿಯೇ ಬೇರೆ ಯಾರಿಗಾದರೂ ಅದನ್ನು ಮಾರಿಬಿಡುವುದು. ಒಬ್ಬ ವ್ಯಕ್ತಿಯು ಖರೀದಿಸಲಿಕ್ಕೆಂದು ಬೆಲೆ ನಿಗದಿ ಪಡಿಸಿಟ್ಟ ವಸ್ತುವನ್ನು ಬೇರೊಬ್ಬರು ಖರೀದಿಸುವುದು ಕೂಡಾ ಇದೇ ರೀತಿಯಾಗಿರುತ್ತದೆ. ಕೇವಲ ವ್ಯಾಪಾರದ ವಿಷಯದಲ್ಲಿ ಮಾತ್ರವಲ್ಲ, ವಿವಾಹದ ವಿಷಯದಲ್ಲೂ ಇದು ಪ್ರಸ್ತುತವೆನಿಸುತ್ತದೆ. ಓರ್ವ ವ್ಯಕ್ತಿ ವಿವಾಹಕ್ಕಾಗಿ ಮಾತುಕತೆ ನಡೆಸಿದ ಅಥವಾ ವಿವಾಹ ನಿಶ್ಚಯಿಸಲ್ಪಟ್ಟ ಓರ್ವ ಯುವತಿ ಅಥವಾ ಯುವಕನನ್ನು ಬೇರೆ ಯಾರಾದರೂ ಅದನ್ನು ತಿಳಿದವರೇ ಮಾತುಕತೆ ನಡೆಸಲು ಮುಂದೆ ಬರುವುದು ನಿಷಿದ್ಧವಾಗಿದೆ. ನಿಷಿದ್ಧವಾದ ಈ ರೀತಿಯ ವ್ಯಾಪಾರ ಮತ್ತು ವಿವಾಹಗಳು ಸಂಭವಿಸಿಬಿಟ್ಟರೆ ಅದು ಸಿಂಧುವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದರೆ ಇಮಾಮ್ ಮಾಲಿಕ್(ರ) ಈ ರೀತಿ ನಡೆಯುವ ವಿವಾಹವು ಮತ್ತು ವ್ಯಾಪಾರವು ಅಸಿಂಧುವೆಂದು ನಿರ್ಣಯಿಸಿರುವರು.

ಈ ಮೇಲೆ ಹೇಳಲಾಗಿರುವ ಉಪದೇಶಗಳನ್ನೆಲ್ಲ ಉದ್ದೇಶವಾಗಿಟ್ಟುಕೊಂಡು 'ನೀವು ಪರಸ್ಪರ ಸಹೋದರರರೂ, ದೇವನ ದಾಸರೂ ಆಗಿರಿ' ಎಂದು ಹೇಳಲಾಗಿದೆ. ಅಸೂಯೆ, ದ್ವೇಷ, ಜಗಳ, ಕಾಪಟ್ಯ, ಶೋಷಣೆ ಮುಂತಾದವುಗಳಿಂದ ಮುಕ್ತರಾದರೆ ಮಾತ್ರ ನಿಮಗೆ ನಿಜವಾದ ದೇವನ ದಾಸರಾಗಲು, ಪರಸ್ಪರ ಪ್ರೀತಿಸಲು, ಸಹೋದರತೆ ತುಂಬಿರುವ ಸಮೂಹವಾಗಿ ಪರಿಣಮಿಸಲು ಸಾಧ್ಯ. ಈ ಎರಡೂ ವಿಷಯಗಳನ್ನು ಪಾಲಿಸಲು ನಿಮ್ಮಿಂದ ಸಾಧ್ಯವಿಲ್ಲವೆಂದಾದರೆ ನೀವು ಶಾಂತಿಯಿಲ್ಲದ, ಅಕ್ರಮದಿಂದ ಕೂಡಿದ ಸಮಾಜದಲ್ಲಿ ಶೈತಾನನ ದಾಸರಾಗಿ ಬಿಡುವಿರಿ.

ಇಸ್ಲಾಮಿನ ಸಹೋದರತೆಯ ಅಡಿಪಾಯವು ಆದರ್ಶವಾಗಿದೆ. ಇನ್ನೊಬ್ಬನು ತನ್ನಂತೆಯೇ ಅಲ್ಲಾಹನ ದಾಸ್ಯವನ್ನು ಅಂಗೀಕರಿಸಿ ಮುಸ್ಲಿಮನಾಗಿರುವನೆಂದಾದರೆ ಅವನನ್ನು ಸ್ವಂತ ಸಹೋದರನಂತೆ ಕಾಣಲು ಮತ್ತು ವ್ಯವಹರಿಸಲು ಸಾಧ್ಯವಾಗಬೇಕು. ಈ ರೀತಿ ಮಾಡಲು ಸಾಧ್ಯವಿರುವವನೇ ನಿಜವಾದ ಮುಸ್ಲಿಮ್. ಇನ್ನೊಂದು ಪ್ರವಾದಿ ವಚನವಲ್ಲಿ ಈ ವಿಷಯವನ್ನು ಹೀಗೆ ಪ್ರಸ್ತುತ ಪಡಿಸಲಾಗಿದೆ. 'ಯಾರ ಕೈ ಮತ್ತು ನಾಲಗೆಯಿಂದ ಇತರ ಮುಸ್ಲಿಮರು ಸುರಕ್ಷಿತರಾಗಿರುವರೋ ಅವನೇ ನಿಜವಾದ ಮುಸ್ಲಿಮ್.' ಪರಸ್ಪರ ದ್ವೇಷಿಸುವವರು, ದ್ರೋಹ ಬಗೆಯುವವರು ನಿಜವಾದ ಮುಸ್ಲಿಮರಲ್ಲ ಎಂಬುದೇ ಇದರ ಸಾರಾಂಶವಾಗಿದೆ.

ಓರ್ವ ಮುಸ್ಲಿಮನಿಗೆ ಇನ್ನೋರ್ವ ಮುಸ್ಲಿಮನೊಂದಿಗಿರುವ ಸಹೋದರ ಸಂಬಂಧವನ್ನು ಯಾವ ರೀತಿಯಲ್ಲಿ ಪ್ರಕಟಪಡಿಸಬೇಕೆಂಬುದನ್ನು ಮುಂದುವರಿಯುತ್ತಾ ವಿವರಿಸಲಾಗಿದೆ. ಒಂದನೆಯದಾಗಿ ಪರಸ್ಪರ ಆಕ್ರಮಿಸದಿರುವುದು. ಆಕ್ರಮ ಎಂದು ಅನುವಾದಿಸಲಾಗಿರುವುದರ ಮೂಲ ಪದ 'ಳಝುಲ್‌ಮ್'. ಈ ಪದಕ್ಕೆ ಮರ್ದನ, ದ್ರೋಹ, ಧಿಕ್ಕಾರ ಎಂಬಿತ್ಯಾದಿ

ಅರ್ಥಗಳಿವೆ. ಈ ಪ್ರಸ್ತುತ ಪ್ರವಾದಿ ವಚನದಲ್ಲಿರುವ 'ಝುಲ್‌ಮುಹ' ಎಂಬ ಪದಕ್ಕೆ ಈ ಎಲ್ಲಾ ಅರ್ಥಗಳೂ ಸೂಕ್ತವೆನಿಸುತ್ತದೆ. ಎರಡನೆಯದಾಗಿ ಪರಸ್ಪರರನ್ನು ವಂಚಿಸದಿರುವುದು. ಇಲ್ಲಿ ವಂಚಿಸದಿರುವುದು ಎಂದು ಅನುವಾದಿಸಲಾಗಿರುವುದು 'ವಲಾ ಯಕ್‌ದುಲುಹು' ಎಂಬ ವಾಕ್ಯವನ್ನಾಗಿದೆ. ಈ ಪದವು ಬಳಸಲ್ಪಟ್ಟಿರುವುದು ಸಂಪತ್ತಿನ ವಿಷಯದಲ್ಲಿ ನಡೆಯುವ ವಂಚನೆಯ ಕುರಿತಲ್ಲ, ಒಬ್ಬನು ಇನ್ನೊಬ್ಬನಿಂದ ನಿರೀಕ್ಷಿಸುವ ಮತ್ತು ಅವನ ಹಕ್ಕಿನಲ್ಲಿ ಬರುವ ಸಹಾಯ ಮತ್ತು ಸಹಕಾರವನ್ನು ಕೊಡದಿರುವುದು ಎಂಬುದು ಇಲ್ಲಿ ಇದರ ಅರ್ಥವಾಗಿದೆ. ನೀವು ಒಂದು ದುರ್ಘಟನೆಯಲ್ಲಿ ಸಿಲುಕಿ ಬಿಟ್ಟಿರಿ. ಇನ್ನೋರ್ವನಿಗೆ ವಿಷಯ ತಿಳಿಯಿತು. ಆ ವ್ಯಕ್ತಿಗೆ ನಿಮ್ಮನ್ನು ರಕ್ಷಿಸುವ ಸಾಮರ್ಥ್ಯವಿದೆ. ಈ ಸಮಯದಲ್ಲಿ ಅವನು ಸಹಾಯ ನೀಡುವುದು ಅವನ ಬಾಧ್ಯತೆಯಾಗಿದೆ. ಆ ಸಹಾಯವನ್ನು ನೀವು ನಿರೀಕ್ಷಿಸುತ್ತೀರಿ. ಆದರೆ ಆ ವ್ಯಕ್ತಿ ನಿಮಗೆ ಸಹಾಯ ಮಾಡುವುದಿಲ್ಲ ಎಂದಾದರೆ ಅದು ವಂಚನೆಯಾಗಿದೆ. ಅವನು ಸ್ವತಃ ಹೊಣೆಗಾರಿಕೆಯನ್ನು ವಂಚಿಸಿರುವನು. ನಿಮಗೆ ಆ ವ್ಯಕ್ತಿಯ ಬಗ್ಗೆ ಇದ್ದ ವಿಶ್ವಾಸಕ್ಕೂ ವಂಚನೆಯಾಯಿತು. ಈ ರೀತಿಯ ವಿಶ್ವಾಸ ದ್ರೋಹಕ್ಕೆ 'ಖಿದ್‌ಲ್' ಎಂದು ಹೇಳಲಾಗುತ್ತದೆ. ಪರಸ್ಪರ ಸುಳ್ಳು ಹೇಳದಿರುವುದು ಮೂರನೆಯ ವಿಷಯವಾಗಿದೆ. ಸಮಾಜದಲ್ಲೂ ಸಹೋದರತೆ, ಸೌಹಾರ್ದ ಬೆಳೆಯ ಬೇಕಿದ್ದರೆ, ನೆಲೆ ನಿಲ್ಲಬೇಕಿದ್ದರೆ ಪರಸ್ಪರ ಸತ್ಯ ಹೇಳಬೇಕಾದುದರ ಅಗತ್ಯವನ್ನು ಪ್ರತ್ಯೇಕ ಹೇಳಬೇಕಾಗಿಲ್ಲವಲ್ಲವೇ? ಪರಸ್ಪರ ಸಹೋದರತೆಯ ಪ್ರಕಟಣೆಯು ನಾಲ್ಕನೆಯ ಉಪಾಧಿಯಾಗಿದೆ. ಇತರರನ್ನು ನಿಂದ್ಯರು, ನಿಕೃಷ್ಟರು ಎಂದು ಭಾವಿಸುವವರಿಗೆ, ಕೆಟ್ಟದಾಗಿ ವರ್ತಿಸುವವರಿಗೆ ಎಂದೂ ಇತರರೊಂದಿಗೆ ಸಹೋದರರಂತಿರಲು ಸಾಧ್ಯವಿಲ್ಲ. ಸಮಾನತೆ ಮತ್ತು ಪರಸ್ಪರ ಗೌರವಪೂರ್ವಕ ವರ್ತನೆಯಿಂದ ಸಹೋದರತೆಯು ಆರಂಭವಾಗುತ್ತದೆ. ಇತರರೊಂದಿಗಿರುವ ನಿಕೃಷ್ಟ ವರ್ತನೆಯು ಸಹೋದರತೆಗೆ ಮಾರಕವಾಗಿದೆ. ಅಹಂಕಾರ, ಗರ್ವ ಮಾತ್ರ ಇದರಿಂದ ಹೆಚ್ಚುತ್ತದೆ. ಇದು ದೇವಭಯವನ್ನು ನಿಷೇಧಿಸುತ್ತದೆ.

ಈ ಮೇಲೆ ಪ್ರಸ್ತಾಪಿಸಲಾದ ಎಲ್ಲಾ ಗುಣ ಸ್ವಭಾವಗಳ ವಾಸ್ತವಿಕ ಮೂಲ ನೆಲೆ ತಕ್ವಾ ಆಗಿದೆ. ಅಂದರೆ ದೇವಭಯ. ತಕ್ವಾವು ಬಾಹ್ಯ ರೂಪ ಮತ್ತು ಕರ್ಮಗಳಲ್ಲಿ ನೆಲೆ ನಿಲ್ಲುವುದಲ್ಲ, ಅದು ಮನುಷ್ಯನ ಮನಸ್ಸಿನಲ್ಲಿರುತ್ತದೆ. ಮೂರು ಬಾರಿ ಈ ವಿಷಯವನ್ನು ಪ್ರಸ್ತಾಪಿಸಿರುವುದೇ ಪ್ರವಾದಿ(ಸ) ಇದಕ್ಕೆ ನೀಡಿರುವ ಮಹತ್ವವನ್ನು ಸೂಚಿಸುತ್ತದೆ. ಮೊದಲು ಮನಸ್ಸನ್ನು ಸಂಸ್ಕರಿಸಿ ಅದನ್ನು ತಕ್ವಾದಿಂದ ತುಂಬಬೇಕು. ಆಗಲೇ ವ್ಯಕ್ತಿಯಲ್ಲಿ ಈ ಮೇಲೆ ಹೇಳಿದ ಗುಣಗಳು ಬೆಳೆಯುತ್ತವೆ.

ಕೊನೆಯದಾಗಿ ಮೇಲೆ ಹೇಳಿದ ನಿರ್ದೇಶನಗಳ ಮತ್ತು ಅದನ್ನು ಪ್ರಾಯೋಗಿಕ ರೂಪದಲ್ಲಿ ತರುವುದರ ಉದ್ದೇಶವನ್ನು ಇನ್ನೊಮ್ಮೆ ಸ್ಪಷ್ಟಪಡಿಸಲಾಗಿದೆ.

ಮೂಲದಲ್ಲಿರುವ 'ಶರ್‍ರ್' ಎಂಬ ಪದವನ್ನು 'ಪಾಪ' ಎಂದು ಅನುವಾದಿಸಲಾಗಿದೆ. ಕೆಡುಕು, ದ್ರೋಹ, ಆಪತ್ತು ಎಂಬಿತ್ಯಾದಿ ಅರ್ಥಗಳೂ ಈ ಪದಕ್ಕಿವೆ. ಈ ಎಲ್ಲಾ ಅರ್ಥಗಳು ಇಲ್ಲಿ

ಪ್ರಸ್ತುತವಾಗಿದೆ. ಯಾವ ಅರ್ಥದಲ್ಲಿ ತೆಗೆದುಕೊಂಡರೂ ಅದು ಅಲ್ಲಾಹನ ಬಳಿ ಶಿಕ್ಷಾರ್ಹವಾದ ಪಾಪ ಎಂದೇ ಆಗುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಒಬ್ಬ ವ್ಯಕ್ತಿ ಅಲ್ಲಾಹನ ಬಳಿ ಶಿಕ್ಷಾರ್ಹನಾಗುವುದಕ್ಕೆ, ಅವನು ತನ್ನ ಮುಸ್ಲಿಮ್ ಸಹೋದರನನ್ನು ನಿಂದಿಸಿರುವನು ಎಂಬ ಕಾರಣವೇ ಸಾಕಾಗುತ್ತದೆ. ಇತರರನ್ನು ನಿಂದಿಸುವುದಕ್ಕಿರುವ ಕಾರಣ ಅಹಂಕಾರ ಎಂದು ಈ ಮೊದಲೇ ಹೇಳಲಾಗಿದೆ. ಅದು ಸತ್ಯನಿಷೇಧಿಗಳ ಗುಣ ಸ್ವಭಾವವಾಗಿದೆ. ಮನಸ್ಸಿನಲ್ಲಿ ಒಂದು ಅಣುಗಾತ್ರದಷ್ಟು ಅಹಂಕಾರವಿದ್ದರೂ ಅಂತಹ ವ್ಯಕ್ತಿ ಸ್ವರ್ಗವನ್ನು ಪ್ರವೇಶಿಸಲಾರನೆಂದು ಬಹಳ ದೃಢವಾಗಿ ಇನ್ನೊಂದು ಪ್ರವಾದಿ ವಚನದಲ್ಲಿ ಪ್ರಸ್ತಾಪಿಸಲಾಗಿದೆ.

ಓರ್ವ ವ್ಯಕ್ತಿ ಧಾರಾಳ ನಮಾಝ್ ನಿರ್ವಹಿಸುತ್ತಾನೆ. ಉಪವಾಸವನ್ನು ಆಚರಿಸುತ್ತಾನೆ. ಒಂದಕ್ಕಿಂತ ಅಧಿಕ ಭಾರಿ ಹಜ್ಜ್ ಯಾತ್ರೆಗೂ ಹೋಗುತ್ತಾನೆ. ಈ ರೀತಿ ಮಾಡುವವನು ನಿಜವಾಗಿಯೂ ಪುಣ್ಯವನ್ನು ಸಂಪಾದಿಸುತ್ತಾನೆ. ಆದರೆ ಈ ರೀತಿಯ ಒಳಿತುಗಳು ಇರುವುದರೊಂದಿಗೆ ಇತರರನ್ನು ಗೌರವಿಸದವನು, ಎಲ್ಲರೊಂದಿಗೂ ನಿಕೃಷ್ಟವಾಗಿ, ಕಡೆಗಣಿಸಿ ವರ್ತಿಸುವವನೂ ಆಗಿದ್ದರೆ? ಈ ಒಂದೇ ಕೆಡುಕು ಅವನನ್ನು ಅಲ್ಲಾಹನ ಬಳಿ ಶಿಕ್ಷಾರ್ಹನಾಗಿಸಲು ಸಾಕಾಗುತ್ತದೆ. ಇದನ್ನೇ ಈ ಹದೀಸ್‌ನ ಮೂಲಕ ಪ್ರವಾದಿ(ಸ) ಕಲಿಸಿರುವರು.

'ಮುಸ್ಲಿಮನ ಎಲ್ಲವೂ' ಎಂಬುದರ ಉದ್ದೇಶ ಮುಸ್ಲಿಮನಿಗೆ ಅಲ್ಲಾಹನು ನೀಡಿರುವ ಎಲ್ಲ ಅನುಗ್ರಹಗಳು, ಅವಕಾಶಗಳು ಎಂದಾಗಿದೆ. ಅದು ಇನ್ನೋರ್ವ ಮುಸ್ಲಿಮನಿಗೆ ನಿಷಿದ್ಧವಾಗಿದೆ. 'ಹರಾಮ್' ಎಂಬ ಪದದ ಮೂಲ ಅರ್ಥ ಗೌರವಾರ್ಹ ಎಂದಾಗಿದೆ. 'ಹುರುಮತ್' ಎಂದರೆ ಆದರಣೀಯತೆ, ಪವಿತ್ರತೆ. ಪವಿತ್ರವಾದವುಗಳೊಂದಿಗೆ ಅದರ ಪಾವಿತ್ರ್ಯಕ್ಕೆ ಒಗ್ಗದ ವಿಷಯಗಳು ನಿಷಿದ್ಧವಲ್ಲವೇ? ಅದರ ಕಾರಣದಿಂದಾಗಿ ಅದಕ್ಕೆ ನಿಷಿದ್ಧ ಎಂಬ ಅರ್ಥವು ಬಂದಿರುತ್ತದೆ. ಮುಸ್ಲಿಮನಿಗೆ ಬೇರೆ ಮುಸ್ಲಿಮನ ಸಂಪತ್ತು, ಅಭಿಮಾನ ಮತ್ತು ರಕ್ತ ನಿಷಿದ್ಧ ಎಂಬುದರ ಅರ್ಥ ಇತರ ಮುಸ್ಲಿಮರ ದೇಹ, ಅಭಿಮಾನ ಮತ್ತು ಸಂಪತ್ತನ್ನು ಮುಸ್ಲಿಮನು ಗೌರವದೊಂದಿಗೆ ನೋಡಬೇಕು. ಅದಕ್ಕೆ ಕೇಡುಂಟಾಗುವಂತಹ ಎಲ್ಲಾ ವರ್ತನೆಗಳೂ ನಿಷಿದ್ಧ ಎಂದೂ ಆಗುತ್ತದೆ. ಮುಸ್ಲಿಮನ ಎಲ್ಲವೂ ಎಂಬುದನ್ನು ವಿವರಿಸುತ್ತಾ ರಕ್ತ; ಸಂಪತ್ತು ಮತ್ತು ಅಭಿಮಾನವನ್ನು ಪ್ರಸ್ತಾಪಿಸಲಾಗಿದೆ. ಮುಸ್ಲಿಮನಿಗೆ ಸೇರಿದ ಎಲ್ಲವೂ ಈ ಮೂರು ವಿಷಯಕ್ಕೆ ಸಂಬಂಧಪಟ್ಟವುಗಳೇ ಆಗಿರುತ್ತದೆ.

ಮದೀನದಲ್ಲಿ ಮುಸ್ಲಿಮರು ಒಂದು ಪ್ರತ್ಯೇಕ ಸಮುದಾಯವಾಗಿ ರೂಪೀಕರಣಗೊಂಡು ಬಂದ ಸಂದರ್ಭದಲ್ಲಿ, ಆ ಸಮೂಹವು ಪ್ರೀತಿಪೂರ್ವಕವೂ ಸಮಾಧಾನಕರವೂ ಸಹಕಾರಿ ಮನೋಭಾವವುಳ್ಳದ್ದೂ ಆಗಿ ದೃಢವಾಗಿ ನಿಲ್ಲಲು ಅಗತ್ಯವಿರುವ ಶಿಕ್ಷಣವನ್ನು ನೀಡುತ್ತಾ ಬರುತ್ತಿದ್ದ ಸಂದರ್ಭದಲ್ಲಿ ಪ್ರವಾದಿ(ಸ) ನೀಡಿರುವ ನಿರ್ದೇಶನಗಳಿವು. ಅಂದು ಅವರ ಮುಂದಿದ್ದುದು ಅವರಿಗೆ ಅಪರಿಚಿತವಾದ ಒಂದು ಸಂಸ್ಕಾರವಾಗಿತ್ತು. ಪ್ರೀತಿ, ಸಮಾಧಾನ, ಸಹಕಾರ ಮನೋಭಾವ ತುಂಬಿ ತುಳುಕುವ ಮಾದರಿ ಸಮಾಜವನ್ನು ಸ್ವಯಂ

ಪುನಃ ನಿರ್ಮಿಸುವುದು ಅವರ ಮುಖ್ಯ ಗುರಿಯಾಗಿತ್ತು. ಆದುದರಿಂದಲೇ ಈ ರೀತಿಯ ಹದೀಸ್‌ಗಳಲ್ಲಿ ಒಬ್ಬ ಮುಸ್ಲಿಮನಿಗೆ ಇನ್ನೊಬ್ಬ ಮುಸ್ಲಿಮನೊಂದಿಗಿರುವ ಹಕ್ಕುಗಳನ್ನು ಪ್ರಸ್ತಾಪಿಸಲಾಗಿದೆ. ಪ್ರವಾದಿ(ಸ) ಉಪದೇಶಿಸಿರುವ ಈ ವಿಶಿಷ್ಟವಾದ ಗುಣ ಸ್ವಭಾವಗಳೆಲ್ಲ ಮುಸ್ಲಿಮರಲ್ಲದವರೊಂದಿಗೂ ಇರಬೇಕಿಲ್ಲ ಎಂಬುದು ಇದರರ್ಥವಲ್ಲ. ಅದು ಬೇರೆಯೇ ವಿಷಯವಾಗಿದೆ. ಮೊದಲು ನಮ್ಮ ಮಧ್ಯೆ ಉತ್ತಮ ವರ್ತನೆಗಳನ್ನು ಅಭ್ಯಾಸ ಮಾಡಿಕೊಳ್ಳಬೇಕು. ಅದನ್ನೇ ಇಲ್ಲಿ ತಿಳಿಸಲಾಗಿದೆ. ಎಲ್ಲ ಮನುಷ್ಯರೊಂದಿಗೂ ಪ್ರೀತಿ ವಿಶ್ವಾಸದೊಂದಿಗೆ, ಉತ್ತಮ ಒಡನಾಟದೊಂದಿಗೆ ವ್ಯವಹರಿಸಬೇಕೆನ್ನುವ ವಿಷಯವು ಬೇರೆ ಸಂದರ್ಭಗಳಲ್ಲಿ ನಿರ್ದೇಶಿಸಲ್ಪಟ್ಟಿವೆ.



# 43. ಸಾಕ್ಷ್ಯ ಮತ್ತು ಪ್ರಮಾಣ

عَنِ ابْنِ عَبَّاسٍ أَنَّ رَسُولَ اللَّهِ ﷺ قَالَ لَوْ يُعْطَى النَّاسُ لاَدَّعَى رِجَالٌ
أَمْوَالَ قَوْمٍ وَدِمَائَهُمْ لَكِنَّ الْبَيِّنَةَ عَلَى الْمُدَّعِي وَالْيَمِينُ عَلَى مَنْ أَنْكَرَ (بيهقي)

ಪ್ರವಾದಿ(ಸ) ಹೇಳಿರುವುದಾಗಿ ಇಬ್ನು ಅಬ್ಬಾಸ್ ವರದಿ ಮಾಡುತ್ತಾರೆ: ಜನರಿಗೆ ಅವರ ಬೇಡಿಕೆಗನುಸಾರ ಕೊಡಲ್ಪಡುವುದಾದರೆ ಕೆಲವರು ಇನ್ನು ಕೆಲವರ ಸಂಪತ್ತು ಮತ್ತು ರಕ್ತದಲ್ಲೂ ತಮ್ಮ ಹಕ್ಕು ಸ್ಥಾಪನೆ ಮಾಡಬಹುದು. ಆದರೆ ಸಾಕ್ಷಿ ಸಮರ್ಪಿಸಬೇಕಾದ ಬಾಧ್ಯತೆ ವಾದಿಯದ್ದಾಗಿದೆ. ವಾದವನ್ನು ನಿರಾಕರಿಸುವವನು ಪ್ರಮಾಣ ಮಾಡಬೇಕು. (ಬೈಹಕಿ)

ಇಸ್ಲಾಮಿನ ನ್ಯಾಯ ವ್ಯವಸ್ಥೆಯ ಬಹಳ ಪ್ರಧಾನವಾದ ನಿಯಮಗಳ ಪೈಕಿ ಒಂದನ್ನು ಈ ವಚನದ ಮೂಲಕ ಪ್ರವಾದಿ(ಸ) ಕಲಿಸಿರುವರು. ಇಷ್ಟಪಡುವುದನ್ನೆಲ್ಲ ತಮ್ಮದಾಗಿಸಿಕೊಳ್ಳಬೇಕೆಂಬ ಬಯಕೆ ಸಹಜವಾಗಿದೆ. ಆದರೆ ಎಲ್ಲರೂ ಅದನ್ನು ಸಮಾನವಾಗಿ ಪ್ರಾಯೋಗಿಕ ರೂಪದಲ್ಲಿ ತರ ಬಯಸಿದರೆ ಸಾರ್ವತ್ರಿಕ ಅರಾಜಕತೆ ಉಂಟಾಗಬಹುದು. ಆದುದರಿಂದಲೇ ವಸ್ತುಗಳನ್ನು ಗಳಿಸುವುದರಲ್ಲಿಯೂ ಸ್ವಂತವಾಗಿಸಿಕೊಳ್ಳುವುದರ ಬಗ್ಗೆಯೂ ದೇವನ ಶರೀಅತ್ ಮನುಷ್ಯ ಜೀವನದ ಆರಂಭ ಕಾಲದಿಂದಲೇ ಕೆಲವು ನಿಯಮ ಮತ್ತು ವ್ಯವಸ್ಥೆಗಳನ್ನು ನಿಶ್ಚಯಿಸಿದೆ. ಈ ನಿಯಮಗಳನ್ನು, ವ್ಯವಸ್ಥೆಗಳನ್ನು ಪಾಲಿಸುವಾಗಲೂ ವ್ಯಕ್ತಿಗಳ ಮಧ್ಯೆ ಹಕ್ಕುಗಳ ವಿಷಯದಲ್ಲಿ ವಾದ-ವಿವಾದಗಳು ಉಂಟಾಗಬಹುದು. ಈ ರೀತಿಯ ವಾದ-ವಿವಾದಗಳನ್ನು ಯಾವ ರೀತಿಯಲ್ಲಿ ಬಗೆಹರಿಸಬೇಕೆಂದು ನ್ಯಾಯಾಲಯ ಮತ್ತು ಮಧ್ಯಸ್ತಿಕೆ ವಹಿಸುವವರಿಗೆ ಈ ಹದೀಸಿನ ಮೂಲಕ ನಿರ್ದೇಶನಗಳನ್ನು ನೀಡಲಾಗಿದೆ.

ಒಂದು ಸಂಪತ್ತು ಅಥವಾ ಹಕ್ಕು ತನಗೆ ಸೇರಬೇಕೆಂದು ಒಬ್ಬ ವ್ಯಕ್ತಿ ಸುಮ್ಮನೆ ವಾದಿಸುತ್ತಾನೆಂದ ಮಾತ್ರಕ್ಕೆ ಮಧ್ಯಸ್ತಿಕೆದಾರರು, ನ್ಯಾಯಾಲಯ ಅದನ್ನು ಅವನದೆಂದು ತೀರ್ಮಾನಿಸಿ ಬಿಡಬಾರದು. ವಾದಿಸುವವನು ಎಷ್ಟೇ ಸಣ್ಣವನಿರಲಿ ಅಥವಾ ದೊಡ್ಡವನೇ ಆಗಿರಲಿ, ಈ ರೀತಿ ತೀರ್ಮಾನಿಸಿ ಬಿಟ್ಟರೆ ಯಾರಿಗೂ ಇತರರ ಸಂಪತ್ತಿನಲ್ಲಿ ಮಾತ್ರವಲ್ಲ ಶರೀರ ಮತ್ತು ಪ್ರಾಣದಲ್ಲೂ ಹಕ್ಕು ಸ್ಥಾಪಿಸುವ ಅವಸ್ಥೆ ಉಂಟಾಗಬಹುದು. ಒಬ್ಬನ ಸಂಪತ್ತನ್ನು ತನ್ನದೆಂದು ವಾದಿಸಿಬಿಟ್ಟರೆ ಸಿಗುವುದೆಂದಾದರೆ, ತನಗೆ ಇಷ್ಟವಾಗುವ ಯಾವ ವಸ್ತುವಾದರೂ

ಇತರರ ಬಳಿಯಿದ್ದರೆ ಅದನ್ನು ತನ್ನದಾಗಿಸಲು ಮುಂದುವರಿಯುವರು, ಅದೇ ರೀತಿ ಒಬ್ಬ ವ್ಯಕ್ತಿಯನ್ನು ಕೊಲೆಗಾರನೆಂದೋ ದರೋಡೆಕೋರನೆಂದೋ ಇನ್ನೊಬ್ಬರು ಆರೋಪಿಸಿದರೆ ಆರೋಪಿತ ವ್ಯಕ್ತಿ ಶಿಕ್ಷಿಸಲ್ಪಡುವನು ಎಂದಾದರೆ, ಅಸೂಯೆ ಮತ್ತು ದ್ವೇಷ ಇರುವ ಯಾರನ್ನೂ ಈ ರೀತಿ ತಪ್ಪುಗಳನ್ನು ಆರೋಪಿಸಿ, ಶಿಕ್ಷೆ ಸಿಗುವಂತೆ ಮಾಡಲು ಹಿಂದೆ-ಮುಂದೆ ನೋಡದ ಅದೆಷ್ಟು ಮಂದಿ ಸಮಾಜದಲ್ಲಿರಬಹುದು?

ಆದುದರಿಂದ ಇತರರ ಮೇಲೆ ಹಕ್ಕುಚ್ಯುತಿಯ ಆರೋಪವನ್ನು ಹೊರಿಸುವವರು ತಮ್ಮ ವಾದವು ಸತ್ಯ ಎನ್ನುವುದಕ್ಕೆ ಸಾಕ್ಷ್ಯಗಳನ್ನು ಒದಗಿಸಬೇಕಾಗುತ್ತದೆ. ಸರಿಯಾದ ಸಾಕ್ಷ್ಯವಿಲ್ಲದೆ ಆರೋಪಿಸುವವರ ಆರೋಪವು ವಿರೋಧಿ ಬಣದ ವರ್ತನೆಯನ್ನು ಆಶ್ರಯಿಸಿಕೊಂಡಿರುತ್ತದೆ. ಪ್ರತ್ಯಾರೋಪವನ್ನು ವಿರೋಧಿಸುತ್ತಾ ಆಣೆ ಹಾಕುವುದಾದರೆ, ವಾದಿಯ ವಾದವನ್ನು ತಳ್ಳಿ ಹಾಕಬೇಕು. ಅಂದರೆ ಆರೋಪಿಸುವವರ ವಾದವನ್ನು ಸತ್ಯದ ಸಾಕ್ಷಿಯಾಗಿ ಪರಿಗಣಿಸಲಾಗುವುದಿಲ್ಲ, ಆರೋಪಿಸಲ್ಪಟ್ಟವರು ಆರೋಪಿಸಿದವನ ವಾದವನ್ನು ಅಂಗೀಕರಿಸುತ್ತಾರೆಂದಾದರೆ ನ್ಯಾಯವು ಆರೋಪಿಸಿದವರ ಪರವಾಗಿ ನೀಡಲ್ಪಡುವುದು.

ಒಟ್ಟಿನಲ್ಲಿ ಇತರರ ವಸ್ತುಗಳನ್ನು ತಮ್ಮದೆಂದು ವಾದಿಸುವವರು ಅದಕ್ಕೆ ಅಗತ್ಯವಾದ ಸಾಕ್ಷ್ಯಗಳನ್ನು ಮುಂದಿರಿಸಬೇಕಾದುದು ಅವರ ಕರ್ತವ್ಯವಾಗಿರುತ್ತದೆ. ಸಾಕ್ಷ್ಯಗಳಿಲ್ಲದಿದ್ದರೆ ಅವರ ವಾದವು ನೆಲೆನಿಲ್ಲುವುದಿಲ್ಲ, ಯಾರ ವಿರುದ್ಧವಾಗಿ ವಾದ ನಡೆಸಲಾಗುತ್ತದೋ ಆ ವ್ಯಕ್ತಿ ಒಂದೋ ಅದನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು. ಅಂಗೀಕಾರ ನೀಡಿದರೆ ನ್ಯಾಯವು ವಾದಿಯ ಪರವಾಗಿರುವುದು. ಒಂದು ವೇಳೆ ನಿಷೇಧಿಸಿದರೆ ಆಣೆ ಹಾಕುವ ಕರ್ತವ್ಯ ಅವನದಾಗಿರುತ್ತದೆ. ವಾದಿಯು ತನ್ನ ವಾದವು ಸತ್ಯವೆನ್ನುವುದನ್ನು ಸಾಬೀತು ಪಡಿಸಲು ನಿಷೇಧಿಸಲು ಸಾಧ್ಯವಾದ ಸಾಕ್ಷ್ಯಗಳನ್ನು ಹಾಜರು ಪಡಿಸಿದರೆ ಆ ಬಳಿಕ ಪ್ರತಿವಾದಿಯು ಅದನ್ನು ನಿಷೇಧಿಸುತ್ತಾ ಆಣೆ ಹಾಕುವುದು ನಿಷ್ಫಲವಾಗುವುದು.

ಮೂಲದಲ್ಲಿರುವ 'ದಿಮಾವುಹುಮ್' ಎಂಬ ಪದದ ಭಾಷಾರ್ಥ ಅವರ ರಕ್ತ ಎಂದಾಗಿದೆ. ಜೀವನವನ್ನು ಉದ್ದೇಶಿಸಿ ಸಾಧಾರಣವಾಗಿ 'ದಿಮಾಅ್' ಎಂಬ ಪದವನ್ನು ಉಪಯೋಗಿಸಲಾಗುತ್ತದೆ. ಆಯುಧದೊಂದಿಗೆ ಆಕ್ರಮಣ ನಡೆಸುವುದನ್ನು, ವಧಿಸುವುದನ್ನು ನಾವು ರಕ್ತ ಹರಿಸುವುದು ಎನ್ನುತ್ತೇವಲ್ಲವೇ? ಇದೇ ಅರ್ಥದಲ್ಲಿ ಅರಬಿ ಭಾಷೆಯಲ್ಲಿ 'ಸಫಕುದ್ದಿಮಾಅ್' ಎಂದು ಹೇಳಲಾಗುತ್ತದೆ. ಪ್ರಸ್ತುತ ಪ್ರವಾದಿ ವಚನದಲ್ಲಿ 'ದಿಮಾವುಹುಮ್' ಎಂದಿರುವುದರ ಉದ್ದೇಶ ಕೊಲೆ ಅಥವಾ ಶಾರೀರಿಕ ಗಾಯಗಳನ್ನು ಉಂಟು ಮಾಡುವುದಾಗಿದೆ. ಕೊಲೆಪಾತಕವೆಸಗಿದವನು ವಧ ಶಿಕ್ಷೆಗೂ ಗಾಯಗಳನ್ನು ಮಾಡಿದವನು ಪ್ರತೀಕಾರಕ್ಕೂ ಅರ್ಹನಾಗಿರುವನಲ್ಲವೇ? ಜನರು ಇತರರ ಮೇಲೆ ಯಾವ ಆಧಾರವೂ ಇಲ್ಲದೆ ಕೊಲೆ ಆರೋಪ ಹೊರಿಸಬಹುದು ಮತ್ತು ಪ್ರತೀಕಾರ ಬಯಸಬಹುದು ಎಂಬುದು ಈ ಹೇಳಿಕೆಯ ಸಾರಾಂಶವಾಗಿದೆ.

# 44. ಅಶ್ಲೀಲತೆಯ ಪ್ರಚಾರ

عَنِ ابْنِ مسعود رَضِيَ اللّٰهُ عَنْهُ عَنِ النَّبِيِّ ﷺ إِنَّ مِنْ أَشَرِّ النَّاسِ
مَنْزِلَةً عِنْدَ اللّٰهِ يَوْمَ الْقِيَامَةِ الرَّجُلُ يُفْضِي إِلَى الْمَرْأَةِ وَتُفْضِي إِلَيْهِ ثُمَّ
يَنْشُرُ أَحَدُهُمَا سِرَّ صَاحِبِهِ (مسلم)

ಪ್ರವಾದಿ(ಸ) ಹೇಳಿರುವುದಾಗಿ ಹ.ಇಬ್ನ್ ಮಸ್‌ವೂದ್(ರ) ವರದಿ ಮಾಡುತ್ತಾರೆ: ''ಅವಳು ಅವನಲ್ಲಿ ಅನುರಕ್ತಳಾಗುತ್ತಾಳೆ. ಒಬ್ಬ ವ್ಯಕ್ತಿ ಓರ್ವ ಸ್ತ್ರೀಯೊಂದಿಗೆ ಲೈಂಗಿಕ ಸಬಂಧವನ್ನು ಹೊಂದುತ್ತಾನೆ. ಅನಂತರ ಅವರ ಪೈಕಿ ಒಬ್ಬರು ತಮ್ಮ ಒಡನಾಡಿಯ ರಹಸ್ಯಗಳನ್ನು ಬಹಿರಂಗ ಗೊಳಿಸುತ್ತಾರೆಂದಾದರೆ ಅಂತಹ ವ್ಯಕ್ತಿ ಅಂತ್ಯದಿನದಲ್ಲಿ ಅಲ್ಲಾಹನ ದೃಷ್ಟಿಯಲ್ಲಿ ಅತ್ಯಂತ ನಿಕೃಷ್ಟ ವ್ಯಕ್ತಿಯಾಗಿದ್ದಾನೆ.'' (ಮುಸ್ಲಿಮ್)

ಅಸಭ್ಯ ವಿಷಯಗಳನ್ನು ಅಶ್ಲೀಲತೆಯನ್ನು ಹೇಳಿ ಸಮೂಹದಲ್ಲಿ ಅದನ್ನು ಪ್ರಚಾರ ಮಾಡುವುದರ ದುಷ್ಪರಿಣಾಮದ ಕುರಿತು ಈ ಪ್ರವಾದಿ ವಚನವು ನಮ್ಮನ್ನು ಎಚ್ಚರಿಸುತ್ತದೆ. ಮಾತು ಮತ್ತು ಕೃತಿಯಲ್ಲಿ ಸಭ್ಯತೆ ಮತ್ತು ಮರ್ಯಾದೆಯನ್ನು ಪಾಲಿಸುವ ಒಂದು ಸಮಾಜವನ್ನು ಇಸ್ಲಾಮ್ ಕಟ್ಟಿ ಬೆಳೆಸ ಬಯಸುತ್ತದೆ. ಅಶ್ಲೀಲ ಕೆಲಸಗಳನ್ನು ಮಾಡುವಂತೆಯೇ ಅದನ್ನು ಹೇಳುತ್ತಾ ತಿರುಗುವುದು ಕೂಡಾ ಕೆಡುಕಾಗಿದೆ.

ವ್ಯಕ್ತಿ ಕೆಲವು ದುರ್ಬಲ ಗಳಿಗೆಯಲ್ಲಿ ದಾರಿ ತಪ್ಪಿ ಕೆಟ್ಟ ಕೆಲಸಗಳನ್ನು ಮಾಡಿ ಬಿಟ್ಟಿರ ಬಹುದು. ಈ ರೀತಿಯ ತಪ್ಪು ಸಂಭವಿಸಿಬಿಟ್ಟರೆ ವ್ಯಕ್ತಿ ಅದನ್ನು ಅಲ್ಲಾಹನ ಮುಂದೆ ಒಪ್ಪಿಕೊಂಡು ಪ್ರಾಯಶ್ಚಿತ್ತ ಪಡಬೇಕು. ಸಮೂಹದಲ್ಲಿ ಅದನ್ನು ಹೇಳುತ್ತಾ ಪ್ರಚಾರ ಮಾಡಬಾರದು. ಬೇರೆಯವರೊಂದಿಗೆ ಹಂಚಿಕೊಳ್ಳಲಾಗದ, ಮಾಡಲಾಗದ ಹಲವು ವಿಷಯಗಳನ್ನು ಪರಸ್ಪರ ಹಂಚಿಕೊಳ್ಳಲು ಮಾಡಲು ಅವಕಾಶವಿರುವ ಸಂಬಂಧ ಪತಿ–ಪತ್ನಿಯರ ಮಧ್ಯೆ ಇರುತ್ತದೆ. ಆದರೂ ಅವರು ಪರಸ್ಪರ ನಡೆಸಿರುವ ರಹಸ್ಯ ವಿಷಯಗಳನ್ನು ಇತರರೊಂದಿಗೆ ಹೇಳಬಾರದು. ಈ ರೀತಿ ಹೇಳುವುದನ್ನು ಇಸ್ಲಾಮಿನಲ್ಲಿ ಅತಿ ನೀಚವಾದ ದುಷ್ಕೃತ್ಯವೆನ್ನಲಾಗಿದೆ. ರಹಸ್ಯವಾಗಿ ಮಾಡಲು ಅನುಮತಿ ಇರುವ ವಿಷಯಗಳನ್ನೇ ಬಹಿರಂಗ ಪಡಿಸುವುದು ಕೆಡುಕು ಎಂದಾದರೆ,

ರಹಸ್ಯವಾಗಿಯೂ ಮಾಡಬಾರದ್ದನ್ನು ಮಾಡುವುದರ ಮತ್ತು ನಿಷಿದ್ಧವಾಗಿರುವ ವಿಷಯಗಳನ್ನು ಬಹಿರಂಗ ಗೊಳಿಸುವುದರ ಪರಿಣಾಮವೇನೆಂಬುದನ್ನು ವಿವರಿಸಿ ಹೇಳಬೇಕಾಗಿಲ್ಲವಲ್ಲವೇ?

ಪವಿತ್ರ ಕುರ್‌ಆನ್ ಈ ವಿಷಯವನ್ನು ಬಹಳ ಸ್ಪಷ್ಟವಾಗಿ ತಿಳಿಸಿದೆ. ಅಲ್ಲಾಹನು ಹೇಳುತ್ತಾನೆ.

إِنَّ الَّذِينَ يُحِبُّونَ أَنْ تَشِيعَ الْفَاحِشَةُ فِي الَّذِينَ آمَنُوا لَهُمْ عَذَابٌ أَلِيمٌ فِي الدُّنْيَا وَالْآخِرَةِ. (النور)

'ಸತ್ಯವಿಶ್ವಾಸ ಸ್ವೀಕರಿಸಿಕೊಂಡವರ ಸಮೂಹದಲ್ಲಿ ಅಶ್ಲೀಲತೆ ಹರಡಬೇಕೆಂದು ಬಯಸುವವರು ಇಹಲೋಕದಲ್ಲೂ ಪರಲೋಕದಲ್ಲೂ ವೇದನಾಯುಕ್ತ ಶಿಕ್ಷೆಗೆ ಅರ್ಹರಾಗಿದ್ದಾರೆ.'

(ಪವಿತ್ರ ಕುರ್‌ಆನ್, ಅನ್ನೂರ್:19)

ವಾಸ್ತವದಲ್ಲಿ ನಡೆದ ವಿಷಯವಾಗಿದ್ದರೆ ಯಾವುದೇ ವಿಷಯವನ್ನು ಧಾರಾಳವಾಗಿ ಬಹಿರಂಗವಾಗಿ ಹೇಳುತ್ತಾ ಇರಬಹುದೆಂದು ಕೆಲವರು ತಪ್ಪಾಗಿ ಭಾವಿಸಿಕೊಂಡಿದ್ದಾರೆ. ಅಶ್ಲೀಲತೆ ಮತ್ತು ಅಸಭ್ಯ ವಿಷಯಗಳಿಗೆ ಸಂಬಂಧ ಪಟ್ಟಂತೆ ಅದು ಸತ್ಯವಾಗಿದ್ದರೂ ಸುಳ್ಳಾಗಿದ್ದರೂ ಅದನ್ನು ಹೇಳುತ್ತಿರುವುದು ಎಂಬುದೇ ಬಹಳ ದೊಡ್ಡ ಪಾಪ ಕೃತ್ಯವಾಗಿದೆ. ಸ್ವಂತ ಪತ್ನಿಯೊಂದಿಗೆ ನಡೆಸುವ ಸಭ್ಯತೆಗೆ ಮೀರಿದ ವಿಚಾರಗಳನ್ನು ಕೂಡಾ ಇತರರ ಮುಂದೆ ಹೇಳಬಾರದು. ಓರ್ವ ವ್ಯಕ್ತಿ ಸಂಭವಿಸಿದ ಅಥವಾ ಸಂಭವಿಸದಿರುವ ಒಂದು ಅಸಭ್ಯ ಕೆಲಸದ ಕುರಿತು ಹೇಳುತ್ತಿದ್ದಾನೆ ಎಂದಾದರೆ ಅದನ್ನು ಆಲಿಸುತ್ತಿರುವ ವ್ಯಕ್ತಿಗಳು ಅದನ್ನು ಪ್ರೋತ್ಸಾಹಿಸುವುದಾಗಲೀ ಅದಕ್ಕೆ ತಮ್ಮ ಮಾತನ್ನು ಸೇರಿಸುವುದಾಗಲೀ ಮಾಡದೆ ನಿರುತ್ತೇಜಿಸಬೇಕು.

ಇತರರು ರಹಸ್ಯವಾಗಿ ಮಾಡುವ ಕೆಟ್ಟ ಕೆಲಸಗಳನ್ನು, ಅಸಭ್ಯ ವರ್ತನೆಗಳನ್ನು ಕಂಡು ಹಿಡಿದು ಅದನ್ನು ಬಹಿರಂಗ ಪಡಿಸುವುದರಲ್ಲಿ ಕೆಲವರಿಗೆ ಬಹಳ ಆಸಕ್ತಿ. ಆದರೆ ಇಂತಹ ಸ್ವಭಾವವನ್ನು ಇಸ್ಲಾಮ್ ಇಷ್ಟ ಪಡುವುದಿಲ್ಲ. ಈ ರೀತಿ ಮಾಡುವವರು ಕೂಡಾ ತಮ್ಮ ರಹಸ್ಯಗಳನ್ನು ಇತರರ ಮುಂದೆ ಬಹಿರಂಗ ಪಡಿಸದೆ ರಹಸ್ಯವಾಗಿರಿಸಬೇಕೆಂದು ಪ್ರವಾದಿ(ಸ) ನಿರ್ದೇಶಿಸಿರುವರು.

ಇನ್ನು ಓರ್ವ ವ್ಯಕ್ತಿಗೆ ಒಂದು ಅಸಭ್ಯ ಕೆಲಸದ ಬಗ್ಗೆ ಬೇರೆಯವರ ಮುಂದೆ ಹೇಳಲೇ ಬೇಕಾದ ಅನಿವಾರ್ಯತೆ ಉಂಟಾಗಿದೆ ಎಂದಿಟ್ಟುಕೊಳ್ಳೋಣ. ಅಂತಹ ಸಂದರ್ಭದಲ್ಲಿ ಅದನ್ನು ಆಲಿಸಿದ ವ್ಯಕ್ತಿಯು ಆ ವಿಷಯವನ್ನು ಬಹಿರಂಗ ಪಡಿಸಬಾರದು. ಅದನ್ನು ತನ್ನೊಂದಿಗೆ ಇಡಲು ನೀಡಲಾಗಿರುವ 'ಅಮಾನತ್' (ವಿಶ್ವಸ್ಥ ನಿಧಿ) ಎಂದು ಪರಿಗಣಿಸಿ ರಹಸ್ಯವಾಗಿರಿಸಬೇಕು. ಅಬೂದರ್ದಾ(ರ) ವರದಿ ಮಾಡಿರುವರು. ಪ್ರವಾದಿ(ಸ) ಈ ರೀತಿ ಹೇಳಿರುವರು. 'ಓರ್ವ ವ್ಯಕ್ತಿ ಇತರರೊಂದಿಗೆ ಹೇಳ ಬಯಸದ ಒಂದು ವಿಷಯವನ್ನು ನಿಮ್ಮೊಂದಿಗೆ ಹೇಳಿದರೆ

ಅದು ಅಮಾನತ್ ಆಗಿದೆ. ಅದನ್ನು ಹೇಳಿದವನು ನೀವದನ್ನು ರಹಸ್ಯವಾಗಿರಿಸಬೇಕೆಂದು ಹೇಳಿರದಿದ್ದರೂ ಸರಿ.'

ಸಾಮೂಹಿಕ ಮನಃಶಾಸ್ತ್ರವನ್ನು ಮುಂದಿಟ್ಟುಕೊಂಡು ಚಿಂತನೆ ನಡೆಸಿದರೆ, ಅಸಭ್ಯ ವಿಷಯಗಳನ್ನು ಪ್ರಚಾರ ಪಡಿಸುವುದನ್ನು ಇಸ್ಲಾಮ್ ಬಹಳ ದೊಡ್ಡ ಕೆಡುಕೆಂದು ಪರಿಗಣಿಸಿರುವುದೇಕೆ ಎಂಬುದನ್ನು ಬಹಳ ಸುಲಭದಲ್ಲಿ ಅರ್ಥ ಮಾಡಿಕೊಳ್ಳಬಹುದು. ಅಸಹ್ಯ ವಿಷಯಗಳ ಬಗ್ಗೆ ನಿರಂತರವಾದ ಮಾತುಕತೆ ಮತ್ತು ಚರ್ಚೆಗಳು ಬಹಳ ಜನರಲ್ಲಿ ಅದರ ಬಗ್ಗೆ ಇರುವ ಅಸಹ್ಯ ಭಾವನೆ ಮತ್ತು ಹಿಂಜರಿಯುವಿಕೆಯನ್ನು ಕಡಿಮೆ ಮಾಡುತ್ತದೆ. ಸಮಾಜದಲ್ಲಿ ಒಬ್ಬ ವ್ಯಕ್ತಿ ಒಂದು ಕೆಟ್ಟ ಕೆಲಸವನ್ನು ಮಾಡಿದ್ದಾನೆ ಎಂಬ ವಿಷಯವು ತಿಳಿದರೆ, ಅದು ಸತ್ಯವಾಗಿದ್ದರೂ, ಸುಳ್ಳಾಗಿದ್ದರೂ, ಇನ್ನೂ ಅನೇಕ ಜನರಿಗೆ ಅಂತಹ ಕೆಲಸಗಳನ್ನು ಮಾಡಲು ಧೈರ್ಯವನ್ನು ನೀಡುತ್ತದೆ. ಅವರು ಕೆಟ್ಟ ವ್ಯಕ್ತಿಗಳ ಉದಾಹರಣೆಯನ್ನು ಸ್ವೀಕರಿಸುತ್ತಾರೆ. ಲೈಂಗಿಕ ಜಾಹೀರಾತುಗಳು, ಅಸಭ್ಯ ಕಾದಂಬರಿಗಳು ಈ ಆಧುನಿಕ ಸಮೂಹದಲ್ಲಿ ಉಂಟು ಮಾಡಿರುವ ವಿಪತ್ತುಗಳ ಬಗ್ಗೆ ಚಿಂತಿಸಿದರೆ, ಈ ವಿಷಯವು ಬಹಳ ಸುಲಭದಲ್ಲಿ ಮನದಟ್ಟಾಗುತ್ತದೆ.



# 45. ರಸ್ತೆಯ ಮರ್ಯಾದೆಗಳು

عَنْ أَبِي سَعِيد الْخُدْرِيِّ رَضِيَ اللَّهُ عَنْهُ عَنِ النَّبِيِّ ﷺ قَالَ : إِيَّاكُمْ وَالْجُلُوسَ عَلَى الطُّرُقَاتِ فَقَالُوا يَا رَسُولَ اللَّهِ مَا لَنَا بُدٌّ مِنْ مَجَالِسِنَا نَتَحَدَّثُ فِيهَا قَالَ رَسُولُ اللَّهِ ﷺ إِذَا أَبَيْتُمْ إِلَّا الْمَجْلِسَ فَأَعْطُوا الطَّرِيقَ حَقَّهُ قَالُوا وَمَا حَقُّهُ؟ قَالَ غَضُّ الْبَصَرِ وَكَفُّ الْأَذَى وَرَدُّ السَّلَامِ وَأَمْرٌ بِالْمَعْرُوفِ وَنَهْيٌ عَنِ الْمُنْكَرِ (مسلم)

ಅಬೂ ಸಈದ್ ಖುದ್ರಿ(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿರುವರು- ''ನೀವು ರಸ್ತೆ ಬದಿಯಲ್ಲಿ ನಿಲ್ಲುವುದರ ಕುರಿತು ಜಾಗರೂಕರಾಗಿರಿ.'' ಅನುಯಾಯಿಗಳು ಪ್ರಶ್ನಿಸಿದರು. 'ಓ ಅಲ್ಲಾಹನ ಸಂದೇಶವಾಹಕರೇ, ನಮಗೆ ಪರಸ್ಪರ ಮಾತನಾಡಲು ಒಟ್ಟು ಸೇರಲೇ ಬೇಕಾಗುತ್ತದೆಯೆಲ್ಲವೇ?' ಪ್ರವಾದಿ(ಸ) ಹೇಳಿದರು, ''ರಸ್ತೆಯಲ್ಲಿ ಸಭೆ ಸೇರಲೇ ಬೇಕೆಂದಾದರೆ ನೀವು ರಸ್ತೆಗೆ ಅದರ ಮರ್ಯಾದೆಗಳನ್ನು ನೀಡಬೇಕು.'' 'ರಸ್ತೆಯ ಮರ್ಯಾದೆಗಳೇನು ಎಂದು ಪ್ರಶ್ನಿಸಲಾಯಿತು.' ಪ್ರವಾದಿ(ಸ) ಉತ್ತರಿಸಿದರು ''ದೃಷ್ಟಿಯನ್ನು ಕೆಳಗಿರಿಸಿರಿ. ರಸ್ತೆಯಲ್ಲಿರುವ ಉಪದ್ರವಕಾರಿ ವಸ್ತುಗಳನ್ನು ನೀಗಿಸಿರಿ. ಸಲಾಮ್‌ಗೆ ಉತ್ತರ ಹೇಳಿರಿ. ಒಳಿತನ್ನು ಉಪದೇಶಿಸಿರಿ. ಕೆಡುಕಿನಿಂದ ತಡೆಯಿರಿ.'' (ಮುಸ್ಲಿಮ್)

ಬಿಡುವಿನ ವೇಳೆಯಲ್ಲಿ ರಸ್ತೆ ಬದಿಯಲ್ಲಿ ನಿಂತು ಮಾತುಕತೆ ನಡೆಸುವಾಗ ಪಾಲಿಸ ಬೇಕಾದ ನಿಯಮಗಳ ಕುರಿತು ಪ್ರವಾದಿ(ಸ) ಇಲ್ಲಿ ಕಲಿಸಿರುವರು. ಅದನ್ನು ವಿವರಿಸುವ ಮುನ್ನ ಈ ಹದೀಸ್‌ನ ವಿಶೇಷತೆಯ ಕುರಿತು ಆಲೋಚಿಸೋಣ. ರಸ್ತೆಯಲ್ಲಿ ನಿಲ್ಲುವುದು, ಸಭೆ ಸೇರುವುದು, ಮಾತುಕತೆ ನಡೆಸುವುದು ಇವೆಲ್ಲವೂ ಎಷ್ಟು ಸಾಮಾನ್ಯ ಮತ್ತು ಕ್ಷುಲ್ಲಕ ಕಾರ್ಯಗಳಾಗಿವೆ. ಆದರೆ ಇಸ್ಲಾಮ್ ಅದಕ್ಕೂ ಕೆಲವು ಮರ್ಯಾದೆಗಳನ್ನು, ನಿಯಮಗಳನ್ನು ನಿಶ್ಚಯಿಸಿದೆ. ಜೀವನದ ಪ್ರತಿ ಹೆಜ್ಜೆಯಲ್ಲಿಯೂ ಅಲ್ಲಾಹನ ನಿಯಮಗಳನ್ನು ಪಾಲಿಸಬೇಕು ಅಥವಾ ಸಂಪೂರ್ಣ ಜೀವನವೇ ಇಬಾದತ್(ಆರಾಧನೆ) ಆಗಿರುವುದು ಎಂದರೇನೆಂಬುದನ್ನು ಈ ಹದೀಸ್ ಮನದಟ್ಟು ಮಾಡಿಸುತ್ತಿದೆಯಲ್ಲವೇ?

ಇನ್ನೊಂದು ಮುಖ್ಯ ವಿಷಯವೇನೆಂದರೆ ಉತ್ಕೃಷ್ಟ ವ್ಯಕ್ತಿಗಳನ್ನು ಮತ್ತು ಸಮುದಾಯ ವನ್ನು ಕಟ್ಟಿ ಬೆಳೆಸಲು ಇಸ್ಲಾಮ್ ಸ್ವೀಕರಿಸಿರುವ ಮಾರ್ಗ ಇದಾಗಿದೆ. ಆರಂಭದಲ್ಲಿಯೇ ಜನರ

ಹೃದಯಗಳಲ್ಲಿ ಗಂಭೀರವಾದ ತತ್ವಶಾಸ್ತ್ರಗಳನ್ನು ತುಂಬಿಸುವ ಕೆಲಸವನ್ನು ಇಸ್ಲಾಮ್ ಮಾಡು ವುದಿಲ್ಲ. ಅದು ಸಾಧಿತವಾದರೆ ಮನುಷ್ಯನು ಒಳ್ಳೆಯವನಾಗಲು ಸಾಧ್ಯತೆಯಿದೆ ಎಂಬುದು ಸತ್ಯ. ಆದರೆ ಅದು ಸುಲಭ ಸಾಧ್ಯವಲ್ಲ. ಹೆಚ್ಚಿನ ತತ್ವ ಆದರ್ಶಗಳನ್ನು ಕಲಿತ ಮನುಷ್ಯ ಒಳ್ಳೆಯವ ನಾಗುವ ಸಾಧ್ಯತೆ ಹೆಚ್ಚಾಗಿರುವಂತೆಯೇ, ಕೆಟ್ಟವನಾಗಿ ಬಿಡಲೂ ಸಾಧ್ಯತೆಯಿದೆ. ನಮ್ಮ ಕಣ್ಣಮುಂದೆಯೇ ಇದಕ್ಕೆ ಧಾರಾಳ ಉದಾಹರಣೆಗಳನ್ನು ನೋಡಬಹುದಾಗಿದೆ.

ವ್ಯಕ್ತಿಯನ್ನು ಪ್ರಥಮವಾಗಿ ಒಂದು ಮೌಲ್ಯಯುತ ಆದರ್ಶದಲ್ಲಿ ನೆಲೆ ನಿಲ್ಲಿಸುವುದು. ಬಳಿಕ ಪ್ರಾಯೋಗಿಕ ಶಿಕ್ಷಣಗಳ ಮುಖೇನ ವ್ಯಕ್ತಿಯ ದೈನಂದಿನ ಜೀವನವನ್ನು ಸಂಸ್ಕರಿಸುವುದು ಪ್ರವಾದಿಯವರ(ಸ) ರೀತಿಯಾಗಿತ್ತು. ಅವರು ಪ್ರಥಮವಾಗಿ ಜನರನ್ನು ಏಕದೇವ ವಿಶ್ವಾಸದೆಡೆಗೆ ಕರೆದರು. ಈ ವಿಶ್ವಾಸವನ್ನು ವಿವರಿಸಲಿಕ್ಕಾಗಿ ಅವರೆಂದೂ ಸಾಮಾನ್ಯ ವ್ಯಕ್ತಿಗಳಿಗೆ ಗ್ರಹಿಸಲಸಾಧ್ಯವಾದ ತತ್ವಶಾಸ್ತ್ರ, ದಾರ್ಶನಿಕತೆಗಳನ್ನು ಹೇಳಿಕೊಡಲಿಲ್ಲ. ಅದು ಏಕದೇವ ವಿಶ್ವಾಸವನ್ನು ದಾರ್ಶನಿಕತೆಗಳ ಮೂಲಕ ತತ್ವಶಾಸ್ತ್ರಗಳ ಮೂಲಕ ವಿವರಿಸಲು ಸಾಧ್ಯವಾಗದೆ ಇರುವುದರಿಂದಲ್ಲ. ಕೇವಲ ವಿದ್ವಾಂಸರ ವೈಚಾರಿಕತೆಯನ್ನು ಸಂಸ್ಕರಿಸುವುದು ಮಾತ್ರ ಅವರ ಉದ್ದೇಶವಲ್ಲ. ಅದಕ್ಕಿಂತಲೂ ಮಿಗಿಲಾಗಿ ಸಾಮಾನ್ಯ ಮನುಷ್ಯರ ಜೀವನವನ್ನು ಸಂಸ್ಕರಿಸುವುದು ಅವರ ಉದ್ದೇಶವಾಗಿತ್ತು. ಆ ಕಾರಣದಿಂದಲೇ ಅವರು ಈ ರೀತಿ ಮಾಡಿದ್ದರು.

ಅದೇ ರೀತಿಯಲ್ಲಿ ಧಾರ್ಮಿಕ ಮೌಲ್ಯಗಳನ್ನು, ತತ್ವಶಾಸ್ತ್ರಗಳನ್ನು ಲೆಕ್ಕ ಹಾಕುತ್ತ ಕಲಿಸಲು ಅವರು ಪರಿಶ್ರಮ ಪಡಲಿಲ್ಲ. ಅವುಗಳನ್ನು ಮನುಷ್ಯ ಪಾಲಿಸಬೇಕಿದ್ದರೆ, ಅದಕ್ಕಾಗಿ ದೈನಂದಿನ ಜೀವನದ ಮೂಲಕ ಅವರಿಗದನ್ನು ಅಭ್ಯಾಸ ಮಾಡಿಸಲಾಗುತ್ತಿತ್ತು. ಈ ರೀತಿಯಲ್ಲಿ ತತ್ವಶಾಸ್ತ್ರಗಳ, ಮೌಲ್ಯಗಳ ವಿಶಾಲತೆಗೆ ಇಳಿಯುವ ಮುನ್ನ ಅವರು ಅವುಗಳ ಜೀವಂತ ಮಾದರಿಗಳಾದರು. ಈ ಜೀವನ ಶೈಲಿಯ ಮೂಲಕ ತತ್ವಶಾಸ್ತ್ರ ಮತ್ತು ದಾರ್ಶನಿಕತೆಯ ಅತ್ಯುನ್ನತಿಯನ್ನು ಗಳಿಸಿಕೊಂಡರು. ಈ ಶೈಲಿಯು ಎಷ್ಟು ಪ್ರಾಯೋಗಿಕವಾಗಿತ್ತು ಮತ್ತು ಯಶಸ್ಸನ್ನು ಗಳಿಸುವಂತಹದ್ದು ಎಂಬುದಕ್ಕೆ ಇಸ್ಲಾಮೀ ಚರಿತ್ರೆಯು ಸಾಕ್ಷಿಯಾಗಿದೆ.

ಪವಿತ್ರ ಕುರ್‌ಆನಿನ ಅವತೀರ್ಣದ ವಿಧಾನವನ್ನು ಅವಲೋಕಿಸಿ ನೋಡಿರಿ. ಮೊದಲು ಕುರ್‌ಆನನ್ನು ಸಂಪೂರ್ಣ ಕಲಿಸಿ ಬಿಟ್ಟ ಬಳಿಕ ಜೀವನದಲ್ಲಿ ಅದಕ್ಕೆ ಅನುಗುಣವಾದ ಬದಲಾವಣೆ ಗಳನ್ನು ಮಾಡಲು ಅಲ್ಲಾಹನು ಕಲಿಸಲಿಲ್ಲ. ಜೀವನದ ಮಾರ್ಪಾಟಿಗೆ ಅಗತ್ಯವಾದ ರೀತಿಯಲ್ಲಿ ಕುರ್‌ಆನ್ ಅವತೀರ್ಣವಾಗುತ್ತಿತ್ತು. ಜೀವನದ ಉನ್ನತಿಗೆ ಅಗತ್ಯವಾದ ಉತ್ತಮವಾದ ರೀತಿಯು ಅರೇಬಿಯಾದ ಸಾಮೂಹಿಕ ಪರಿವರ್ತನೆಗೆ ಹೋಲಿಕೆಯಿಲ್ಲದ ವೇಗವನ್ನು ನೀಡಿದ್ದು ಮಾತ್ರವಲ್ಲ, ಅನಂತರದ ವೈಜ್ಞಾನಿಕ ಸಂಶೋಧನೆಗಳಿಗೂ ಅದು ಕಾರಣವಾಯಿತು. ಮನುಷ್ಯನ ವರ್ತನೆಗಳನ್ನು ಸರಿಪಡಿಸಲು ಕರ್ಮಶಾಸ್ತ್ರ ಉಂಟಾಯಿತು.

ಅದೇ ರೀತಿ ಸರಳ ಜೀವನ ಶೈಲಿಯಿಂದ ಜೀವನದಲ್ಲಿ ಸೂಫಿ ಚಿಂತನೆ, ಸೂಫಿ ತತ್ವಶಾಸ್ತ್ರಗಳುಂಟಾದವು. ತತ್ವಶಾಸ್ತ್ರಗಳ ಮೂಲಕ ಸೂಫಿಗಳು ಮತ್ತು ಸರಳ ಜೀವನ

ಉಂಟಾಮದಲ್ಲ. ಈ ವಾಸ್ತವಿಕತೆಗಳನ್ನು ಮುಂದಿಟ್ಟುಕೊಂಡು ನೋಡಿದಾಗಲೇ, ಸಣ್ಣ ಸಣ್ಣ ಪ್ರಶ್ನೆಗಳ ಬಗ್ಗೆ ಇರುವ ಈ ರೀತಿಯ ಹದೀಸಿನ ಪ್ರಾಮುಖ್ಯತೆ ಮತ್ತು ಪ್ರಸ್ತುತತೆಯು ಮನದಟ್ಟಾಗುತ್ತದೆ.

ಈ ವಚನದ ಮೂಲಕ ಮೊತ್ತ ಮೊದಲಾಗಿ ರಸ್ತೆಯ ಬದಿಯಲ್ಲಿ ಕುಳಿತುಕೊಳ್ಳುವುದನ್ನು ಪ್ರವಾದಿ(ಸ) ವಿರೋಧಿಸಿದ್ದಾರೆ. ಅನಾವಶ್ಯಕವಾಗಿ ಚಹಾ ಅಂಗಡಿಗಳಲ್ಲಿ, ಕ್ಲಬ್ಬುಗಳಲ್ಲಿ, ರಸ್ತೆ ಬದಿಯಲ್ಲಿ ಒಟ್ಟು ಸೇರಿಕೊಂಡು ಅನಗತ್ಯ ಮಾತುಕತೆಗಳನ್ನು ನಡೆಸುವುದು ಸತ್ಯವಿಶ್ವಾಸಿಗೆ ಭೂಷಣವಲ್ಲ. ಮನುಷ್ಯನ ಸಮಯ ವ್ಯಥಾ ಪೋಲು ಮಾಡುವುದಕ್ಕಿರುವುದಲ್ಲ. ಎರಡನೆಯದಾಗಿ ಈ ರೀತಿಯಲ್ಲಿ ನಡೆಯುವ ಮಾತುಕತೆಗಳ ವಿಷಯ ಪರದೂಷಣೆ ಮತ್ತು ಪರಿಹಾಸ್ಯಗಳಾಗಿವೆ. ಕಣ್ಣಿಗೆ ಕಂಡವರ ತಪ್ಪುಗಳನ್ನು ಎಣಿಕೆ ಮಾಡುವುದು, ಅನ್ಯರ ರಹಸ್ಯಗಳ ಅನ್ವೇಷಣೆ ನಡೆಸುವುದು ಎಲ್ಲವೂ ಇದರಲ್ಲಿ ಒಳಗೊಳ್ಳುತ್ತದೆ. ಕೆಲವೊಮ್ಮೆ ಇದುವೇ ವ್ಯಕ್ತಿಯನ್ನು ಜೂಜಾಟ ಮುಂತಾದ ಕೆಡುಕುಗಳಿಗೆ ಕೊಂಡೊಯ್ಯುತ್ತದೆ..

ಆದರೆ ರಸ್ತೆಗಳು, ಚಹಾ ಅಂಗಡಿಗಳು ಜನರು ಸಾಧಾರಣವಾಗಿ ಪರಸ್ಪರ ಒಟ್ಟು ಸೇರಿ ಮಾತುಕತೆ ನಡೆಸುವ ಸ್ಥಳಗಳಲ್ಲವೇ? ಇದನ್ನು ಕಡ್ಡಾಯವಾಗಿ ನಿಷೇಧಿಸಿದರೆ ಬಹಳ ತೊಂದರೆಯಾಗಬಹುದು. ಸಹಾಬಿಗಳು ಈ ವಿಷಯವನ್ನು ಪ್ರಸ್ತಾಪಿಸಿದರು. ವಿಷಯದ ಮಹತ್ವವನ್ನು ಪ್ರವಾದಿಯವರಿಗೆ ಮನವರಿಕೆ ಮಾಡಿಸುವುದು ಅವರ ಉದ್ದೇಶವಾಗಿತ್ತು. ಈ ರೀತಿಯ ಒಟ್ಟುಸೇರುವಿಕೆ, ಸಂಭಾಷಣೆ ಅಗತ್ಯವೆಂದು ಅಲ್ಲಿ ಒಪ್ಪಿಕೊಳ್ಳಲಾಯಿತು. ಕ್ಷುಲ್ಲಕವೆಂದು ಪರಿಗಣಿಸಬೇಕಾದುದಲ್ಲ, ಬದಲಾಗಿ ಅತ್ಯಾವಶ್ಯ ಸಂದರ್ಭಗಳಲ್ಲಿ ಈ ರೀತಿ ಮಾಡಬಹುದು ಎಂಬ ರೀತಿಯಲ್ಲಿ ಪ್ರವಾದಿಯವರಿಂದ ಒಪ್ಪಿಗೆ ಲಭಿಸಿತು. ಮುಂದುವರಿಯುತ್ತಾ ರಸ್ತೆಯ ಮರ್ಯಾದೆಗಳನ್ನು ವಿವರಿಸಲಾಯಿತು..

## ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಬೇಕು

ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಬೇಕೆಂದರೆ, ದೃಷ್ಟಿಗಳನ್ನು ನಿಯಂತ್ರಣದಲ್ಲಿರಿಸಬೇಕೆಂದರ್ಥ. ಬೇರೆ ರೀತಿಯಲ್ಲಿ ಹೇಳುವುದಾದರೆ ಅನಗತ್ಯವಾದುವುಗಳನ್ನು ನೋಡಬಾರದು. ಹೆಣ್ಣು ಮಕ್ಕಳನ್ನು ಕಾಮುಕ ದೃಷ್ಟಿಯಿಂದ ನೋಡುವುದು, ಏನಾದರೂ ಕಮೆಂಟ್ಸ್ ಮಾಡುವುದು, ಇವುಗಳೆಲ್ಲವೂ ದಾರಿಬದಿಯಲ್ಲಿ ನಿಲ್ಲುವವರು ಎಲ್ಲಾ ಕಾಲಗಳಲ್ಲಿಯೂ ಮಾಡುತ್ತಿರುವ ಇಷ್ಟವಾದ ತಮಾಷೆಯ ಕೆಲಸಗಳಾಗಿವೆ. ಈ ರೀತಿಯ ನೋಟವೇ ಮುಂದುವರಿದು ಪ್ರೇಮಾಂಕುರಕ್ಕೆ ಅಥವಾ ಅನೈತಿಕತೆಗೆ ಕಾರಣವೂ ಆಗುತ್ತದೆ. ಪವಿತ್ರ ಕುರ್‌ಆನ್ ಈ ವಿಷಯದ ಬಗ್ಗೆ ನಮ್ಮನ್ನು ಎಚ್ಚರಿಸಿದೆ. ''ಪೈಗಂಬರರೇ, ಸತ್ಯವಿಶ್ವಾಸಿನಿಯರೊಡನೆ ಹೇಳಿರಿ. ಅವರು ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿ. ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿ.'' (ಪವಿತ್ರ ಕುರ್‌ಆನ್, 24:31)

ಆದುದರಿಂದ ರಸ್ತೆಯಲ್ಲಿ ಇರುವವರ ಪ್ರಥಮ ಹಕ್ಕು ಅಥವಾ ರಸ್ತೆಯ ಒಂದನೆಯ ಶಿಷ್ಟಾಚಾರ, ಸ್ವತಃ ದೃಷ್ಟಿಯನ್ನು ನಿಯಂತ್ರಿಸುವುದಾಗಿದೆ. ಕೆಲವು ವ್ಯಕ್ತಿಗಳಿಗೆ ಒಂದು

ಅಭ್ಯಾಸವಿರುತ್ತದೆ. ಇತರರ ಕೈಯಲ್ಲಿ ಇರುವುದು ಏನು? ಮತ್ತು ಅದು ಏಕೆ ಎಂಬೆಲ್ಲ ವಿವರಗಳು ಅವರಿಗೆ ಬೇಕು. ಹೆಚ್ಚಿನ ಜನರಿಗೆ ತಮ್ಮ ಕೈಯಲ್ಲಿರುವುದೇನೆಂಬುದು ಇತರರಿಗೆ ತಿಳಿಯುವುದು ಇಷ್ಟವಿರುವುದಿಲ್ಲ. ಆದರೆ ಇಂತಹ ವ್ಯಕ್ತಿಗಳು ಅವುಗಳನ್ನೆಲ್ಲ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಪದೇ ಪದೇ ಪ್ರಶ್ನಿಸಿ, ಸಾಧ್ಯವಾದರೆ ಕೈಚೀಲವನ್ನು ಕಸಿದುಕೊಂಡು ಅದರೊಳಗಿರುವುದೇನೆಂದು ಪತ್ತೆ ಹಚ್ಚಿಯೇ ಬಿಡುತ್ತಾರೆ. ದೃಷ್ಟಿಯನ್ನು ನಿಯಂತ್ರಿಸಬೇಕು ಎಂಬ ಆದೇಶವು ಈ ಎಲ್ಲಾ ಕೆಡುಕುಗಳನ್ನು ತಡೆಯುತ್ತದೆ.

## ಉಪದ್ರವಕಾರಿ ವಸ್ತುಗಳನ್ನು ನೀಗಿಸಿರಿ

ಉಪದ್ರವಕಾರಿ ವಸ್ತುಗಳನ್ನು ನೀಗಿಸಿರಿ ಎಂಬುದಕ್ಕೆ ಬಹಳ ವಿಶಾಲವಾದ ಅರ್ಥವಿದೆ. ಇತರರಿಗೆ ಉಪದ್ರ ನೀಡದಿರುವುದು, ರಸ್ತೆಯಲ್ಲಿ ತಡೆಗಳನ್ನು, ಮಾಲಿನ್ಯವನ್ನು ಮಾಡದಿರುವುದು, ಯಾತ್ರಿಕರ ಸಂಕಷ್ಟಗಳಿಗೆ ಸ್ಪಂದಿಸುವುದು, ರಸ್ತೆಯನ್ನು ಸರಿಪಡಿಸುವುದು, ಶುಚಿಯಾಗಿಸುವುದು ಎಲ್ಲವೂ ಇದರಲ್ಲಿ ಒಳಗೊಳ್ಳುತ್ತದೆ. ಸತ್ಯವಿಶ್ವಾಸಿಗಳು ಸಾಧಾರಣವಾಗಿ ಬಳಸುವ ರಸ್ತೆಗಳು ಮಾಲಿನ್ಯದಿಂದ ಕೂಡಿರಬಾರದು. ಆ ರಸ್ತೆಗಳಲ್ಲಿ ಪ್ರಯಾಣಿಕರೂ ತೊಂದರೆಗೊಳಗಾಗಬಾರದು. ಈ ಪ್ರವಾದಿ ವಚನವನ್ನು ಸರಿಯಾಗಿ ಪಾಲಿಸಿದ್ದರೆ, ನಮ್ಮ ರಸ್ತೆಗಳು ಅದೆಷ್ಟು ಶುಚಿಯಾಗಿರುತ್ತಿದ್ದವು, ಸುಂದರವಾಗಿರುತ್ತಿದ್ದವು. ಆದರೆ ವಿಷಾದದ ವಿಷಯವೆಂದರೆ ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿ ವಾಸವಿರುವ ಪ್ರದೇಶದ ರಸ್ತೆಗಳು, ಅವರು ಹೆಚ್ಚಾಗಿ ಬಳಸುವ ರಸ್ತೆಗಳು ಹೆಚ್ಚು ಮಾಲಿನ್ಯದಿಂದ ತುಂಬಿರುತ್ತದೆ. ಇದು ಇಸ್ಲಾಮಿನ ಕೊರತೆಯಲ್ಲ, ಇಸ್ಲಾಮಿನ ಆದರ್ಶವನ್ನು ಮುಸ್ಲಿಮರು ಸರಿಯಾಗಿ ಪಾಲಿಸದೆ ಇರುವುದರಿಂದ ಉಂಟಾದ ಮಾಲಿನ್ಯ ಎಂಬುದು ದೇಶಬಾಂಧವರಿಗೆ ಅರಿವಾಗುವುದಿಲ್ಲ ಎಂಬುದು ದುಃಖಕರ ವಿಚಾರವಲ್ಲವೆ? ರಸ್ತೆಯನ್ನು ಸರಿಯಾಗಿ ಸಂರಕ್ಷಿಸಲು ಸಾಧ್ಯವಿಲ್ಲದವರು ರಸ್ತೆಯಲ್ಲಿ ಸಂಚರಿಸಲೇ ಬಾರದು ಎಂಬುದೇ ಈ ಹದೀಸಿನಿಂದ ನಮಗೆ ಸಿಗುವ ಪಾಠವಾಗಿದೆ.

## ಸಲಾಮ್‌ಗೆ ಉತ್ತರಿಸುವುದು

ಪರಸ್ಪರ ಭೇಟಿಯಾಗುವಾಗ ಸಲಾಮ್ ಹೇಳಬೇಕೆಂಬುದು ಇಸ್ಲಾಮಿನಲ್ಲಿ ಬಹಳ ಮಹತ್ವವುಳ್ಳ ಪ್ರವಾದಿ ಚರ್ಯೆಯಾಗಿದೆ. ಸಲಾಮ್‌ಗೆ ಉತ್ತರಿಸುವುದು ಕಡ್ಡಾಯವಾಗಿದೆ. ಸಮುದಾಯದಲ್ಲಿ ಪ್ರೀತಿ, ವಿಶ್ವಾಸ, ಸಹಕಾರ ಮನೋಭಾವವನ್ನು ನೆಲೆಗೊಳಿಸಲು ಮತ್ತು ಬೆಳೆಸಲು ಇದು ಬಹಳ ಸಹಾಯಕವಾಗಿದೆ.

## ಒಳಿತನ್ನು ಪ್ರೋತ್ಸಾಹಿಸುವುದು ಕೆಡುಕನ್ನು ತಡೆಯುವುದು

ಒಳಿತನ್ನು ಆದೇಶಿಸುವುದು ಮತ್ತು ಕೆಡುಕನ್ನು ತಡೆಯುವುದು ಸತ್ಯವಿಶ್ವಾಸಿಗಳ ಕಡ್ಡಾಯ ಕರ್ತವ್ಯವಾಗಿದೆ. ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ಅದನ್ನು ಮಾಡಬೇಕೆಂದಿಲ್ಲ, ನಮಗೆ ಸಿಗುವ ಎಲ್ಲಾ ಸಂದರ್ಭಗಳನ್ನು ಇದಕ್ಕಾಗಿ ಉಪಯೋಗಿಸಬೇಕು. ರಸ್ತೆಬದಿಯಲ್ಲಿ ನಿಂತಿರುವಾಗ, ಕಾಫಿ

ಅಂಗಡಿಗಳಲ್ಲಿ ಸೇರಿರುವಾಗ ಈ ವಿಷಯವನ್ನು ವಿಶೇಷವಾಗಿ ನೆನಪಿಟ್ಟುಕೊಳ್ಳಬೇಕು ಎಂಬುದು ಪ್ರವಾದಿ(ಸ)ಯವರ ಆದೇಶವಾಗಿದೆ. ಒಳಿತನನ್ನು ಆದೇಶಿಸುವ ಮತ್ತು ಕೆಡುಕುಗಳಿಂದ ಜನರನ್ನು ತಡೆಯುವ ಹೆಚ್ಚು ಅವಕಾಶಗಳು ರಸ್ತೆಯಲ್ಲಿ ಸಿಗುತ್ತದೆ.



# 46. ಸಂಪತ್ತು ಮತ್ತು ಸ್ಥಾನಮಾನ

عَنْ أَبِي هُرَيْرَةَ رَضِيَ اللّٰهُ عَنْهُ أَنَّ رَسُولَ اللّٰهِ ﷺ قَالَ مَا نَقَصَتْ صَدَقَةٌ مِنْ مَالٍ وَمَا زَادَ اللّٰهُ عَبْدًا بِعَفْوٍ إِلَّا عِزًّا وَمَا تَوَاضَعَ أَحَدٌ لِلّٰهِ إِلَّا رَفَعَهُ اللّٰهُ (مسلم)

ಅಬೂಹುರೈರಾ(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿರುವರು. 'ದಾನವು ಸಂಪತ್ತನ್ನು ಕಡಿಮೆ ಮಾಡುವುದಿಲ್ಲ. ಕ್ಷಮಿಸುವವನ ಸ್ಥಾನಮಾನವನ್ನು ಅಲ್ಲಾಹನು ಹೆಚ್ಚಿಸುವನು. ಅಲ್ಲಾಹನಿಗಾಗಿ ವಿನೀತ ಭಾವ ಪ್ರಕಟಿಸುವವನನ್ನು ಅಲ್ಲಾಹನು ಉನ್ನತಗೊಳಿಸುವನು.'

(ಮುಸ್ಲಿಮ್)

ಮನುಷ್ಯನು ಸಾಮಾನ್ಯವಾಗಿ ಬಯಸುವ ಕೆಲವು ಸೌಭಾಗ್ಯಗಳ ವಾಸ್ತವಿಕತೆಯೆಡೆಗೆ ಈ ಹದೀಸ್ ಗಮನ ಸೆಳೆಯುತ್ತದೆ. ಸಂಪತ್ತು, ಪ್ರತಾಪ, ಉನ್ನತಿ ಇವೆಲ್ಲ ಎಲ್ಲರೂ ಇಷ್ಟಪಡುವ ವಿಷಯಗಳಾಗಿವೆ. ಇವೆಲ್ಲ ಮನುಷ್ಯ ಇಷ್ಟಪಟ್ಟ ಕಾರಣ ಅಥವಾ ಅದಕ್ಕಾಗಿ ಪರಿಶ್ರಮ ಪಡುವ ಕಾರಣದಿಂದ ಮಾತ್ರ ಲಭ್ಯವಾಗುವುದಿಲ್ಲ. ಎಲ್ಲದಕ್ಕೂ ಅಲ್ಲಾಹನ ಅನುಗ್ರಹಬೇಕು. ಸಂಪತ್ತು ಎಂಬುದು ಸ್ವಂತಕ್ಕಾಗಿಯೂ ತನ್ನ ಸಹಜೀವಿಗಳಿಗಾಗಿಯೂ ಜೀವನ ಸೌಕರ್ಯಗಳನ್ನುಂಟು ಮಾಡಲು ಅಲ್ಲಾಹನು ನೀಡಿರುವ ಮಹಾ ಅನುಗ್ರಹವಾಗಿದೆ. ತನಗಾಗಿಯೂ ತನ್ನ ಸುತ್ತುಮುತ್ತಲಿನವರ ಅವಶ್ಯಕತೆಗಳಿಗಾಗಿಯೂ ವಿನಿಯೋಗಿಸಲ್ಪಡುವಾಗಲೇ ಅದು ಅರ್ಥವತ್ತಾಗಿಯೂ, ಫಲಪ್ರದವಾಗಿಯೂ ಪರಿಣಮಿಸುತ್ತದೆ. ಸ್ವಂತ ಅಗತ್ಯಗಳಿಗಾಗಿ ಸಂಪತ್ತನ್ನು ಧಾರಾಳ ಖರ್ಚು ಮಾಡಲು ಹಲವರಿಗೆ ಯಾವುದೇ ಹಿಂಜರಿಕೆ ಇರುವುದಿಲ್ಲ. ಅದೇ ವೇಳೆ ಅನೇಕರು ತಾವು ಸಂಪಾದಿಸಿದುದನ್ನು ಇತರರ ಅವಶ್ಯಕತೆಗಳ ಪೂರೈಕೆಗಾಗಿ ದಾನ ಮಾಡುವುದನ್ನು ದೊಡ್ಡ ನಷ್ಟವೆಂದು ಭಾವಿಸುತ್ತಾರೆ. ಆದರೆ ನಿಮ್ಮ ಸ್ವಂತ ಉಪಯೋಗಕ್ಕಾಗಿ ನಿಮ್ಮ ಸಂಪತ್ತನ್ನು ಖರ್ಚು ಮಾಡುವಾಗ ಎಷ್ಟು ಪ್ರಯೋಜನವಾಗುತ್ತದೋ, ಅದಕ್ಕಿಂತಲೂ ಹೆಚ್ಚಿನ ಪ್ರಯೋಜನ ಅದನ್ನು ಇತರರ ಅವಶ್ಯಕತೆಗಳಿಗಾಗಿ ವಿನಿಯೋಗಿಸುವಾಗ ಆಗುತ್ತದೆ.

ದಾನ ನೀಡಿದರೆ ಹಣವು ಕಡಿಮೆಯಾಗಬಹುದು ಎಂಬ ಚಿಂತನೆಯೇ ಪೈಶಾಚಿಕವಾದುದಾಗಿದೆ. ಅಲ್ಲಾಹನು ಹೇಳುತ್ತಾನೆ:

''ಶೈತಾನನು ನಿಮ್ಮನ್ನು ದಾರಿದ್ರ್ಯದಿಂದ ಭಯಭೀತಗೊಳಿಸುತ್ತಾನೆ ಮತ್ತು ಅಶ್ಲೀಲ ಕೃತ್ಯಗಳನ್ನೆಸಗುವ ಪ್ರಚೋದನೆಯನ್ನೀಯುತ್ತಾನೆ.'' (2:268)

ಶೈತಾನನ ಈ ಹೆದರಿಸುವಿಕೆಗೆ ಹೆದರಿಬಿಟ್ಟು ಜಿಪುಣತೆಯನ್ನು ತೋರಿಸುವವರನ್ನು ಪವಿತ್ರ ಕುರ್‌ಆನ್ ಈ ರೀತಿ ಎಚ್ಚರಿಸಿದೆ.

''ಅಲ್ಲಾಹನು ತನ್ನ ಅನುಗ್ರಹ ಪ್ರದಾನ ಮಾಡಿದ ಅನಂತರವೂ ಜಿಪುಣತೆ ತೋರಿಸುವವರು, ಈ ಲೋಭವು ತಮ್ಮ ಪಾಲಿಗೆ ಶುಭಕರವೆಂದೆಣಿಸದಿರಲಿ. ಇದು ಅವರ ಮಟ್ಟಿಗೆ ಅತ್ಯಂತ ಅಶುಭಕರವಾಗಿರುವುದು. ಅವರು ತಮ್ಮ ಜಿಪುಣತೆಯಿಂದ ಸಂಗ್ರಹಿಸಿಡುವ ವಸ್ತುವೇ ಪುನರುತ್ಥಾನ ದಿನದಂದು ಅವರ ಕಂಠ ಕಡಗವಾಗುವುದು.'' (3: 180)

ಸಂಪತ್ತನ್ನು ನ್ಯಾಯಯುತವಾದ ರೀತಿಯಲ್ಲಿ ಸತ್ಕರ್ಮಗಳಿಗಾಗಿ ವ್ಯಯಿಸುತ್ತಿದ್ದರೆ ಅದು ನಷ್ಟ ಹೊಂದುವುದಿಲ್ಲ, ಬದಲಾಗಿ ಅದು ಶಾಶ್ವತವಾಗಿ ನಿಮ್ಮದೇ ಆಗಿ ಬಿಡುತ್ತದೆ. ಅದನ್ನೇ ಪವಿತ್ರ ಕುರ್‌ಆನ್ ಹೇಳುತ್ತದೆ.

''ನೀವು ದಾನಧರ್ಮಗಳಲ್ಲಿ ಖರ್ಚು ಮಾಡುವುದೆಲ್ಲಾ ನಿಮ್ಮ ಸ್ವಂತದ ಒಳಿತಿಗಾಗಿ ಮಾತ್ರ.'' (2:272)

''ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ ಖರ್ಚಿನ ಉಪಮೆಯು, ಒಂದು ಕಾಳನ್ನು ಬಿತ್ತಿ ಅದರಿಂದ ಏಳು ತೆನೆಗಳು ಹೊರಟು, ಪ್ರತಿಯೊಂದು ತೆನೆಯಲ್ಲಿ ನೂರು ಕಾಳುಗಳಿರುವಂತಿದೆ. ಇದೇ ರೀತಿಯಲ್ಲಿ ಅಲ್ಲಾಹ್ ತಾನುದ್ದೇಶಿಸಿದವನ ಕರ್ಮಗಳಿಗೆ ವೃದ್ಧಿಯನ್ನು ದಯಪಾಲಿಸುತ್ತಾನೆ.'' (ಪವಿತ್ರ ಕುರ್‌ಆನ್, 2: 261)

ಇದುವೇ ದಾನ ನೀಡುವುದರಿಂದ ಸಂಪತ್ತು ಕ್ಷಯಿಸುವುದಿಲ್ಲ ಎಂದು ಹೇಳಿರುವುದರ ತಾತ್ಪರ್ಯವಾಗಿದೆ.

ಆದರೆ ದುಂದುವೆಚ್ಚದಿಂದ ಸಂಪತ್ತು ಕ್ಷಯಿಸುತ್ತದೆ. ದುಂದುವೆಚ್ಚವು ದಾನಧರ್ಮದ ವಿಷಯದಲ್ಲಾಗಿರಲಿ, ಇತರ ವಿಷಯಗಳಲ್ಲಾಗಿರಲಿ ನಿಷಿದ್ಧವಾಗಿದೆ. ಸೂರಃ ಅಲ್ ಫುರ್ಕಾನ್‌ನಲ್ಲಿ ದೇವನ ದಾಸರ ಗುಣಗಳನ್ನು ವರ್ಣಿಸುತ್ತಾ ಅಲ್ಲಾಹನು ಈ ರೀತಿ ಹೇಳುತ್ತಾನೆ.

''ಅವರು ಖರ್ಚು ಮಾಡುವಾಗ ದುಂದುವೆಚ್ಚವನ್ನೂ ಮಾಡುವುದಿಲ್ಲ, ಜಿಪುಣತೆಯನ್ನೂ ತೋರುವುದಿಲ್ಲ. ಅವರ ಖರ್ಚು ಇವೆರಡರ ನಡುವೆ ಸಮತೂಕದಲ್ಲಿ ನಿಂತಿರುತ್ತದೆ.''(25:67)

ಸೂರಃ ಬನೀ ಇಸ್ರಾಈಲ್‌ನಲ್ಲಿ ಇಸ್ಲಾಮೀ ಗುಣ ಸ್ವಭಾವಗಳನ್ನು ಉಪದೇಶಿಸುತ್ತಾ ಅಲ್ಲಾಹನು ಈ ರೀತಿ ಹೇಳಿರುವನು.

''ನಿಮ್ಮ ಕೈಯನ್ನು ಕೊರಳಿಗೆ ಕಟ್ಟಿಕೊಂಡಿರಲೂ ಬೇಡಿರಿ ಮತ್ತು ನಿಂದ್ಯರೂ ನಿಸ್ಸಹಾಯಕರೂ ಆಗಿ ಬಿಡುವಂತೆ ಅದನ್ನು ಸಂಪೂರ್ಣವಾಗಿ ತೆರೆದಿಟ್ಟು ಬಿಡಲೂ ಬೇಡಿರಿ.'' (17:29)

ಎಲ್ಲರಿಂದಲೂ ಗೌರವಿಸಲ್ಪಡಬೇಕು, ಆದರಿಸಲ್ಪಡಬೇಕು, ಯಾರೂ ನನಗೆ ದ್ರೋಹ ಬಗೆಯಲು, ನನ್ನನ್ನು ಅವಮಾನಿಸಲು ಧೈರ್ಯ ತೋರಬಾರದು. ಯಾರಾದರೂ ನನಗೆ

ವಿರುದ್ಧವಾಗಿ ಏನನ್ನಾದರೂ ಮಾಡಿಬಿಟ್ಟರೆ ಅವರನ್ನು ಸೋಲಿಸಿ ಅವರಿಂದ ಪ್ರತೀಕಾರ ಪಡೆಯಬೇಕು. ಇದುವೇ ಸ್ಥಾನಮಾನ ಮತ್ತು ಗೌರವವಾಗಿದೆ. ಹೆಚ್ಚಿನ ವ್ಯಕ್ತಿಗಳು ಈ ರೀತಿಯಾಗಿ ಆಲೋಚಿಸುತ್ತಾರೆ. ಆದರೆ ಪ್ರವಾದಿ(ಸ) ಕಲಿಸಿರುವುದೇನೆಂದರೆ ಓರ್ವನ ಸ್ಥಾನಮಾನವು ಹೆಚ್ಚುವುದು ಅವನಿಗೆ ತೊಂದರೆ ಮಾಡಿದವನೊಂದಿಗೆ ಪ್ರತೀಕಾರ ಪಡೆಯುವುದರಲ್ಲಲ್ಲ. ಬದಲಾಗಿ ಕ್ಷಮಿಸುವಾಗ ಸ್ಥಾನಮಾನವು ಹೆಚ್ಚುತ್ತದೆ.

ಇಲ್ಲಿ ಪ್ರಸ್ತಾಪಿಸಲಾಗಿರುವುದು ಸಾಮರ್ಥ್ಯವಿಲ್ಲದ ಕಾರಣ ಅಥವಾ ಹೆದರಿಕೆಯಿಂದ ಪ್ರತೀಕಾರ ತೀರಿಸದ ವ್ಯಕ್ತಿಗಳ ಕುರಿತಲ್ಲ. ಈ ರೀತಿ ಹಿಂಜರಿಯುವುದು ಹೆದರಿಕೆ ಅಥವಾ ದೌರ್ಬಲ್ಯವೇ ಆಗಿದೆ. 'ಅಫ್‌ವ್' ಅಂದರೆ ಕ್ಷಮಿಸುವುದಕ್ಕೆ ಮಹತ್ವವಿರುವುದು ಶಕ್ತಿ ಮತ್ತು ಧೈರ್ಯವಿರುವ ಸಮಯದಲ್ಲಾಗಿದೆ. ಅನುಕೂಲವಿರುವಾಗಲೂ ಪ್ರತೀಕಾರ ತೀರಿಸದೆ ಬಿಟ್ಟು ಬಿಡಲು ಉತ್ತಮ ಹೃದಯ ವೈಶಾಲ್ಯ ಮತ್ತು ವಿವೇಕವುಳ್ಳ ವ್ಯಕ್ತಿಗಳಿಗೆ ಮಾತ್ರ ಸಾಧ್ಯವಾಗುತ್ತದೆ. ತನಗಿರುವ ಸ್ಥಾನಮಾನವು ತನ್ನ ಸ್ವಭಾವ ಚಾರಿತ್ರ್ಯಗಳಿಂದ ಲಭಿಸಿರುತ್ತದೆ. ಅದು ಇತರರ ಕೆಟ್ಟಕೆಲಸಗಳಿಂದ ಕೆಡಿಸಲ್ಪಡುವುದಿಲ್ಲ ಎಂಬುದು ಅವರಿಗೆ ತಿಳಿದಿರುತ್ತದೆ. ಈ ಅರಿವು ಅವರ ಸ್ಥಾನಮಾನವನ್ನು ಹೆಚ್ಚಿಸುತ್ತದೆ. ತನಗೆ ಅಪಮಾನವಾಗಿದೆ ಅಥವಾ ತನಗೆ ದ್ರೋಹ ಬಗೆಯಲಾಗಿದೆ ಎಂದು ಭಾಸವಾದ ಕೂಡಲೇ ಪ್ರತೀಕಾರ ತೀರಿಸದೆ ಇದ್ದರೆ ತನ್ನ ಸ್ಥಾನಮಾನವು ಹೊರಟು ಹೋಗುವುದು ಎಂದು ಭಯಪಡುವವರಿಗೆ ವಾಸ್ತವದಲ್ಲಿ ಸ್ಥಾನಮಾನವೆಂದರೇನು ಎಂಬುದರ ಸರಿಯಾದ ಅರಿವು ಇರುವುದಿಲ್ಲ. ಜನರಿಗೆ ತನ್ನ ಬಗ್ಗೆಯುಳ್ಳ ಗೌರವ ಅಥವಾ ಭಯವನ್ನು ಮಾತ್ರ ಆಧರಿಸಕೊಂಡು ತನ್ನ ಅಭಿಮಾನ ಮತ್ತು ಗೌರವ ನೆಲೆ ನಿಂತಿದೆ ಎಂಬುದಾಗಿ ಇಂತಹವರು ಭಾವಿಸಿಕೊಂಡಿರುತ್ತಾರೆ.

ಕುಲ ಮಹಿಮೆ, ವಂಶಾವಳಿ, ಸಂಪತ್ತು, ಅಧಿಕಾರ, ಸ್ಥಾನಮಾನಗಳು, ದೇಶ ಭಾಷೆ ಇತ್ಯಾದಿ ಅನೇಕ ಸಂಗತಿಗಳು ಇಂದು ಜನರ ಗೌರವ ಮತ್ತು ಉನ್ನತಿಯ ಮಾನದಂಡಗಳಾಗಿ ಪರಿಗಣಿಸಲ್ಪಡುತ್ತಿದೆ. ಇಂತಹ ನಂಬಿಕೆಗಳನ್ನೆಲ್ಲ ಇಸ್ಲಾಮ್ ನಿಷೇಧಿಸುತ್ತದೆ. ಕುಲ, ದೇಶ, ಭಾಷೆ, ಸಂಪತ್ತು, ಅಧಿಕಾರಗಳೆಲ್ಲವೂ ಅಲ್ಲಾಹನ ಅನುಗ್ರಹಗಳಾಗಿವೆ. ಇವುಗಳ ಪೈಕಿ ಯಾವುದನ್ನೂ ಮನುಷ್ಯ ಕೇವಲ ಸ್ವಂತ ಪರಿಶ್ರಮದಿಂದ ಮಾತ್ರ ಗಳಿಸಲು ಸಾಧ್ಯವಿಲ್ಲ. ಪ್ರಪಂಚದ ಸೃಷ್ಟಿಕರ್ತನೂ ಅನುಗ್ರಹೀತನೂ ಆದ ಅಲ್ಲಾಹನು ಮಾತ್ರ ಅತ್ಯುತ್ತಮನು. ಮನುಷ್ಯರೂ ಸೇರಿದಂತೆ ಎಲ್ಲರೂ ಅವನ ದಾಸರಾಗಿದ್ದಾರೆ. ಆದುದರಿಂದ ಮನುಷ್ಯನು ಅತ್ಯುನ್ನತನಾದ ಅಲ್ಲಾಹನ ವಿನೀತ ದಾಸನಾಗಿ ವರ್ತಿಸಬೇಕಿದೆ. ನಾವು ಸದಾ ನೆನಪಿಟ್ಟುಕೊಳ್ಳಬೇಕಾದ ಮಹಾ ಸತ್ಯ ಇದಾಗಿದೆ. ಸತ್ಯವನ್ನು ಅರಿತುಕೊಂಡು ಅದನ್ನು ಆಚರಿಸುವುದರಿಂದಲೇ ಮನುಷ್ಯನು ಉನ್ನತನಾಗುತ್ತಾನೆ. ನಾನು ಅಲ್ಲಾಹನ ದಾಸ ಮತ್ತು ಅಲ್ಲಾಹನು ನನ್ನ ಯಜಮಾನ ಎಂಬ ಸತ್ಯವು ವ್ಯಕ್ತಿಯಲ್ಲಿ ಎಷ್ಟು ಆಳವಾಗಿ ನೆಲೆಯೂರುತ್ತದೋ ವ್ಯಕ್ತಿ ಅಷ್ಟರ ಮಟ್ಟಿಗೆ ವಿನೀತ ಮತ್ತು ವಿಧೇಯನಾಗಿರುವನು. ಓರ್ವನಿಗೆ ಅಲ್ಲಾಹನೊಂದಿಗಿನ ವಿನೀತ ಭಾವವು ಹೆಚ್ಚುತ್ತಿದ್ದಂತೆಯೇ ಅವನು ಅಷ್ಟರ ಮಟ್ಟಿಗೆ

ಅಲ್ಲಾಹನ ಸಾಮೀಪ್ಯ ಗಳಿಸುತ್ತಾನೆ. ಅತ್ಯುನ್ನತನಾದ ಅಲ್ಲಾಹನ ಸಾಮೀಪ್ಯ ಗಳಿಸಿದಷ್ಟೇ ಅವನು ಉನ್ನತನಾಗುತ್ತಾ ಸಾಗುತ್ತಾನೆ. ಅದನ್ನೇ ಕುರ್‌ಆನ್ ಹೇಳುತ್ತದೆ. ''ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿಹೆಚ್ಚು ಗೌರವಕ್ಕೆ ಪಾತ್ರನು.''

(ಅಲ್ ಹುಜುರಾತ್:13)



# 47. ದಾನದ ಮಹತ್ವ

عن ابي سَعيد الخُدري رضي الله عنه قال قَالَ رَسُولُ اللّٰه ﷺ
لأنْ يَتصَدَّقَ الْمَرْءُ فِي حَيَاتِه بِدِرْهَمٍ خَيْرٌ لَهُ مِنْ أنْ يَتصَدَّقَ
بِمائَة عِنْدَ مَوْتِه (ابوداود)

ಪ್ರವಾದಿ(ಸ) ಹೇಳಿರುವುದಾಗಿ ಅಬೂ ಸಈದ್ ಖುದ್ರೀ(ರ) ವರದಿ ಮಾಡುತ್ತಾರೆ: ''ಓರ್ವ ವ್ಯಕ್ತಿ ಮರಣಾಸನ್ನನಾದಾಗ ನೂರು ದಿರ್ಹಮ್ ದಾನ ಮಾಡುವುದಕ್ಕಿಂತ, ತನ್ನ ಜೀವನ ಕಾಲದಲ್ಲಿ ಒಂದು ದಿರ್ಹಮ್ ದಾನ ಮಾಡುವುದು ಶ್ರೇಷ್ಠವಾಗಿದೆ.'' (ಅಬೂ ದಾವೂದ್)

ದಾನ ಎಂಬುದು ಇಸ್ಲಾಮ್ ಆದೇಶಿಸಿರುವ ಮಹತ್ವಪೂರ್ಣ ಪುಣ್ಯ ಕೆಲಸವಾಗಿದೆ. ದಾನದ ಪುಣ್ಯ ಮತ್ತು ಮಹತ್ವವಿರುವುದು ದಾನ ನೀಡಲ್ಪಡುವ ವಸ್ತುವಿನ ಗುಣ ಮತ್ತು ತೂಕದಲ್ಲಿ ಅಲ್ಲ, ಬದಲಾಗಿ ಆ ವಸ್ತು ಮತ್ತು ಅದರ ಒಡೆಯನಿಗಿರುವ ಸಂಬಂಧವು ಅದನ್ನು ನಿರ್ಣಯಿಸುತ್ತದೆ ಅಥವಾ ಒಡೆಯನಿಗೆ ಆ ವಸ್ತುವಿನೊಂದಿಗಿರುವ ಮನೋಭಾವವು ಅದನ್ನು ನಿರ್ಣಯಿಸುತ್ತದೆ. ಈ ವಿಷಯವನ್ನು ಮನದಟ್ಟು ಮಾಡಿಸುವ ಒಂದು ಸಣ್ಣ ಪ್ರವಾದಿ ವಚನ ಇದಾಗಿದೆ. ಕೆಲವರಿಗೆ ತಮ್ಮ ಬಳಿ ಆರೋಗ್ಯ ಮತ್ತು ಆಯುಷ್ಯ ಇರುವಾಗ ದಾನ ಮಾಡುವ ವಿಷಯದಲ್ಲಿ ಯಾವುದೇ ಆಸಕ್ತಿ ಇರುವುದಿಲ್ಲ, ತಮ್ಮ ಬಳಿ ಇರುವ ಸಂಪತ್ತಿನ ಮೂಲಕ ಇನ್ನಷ್ಟು ಸಂಪತ್ತನ್ನು ಶೇಖರಿಸುವುದರಲ್ಲಿ ಹಾಗೂ ಕೇವಲ ವೈಯಕ್ತಿಕ ಆಶೆ ಅಭಿಲಾಷೆಗಳನ್ನು ಪೂರ್ತಿಗೊಳಿಸುವ ಬಗ್ಗೆ ಮಾತ್ರ ಅವರ ಗಮನ ಇರುತ್ತದೆ. ಸಾಮಾನ್ಯವಾಗಿ ಆರೋಗ್ಯವಂತನಾಗಿರುವಾಗ, ಜೀವಿಸಲು ಇನ್ನಷ್ಟು ಆಯುಷ್ಯ ಬಾಕಿ ಇದೆ ಎಂಬ ನಿರೀಕ್ಷೆ ಹೊಂದಿರುವಾಗ, ಮನುಷ್ಯನಲ್ಲಿ ಆಶೆ, ಆಕಾಂಕ್ಷೆಗಳು, ನಿರೀಕ್ಷೆಗಳು ಇರುವುದು ಸ್ವಾಭಾವಿಕವಾಗಿದೆ. ಭೌತಿಕ ಆಗ್ರಹ ಅಭಿಲಾಷೆಗಳನ್ನು ಬಯಸುವಾಗ ದೇವನ ಪ್ರೀತಿ, ಸತ್ಕರ್ಮಗಳೆಲ್ಲವೂ ಹಿಂದಕ್ಕೆ ತಳ್ಳಲ್ಪಡುವುದು. ಆದುದರಿಂದಲೇ ಆರೋಗ್ಯ ಮತ್ತು ಆಯುಷ್ಯವಿರುವ ಸಮಯದಲ್ಲಿ ದಾನಧರ್ಮಗಳ ವಿಷಯಕ್ಕೆ ಅನೇಕರು ಹಿಂಜರಿಯುತ್ತಾರೆ. ಭೌತಿಕ ಲಾಭಗಳಿಗಿಂತ ದೇವನ ಸಂಪ್ರೀತಿಗೆ ಹೆಚ್ಚು ಮಹತ್ವವನ್ನು

ನೀಡುವವರು ಮಾತ್ರ ಇಂತಹ ಕಾಲಘಟ್ಟದಲ್ಲೂ ಧರ್ಮನಿಷ್ಠರೂ ಉದಾರಿಗಳೂ ಆಗಿರುತ್ತಾರೆ.

ಆರೋಗ್ಯವಿದ್ದ ಕಾಲದಲ್ಲಿ ದಾನಧರ್ಮಗಳಿಂದ ವಿಮುಖರಾದವರ ಪೈಕಿ ಹಲವರು ವಾರ್ಧಕ್ಯದಲ್ಲಿ ಅನಾರೋಗ್ಯದ ವೇಳೆ ಬಹಳ ಉದಾರಮತಿಗಳೂ, ದಾನಿಗಳೂ ಆಗುವುದನ್ನು ಕಾಣುತ್ತೇವೆ. ಕಾರಣವೇನೆಂದರೆ ಅವರು ಮರಣದ ಲಕ್ಷಣಗಳನ್ನು ಕಾಣಲಾರಂಭಿಸಿರುತ್ತಾರೆ. ತಾನು ಸಂಪಾದಿಸಿಟ್ಟಿರುವ ಯಾವ ವಸ್ತುವೂ ಇನ್ನು ತನ್ನ ಪ್ರಯೋಜನಕ್ಕೆ ಬರಲಾರದು. ಮಕ್ಕಳೆಲ್ಲ ದೊಡ್ಡವರಾಗಿ ತಮ್ಮ ತಮ್ಮ ಕಾಲ ಮೇಲೆ ನಿಂತಿರುವರು. ತಾನು ಆರಂಭಿಸಿದ ವ್ಯಾಪಾರ ವ್ಯವಹಾರಗಳೆಲ್ಲ ಒಳ್ಳೆಯ ರೀತಿಯಲ್ಲಿ ನಡೆಯುತ್ತಿದೆ. ಹೊಸ ವ್ಯಾಪಾರಕ್ಕೆ ಕೈ ಹಾಕಲು ಇನ್ನು ಸಾಧ್ಯವಿಲ್ಲ, ಆದುದರಿಂದ ಸಂಪತ್ತನ್ನು ದಾನ ಮಾಡಿ ಬಿಡುವ, ಪರಲೋಕದಲ್ಲಿ ಪ್ರಯೋಜನವಾಗಲಿ ಎಂದು ಬಾವಿಸುತ್ತಾರೆ. ಇದು ಇಂತಹ ವ್ಯಕ್ತಿಗಳ ವರ್ತನೆಯಾಗಿರುತ್ತದೆ. ಈ ರೀತಿ ಸಂಪತ್ತನ್ನು ತನಗೆ ಅಗತ್ಯ ಇಲ್ಲದಾಗಿ ಬಿಡುವಾಗ ದಾನ ನೀಡುವುದನ್ನು ಮತ್ತು ಸಂಪತ್ತಿನ ಮೂಲಕ ನೂರು ನೂರು ಕನಸುಗಳನ್ನು ನನಸಾಗಿಸಬಹುದಾದ ಸಂದರ್ಭದಲ್ಲಿ ಮಾಡುವ ದಾನವನ್ನು ಒಂದು ಮತ್ತು ನೂರರ ಮಧ್ಯೆ ಇರುವ ವ್ಯಾಪಾರಕ್ಕೆ ಸಮವೆಂದು ಪ್ರವಾದಿ(ಸ) ಹೇಳಿರುವರು. ಅಂದರೆ ಮರಣದ ಲಕ್ಷಣಗಳು ಕಾಣಲಾರಂಭಿಸಿದ ಬಳಿಕ ಮಾಡುವ ದಾನಧರ್ಮಗಳಿಗೆ ಪುಣ್ಯ ಅಥವಾ ಪ್ರತಿಫಲ ಇಲ್ಲವೆಂದು ಇದರ ಅರ್ಥವಲ್ಲ. ದಾನಧರ್ಮವನ್ನು ಯಾವಾಗ ಮಾಡಿದರೂ ಅದಕ್ಕೆ ಪ್ರತಿಫಲ ಇದ್ದೇ ಇದೆ. ಐಹಿಕವಾದ ಆಶೆ ಆಕಾಂಕ್ಷೆಗಳನ್ನು ಬಲಿ ನೀಡಿ ಮಾಡಲಾಗುವ ದಾನಧರ್ಮವು, ಸಂಪತ್ತಿನ ಮೇಲೆ ಆಸಕ್ತಿ ಕಡಿಮೆಯಾದ ಮೇಲೆ ನೀಡಲಾಗುವ ದಾನಧರ್ಮಕ್ಕಿಂತ ಶ್ರೇಷ್ಠವಾಗಿದೆ ಎಂಬ ಶಿಕ್ಷಣವನ್ನು ಈ ಹದೀಸ್ ನಮಗೆ ನೀಡುತ್ತದೆ.



# 48. ಲಂಚ ಮತ್ತು ಶಿಫಾರಸ್ಸು

عَنْ أَبِي هُرَيْرَةَ رَضِيَ اللّٰهُ عَنْهُ قَالَ قَالَ رَسُولُ اللّٰهِ ﷺ لَعَنَ اللّٰهُ الرَّاشِيَ وَالْمُرْتَشِيَ فِي الْحُكْمِ. (ترمذی، ابن حبان)

ಹ. ಅಬೂ ಹುರೈರಾ(ರ)ರಿಂದ ವರದಿಯಾಗಿದೆ. ಪ್ರವಾದಿ(ಸ) ಹೇಳಿರುವರು- 'ತೀರ್ಪು ನೀಡುವಾಗ ಲಂಚ ಕೊಡುವವರನ್ನು ಮತ್ತು ಲಂಚ ಪಡೆಯುವವರನ್ನು ಅಲ್ಲಾಹನು ಶಪಿಸಿರುವನು.' (ತಿರ್ಮಿದಿ, ಇಬ್ನು ಮಾಜ)

ಲಂಚವನ್ನು ಅಲ್ಲಾಹನು ನಿಷೇಧಿಸಿರುವನು ಎಂಬುದು ಸಾಮಾನ್ಯ ಮುಸ್ಲಿಮರಿಗೆ ತಿಳಿಯದ ಸಂಗತಿಯಲ್ಲ, ಆದರೆ ಇಂದು ಲಂಚದ ಹಾವಳಿ ಜಗತ್ತಿನಾದ್ಯಂತ ವಿಪರೀತ ಹೆಚ್ಚುತ್ತಿದೆ. ತಳಮಟ್ಟದಲ್ಲಿರುವ ಕ್ಲಾರ್ಕ್‌ಗಳು, ಪೊಲೀಸರು ಮಾತ್ರವಲ್ಲ ಅಭಿವೃದ್ಧಿ ಹೊಂದಿದ ಮುಂದುವರಿದ ದೇಶಗಳ ರಾಷ್ಟ್ರಪತಿಗಳೂ, ಪ್ರಧಾನಮಂತ್ರಿಗಳೂ ಲಂಚದ ವಿಷಯದಲ್ಲಿ ಸಿಕ್ಕಿ ಬೀಳುವ ವಾರ್ತೆಗಳು ದಿನಂಪ್ರತಿ ವರದಿಯಾಗುತ್ತಿರುತ್ತದೆ. ಈ ರೀತಿಯ ಪರಿಸ್ಥಿತಿಯಲ್ಲಿ ಲಂಚವು ನಿಕೃಷ್ಟವಾದ ನಿಷಿದ್ಧ ಕೆಲಸವೆಂಬ ವಿಚಾರವು ಜನರಿಗೆ ಮರೆತು ಹೋಗಿರುವುದು ಕಂಡು ಬರುತ್ತದೆ. ಅಂಗೀಕೃತ ಸಂಪ್ರದಾಯ ಎಂಬ ಅರ್ಥದಲ್ಲಿ 'ಮಾಮೂಲು' ಎಂಬ ಪದವು ಹೆಚ್ಚು ಕಡಿಮೆ ಲಂಚದ ಪರ್ಯಾಯವೇ ಆಗಿದೆ. ಉದ್ಯೋಗ ರಂಗದಲ್ಲಿ ಕೆಲಸ ನಡೆಯಬೇಕಿದ್ದರೆ ಲಂಚವು ಅಂಗೀಕೃತವಾದ ವಿಚಾರವಾಗಿದೆ ಎಂಬುದು ಲಂಚವು ಜನರ ಮನಸ್ಸಿನಲ್ಲಿ ಬೇರೂರಿರುವುದರ ಲಕ್ಷಣವಾಗಿದೆ. ಲಂಚವನ್ನು ಕೇಳುವುದಕ್ಕೆ, ಜನಸಾಮಾನ್ಯನಿಗೆ ಅದನ್ನು ನೀಡಿ ಕೆಲಸವನ್ನು ಮಾಡಿಸುವುದಕ್ಕೆ ಯಾವ ರೀತಿಯ ಸಂಕೋಚವೂ ಇಲ್ಲದ ಇಂದಿನ ಪರಿಸ್ಥಿತಿಯಲ್ಲಿ ಸುಪರಿಚಿತವಾದ ಈ ಪ್ರವಾದಿ ವಚನವನ್ನು ನೆನಪಿಸಿಕೊಳ್ಳುವುದು ಅನುಚಿತವೆನಿಸದು.

ನ್ಯಾಯ ತೀರ್ಮಾನವನ್ನು ತಮ್ಮ ಪರವಾಗಿಸಲು ಲಂಚವನ್ನು ನೀಡುವುದು ಮತ್ತು ಪಡೆದುಕೊಳ್ಳುವುದಕ್ಕೆ ಸಂಬಂಧ ಪಟ್ಟಂತೆ ಈ ಹದೀಸ್ ವಚನದಲ್ಲಿ ಪ್ರಸ್ತಾಪಿಸಲಾಗಿದೆ. ಹಿಂದಿನ ಕಾಲದಲ್ಲಿ ಲಂಚವನ್ನು ಪಡೆಯುವುದಕ್ಕೆ ವ್ಯಾಜ್ಯಗಳ ತೀರ್ಮಾನವನ್ನು ನಡೆಸುವವರಿಗೆ ಅವಕಾಶವಿರುತ್ತಿತ್ತು. ಆದುದರಿಂದಲೇ ಈ ಹದೀಸಿನಲ್ಲಿ ನ್ಯಾಯ ತೀರ್ಮಾನವನ್ನೇ ಮುಖ್ಯವಾಗಿ

ಪ್ರಸ್ತಾಪಿಸಲಾಗಿದೆ. ನ್ಯಾಯಾಧೀಶರಿಗೆ ಲಂಚವನ್ನು ನೀಡಬಹುದು ಅಥವಾ ಅವರನ್ನು ಪಡೆಯಬಹುದೆಂದು ಇದರರ್ಥವಲ್ಲ. ನ್ಯಾಯ ತೀರ್ಮಾನವನ್ನು ಪರಾಮರ್ಶಿಸದೆಯೇ ಲಂಚ ಕೊಡುವವರನ್ನು ಮತ್ತು ಪಡೆಯುವವರನ್ನು ಈ ಹದೀಸ್‌ನಲ್ಲಿ ಶಪಿಸಲಾಗಿದೆ. ಕೆಲವು ಹದೀಸ್‌ಗಳಲ್ಲಿ ಲಂಚವನ್ನು ನೀಡುವ ಮಧ್ಯವರ್ತಿಗಳನ್ನೂ ಶಪಿಸಿರುವುದನ್ನು ಕಾಣಬಹುದಾಗಿದೆ.

ಹದೀಸಿನಲ್ಲಿರುವ ನಿಷಿದ್ಧವೆಂದು ಸೂಚಿಸುವ ಪದ(ಶಾಪ) ವಿಶೇಷವಾಗಿ ಗಮನಾರ್ಹವಾಗಿದೆ. ಸಾಧಾರಣವಾಗಿ ನಿಷಿದ್ಧ ಕೆಲಸಗಳ ಬಗ್ಗೆ ನಿಷಿದ್ಧವೆಂದೂ, ಹರಾಮ್ ಎಂದೂ ಹೇಳಲಾಗುತ್ತದೆ. ಅಲ್ಲಾಹನ ಕಠಿಣ ಕೋಪಕ್ಕೆ ಕಾರಣವಾಗುವ ಮತ್ತು ಸುಲಭದಲ್ಲಿ ಮರೆತು ಬಿಡಲು, ಒಪ್ಪಿಕೊಳ್ಳಲು, ಕ್ಷಮಿಸಲು ಸಾಧ್ಯವಿಲ್ಲದ ಕೆಟ್ಟ ಕೆಲಸಗಳನ್ನು ಮಾಡುವವರನ್ನು ಅಲ್ಲಾಹನು ಶಪಿಸಿರುತ್ತಾನೆ. ಅದು ಸಾಮಾನ್ಯ ಹರಾಮ್ ಕೆಲಸಗಳಿಗಿಂತಲೂ ನಿಕೃಷ್ಟ ಕೆಲಸಗಳಾಗಿವೆ.

ಅನ್ಯಾಯವಾಗಿ ಲಾಭಗಳಿಸಲಿಕ್ಕಾಗಿ ಸಂಬಂಧ ಪಟ್ಟವರಿಗೆ ಹಣವನ್ನು ನೀಡುವುದನ್ನು ಪವಿತ್ರ ಕುರ್‌ಆನ್ ಬಹಳ ಕಠಿಣವಾಗಿ ವಿರೋಧಿಸಿದೆ. ''ನೀವು ನಿಮ್ಮ ಸಂಪತ್ತನ್ನು ಪರಸ್ಪರ ಅನುಚಿತ ರೀತಿಯಿಂದ ಕಬಳಿಸಬಾರದು ಮತ್ತು ನಿಮಗೆ ಇತರರ ಸಂಪತ್ತಿನ ಒಂದಂಶವನ್ನು ಉದ್ದೇಶಪೂರ್ವಕವಾಗಿ ಅಕ್ರಮ ರೂಪದಿಂದ ಕಬಳಿಸುವ ಸಂದರ್ಭ ಸಿಗುವಂತೆ ಅವುಗಳನ್ನು ಅಧಿಕಾರಿಗಳ ಮುಂದೆ ಸಮರ್ಪಿಸಬಾರದು.'' (2:188) ಈ ಸೂಕ್ತವು ಸೂಚಿಸಿರುವ ನಿಷಿದ್ಧವೆಂದು ತಿಳಿಸಿರುವ ಗಳಿಕೆಗಳ ಪೈಕಿ ಅತಿ ನಿಕೃಷ್ಟವಾದುದು ಲಂಚವಾಗಿದೆ. ''ಆದುದರಿಂದಲೇ ಅದನ್ನು ಕೇವಲ ನಿಷಿದ್ಧವೆಂದು ಮಾತ್ರ ಹೇಳದೆ 'ಶಪಿಸಲ್ಪಟ್ಟದ್ದು' ಎಂದೂ ವಿಶೇಷವಾಗಿ ಹೇಳಲಾಗಿದೆ. ಮಧ್ಯವರ್ತಿಗಳ ಹಾವಳಿಯಿಂದಾಗಿ ಸರಕಾರದ ಎಲ್ಲಾ ವಿಭಾಗಗಳಲ್ಲೂ ಲಂಚವು ಬೇರೂರಲು ಕಾರಣವಾಗಿದೆ. ಇವರ ಪೈಕಿ ಕೆಲವರು ಅಗತ್ಯವಿರುವವರಿಗೆ ಸಂಬಂಧ ಪಟ್ಟ ಕೆಲಸಗಳನ್ನು ಮಾಡಿಸಿ ಕೊಡುವ ಅಧಿಕಾರಿಗಳನ್ನು ಭೇಟಿ ಮಾಡಿಸುವ ಏಜಂಟರಿದ್ದಾರೆ. ಈ ವ್ಯಕ್ತಿಗಳೂ ಲಂಚವನ್ನು ಪಡೆಯುವವರು ಮತ್ತು ಕೊಡುವವರಂತೆಯೇ ಶಾಪಕ್ಕೆ ಅರ್ಹರಾಗಿದ್ದಾರೆಂದು ಕೆಲವು ಹದೀಸ್‌ಗಳು ಸ್ಪಷ್ಟಪಡಿಸುತ್ತದೆ. ಇನ್ನು ಕೆಲವರು ಅಧಿಕಾರ ಮತ್ತು ಪದವಿಯ ಬಲದಿಂದ ಶಿಫಾರಸ್ಸು ಮಾಡಿ ಕೆಲಸ ಮಾಡಿಸಿ, ಅದಕ್ಕಾಗಿ 'ಪಾರಿತೋಷಕಗಳನ್ನು, ಪಡೆಯುವವರಾಗಿರುತ್ತಾರೆ. ಒಬ್ಬ ವ್ಯಕ್ತಿಯ ನ್ಯಾಯ ಸಮ್ಮತ ಅಗತ್ಯಗಳನ್ನು ಪೂರ್ತಿಗೊಳಿಸಿಕೊಡಲಿಕ್ಕಾಗಿ ಶಿಫಾರಸ್ಸು ಮಾಡುವುದನ್ನು ಅಥವಾ ಬೇರೆ ಯಾವುದಾದರೂ ರೂಪದಲ್ಲಿ ಸಹಾಯ ಮಾಡುವುದನ್ನು ಇಸ್ಲಾಮ್ ಪ್ರೋತ್ಸಾಹಿಸುತ್ತದೆ. ಆದರೆ ಅದನ್ನು ಒಂದು ಸಂಪಾದನೆಯ ಮಾರ್ಗವಾಗಿಸುವುದನ್ನು ನಿಷೇಧಿಸುತ್ತದೆ. ಅಬೂದಾವೂದ್ ಉದ್ಧರಿಸಿರುವ ಪ್ರವಾದಿ ವಚನವೊಂದರಲ್ಲಿ ಈ ರೀತಿ ಹೇಳಲಾಗಿದೆ. 'ಒಬ್ಬ ವ್ಯಕ್ತಿ ಮತ್ತೊಬ್ಬರಿಗೆ ಶಿಫಾರಸ್ಸು ಮಾಡುವುದು ಮತ್ತು ಅದರ ಹೆಸರಿನಲ್ಲಿ ಪಾರಿತೋಷಕ ಪಡೆಯುವುದನ್ನು ಮಾಡಿದರೆ, ಅವನು ಬಡ್ಡಿಯ ಒಂದು ದೊಡ್ಡ ಬಾಗಿಲನ್ನು ತೆರೆದಂತೆ.'

ಒಮ್ಮೆ ಹ. ಮಸ್ರೂಕ್ ಅಂದಿನ ಗವರ್ನರಾಗಿದ್ದ ಇಬ್ನು ಝಿಯಾದಿಯೊಂದಿಗೆ ಒಂದು ಶಿಫಾರಸ್ಸು ಮಾಡಿದ ಕಾರಣಕ್ಕೆ ಶಿಫಾರಸ್ಸು ಮಾಡಲು ಹೇಳಿದ ವ್ಯಕ್ತಿಯು ಅವರಿಗೆ ಉಡುಗೊರೆಗಳನ್ನು ನೀಡಿದ. ಅದನ್ನು ನಿರಾಕರಿಸುತ್ತಾ ಹ. ಮಸ್ರೂಕ್ ಹೇಳುತ್ತಾರೆ– ''ಒಬ್ಬ ಮುಸ್ಲಿಮನಿಗೆ ಒದಗಿರುವ ಸಂಕಷ್ಟವನ್ನು ನಿರಾಕರಿಸಿದುದರ ಹೆಸರಿನಲ್ಲಿ ಸಣ್ಣ ಅಥವಾ ದೊಡ್ಡ ಉಡುಗೊರೆಯನ್ನು ಸ್ವೀಕರಿಸಿದರೆ ಅದು ನಿಕೃಷ್ಟ ಸಂಪಾದನೆಯಾಗುತ್ತದೆ.'' ಮಸ್ರೂಕ್ ಹೇಳುತ್ತಾರೆ– ''ನ್ಯಾಯ ತೀರ್ಮಾನವನ್ನು ನಮ್ಮ ಪರವಾಗಿಸಲು ಬೇಕಾಗಿ ಲಂಚವನ್ನು ಕೊಡುವುದನ್ನು ನಾವು ನಿಕೃಷ್ಟ ಸಂಪಾದನೆಯೆಂದು ಭಾವಿಸಿದ್ದೇವೆ. ಮಸ್ರೂಕ್ ಹೇಳುತ್ತಾರೆ– ''ಅದು ಬಹುದೇವಾರಾಧನೆಯಲ್ಲವೇ?'' ಉದ್ಯೋಗ ಪಡೆಯುವುದಕ್ಕಾಗಿ ಲಂಚವನ್ನು ನೀಡುವುದು. ಅಧಿಕಾರಿಗಳು ಅಥವಾ ಬೇರೆ ಯಾರಾದರೂ ಕೇಳಿ ಅಥವಾ ಕೇಳದೆಯೇ ಸಿಗುವ ಯಾವುದಾದರೂ ವಸ್ತುಗಳನ್ನು ಸ್ವೀಕರಿಸುವುದು ನಿಷಿದ್ಧವೆಂದು ಈ ವರದಿಗಳಿಂದ ಸ್ಪಷ್ಟವಾಗುತ್ತದೆ. ಆದರೆ ಲಂಚ ಕೊಡದೇ ಹೋದರೆ ತನ್ನ ನ್ಯಾಯ ಸಮ್ಮತ, ಅನಿವಾರ್ಯವಾದ ಒಂದು ಅವಕಾಶವು ನಷ್ಟವಾಗುತ್ತದೆ ಎಂದು ದೃಢವಾದ ಸಂದರ್ಭದಲ್ಲಿ ಲಂಚ ಕೊಡುವವನು ಶಪಿಸಲ್ಪಡುವುದಿಲ್ಲ ಎಂದೂ ಇಸ್ಲಾಮೀ ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಬೇರೆ ಎಲ್ಲಾ ಸಂದರ್ಭಗಳಲ್ಲಿ ಕೊಡುವವನೂ, ಪಡೆದುಕೊಳ್ಳುವವನೂ ಒಂದೇ ರೀತಿಯಾಗಿರುತ್ತಾರೆ.

ದೇಶದ ರಾಷ್ಟ್ರಪತಿಯಾಗಿದ್ದರೂ, ಕ್ಷೇತ್ರದ ಅಧಿಕಾರಿಯಾಗಿದ್ದರೂ, ಪೊಲೀಸ್ ಕಾನ್‌ಸ್ಟೇಬಲ್ ಆಗಿದ್ದರೂ ತನ್ನ ಕ್ಷೇತ್ರದಲ್ಲಿರುವ ಎಲ್ಲರಿಗೂ ಅವರ ಹಕ್ಕುಗಳನ್ನು ನೀಡಬೇಕಾದುದು ಅವರ ಕರ್ತವ್ಯಗಳನ್ನು ನಿರ್ವಹಿಸುತ್ತೇವೆಂಬ ಜವಾಬ್ದಾರಿಯನ್ನು ವಹಿಸಿಕೊಂಡವರಾಗಿದ್ದಾರೆ. ಈ ವಿಷಯದಲ್ಲಿ ಆ ವ್ಯಕ್ತಿಯಿಂದ ಏನಾದರೂ ಕುಂದುಕೊರತೆ ಸಂಭವಿಸುವುದೇ ದೊಡ್ಡ ಅಪರಾಧವಾಗಿದೆ. ಆದರೆ ಜನರಿಗೆ ಸಿಗಬೇಕಾದುದನ್ನು ಕಿತ್ತುಕೊಂಡು ತನ್ನ ಸ್ವಾರ್ಥ ಲಾಭಕ್ಕಾಗಿ ಅದನ್ನು ಬೇರೆ ವ್ಯಕ್ತಿಗಳಿಗೆ ನೀಡುವುದು ಎಂಬುದು ಇದಕ್ಕಿಂತಲೂ ಎಷ್ಟೋ ನಿಕೃಷ್ಟವಾದ ಅಪರಾಧವಾಗಿದೆ. ತಮಗೆ ನೀಡಲಾಗಿರುವ ಹೊಣೆಗಾರಿಕೆಯನ್ನು ಒಂದು ವ್ಯಾಪಾರದ ಸರಕಾಗಿ ಅವರು ಮಾರ್ಪಡಿಸಿರುತ್ತಾರೆ. ಇದು ಸರಕಾರ ಮತ್ತು ಅಧಿಕಾರಿಗಳ ಗುರಿಯನ್ನು ಕಳಂಕಿತಗೊಳಿಸಿ ಬಿಡುತ್ತದೆ.

ಸರಕಾರಿ ಅಧಿಕಾರಿಗಳು ದೇಶದ ಪ್ರಜೆಗಳ ಹಕ್ಕುಗಳ ರಕ್ಷಕರಾಗಿರುತ್ತಾರೆ. ಗೋದಾಮೊಂದರ ಕಾವಲುಗಾರ ಅದರೊಳಗಿರುವ ಸರಕನ್ನು ಕದ್ದು ಮಾರುವುದೆಂತರೆ ಅದೆಷ್ಟು ನಿಕೃಷ್ಟವಾದ ಕೆಲಸ. ಒಬ್ಬ ಸರಕಾರಿ ಅಧಿಕಾರಿ ಒಬ್ಬನ ನ್ಯಾಯ ಸಮ್ಮತ ಹಕ್ಕುಗಳನ್ನು ಅಪಹರಿಸಿ ಇತರರಿಗೆ ನೀಡುವುದು ಅಥವಾ ಅನೇಕ ಪ್ರಜೆಗಳ ಹಕ್ಕುಗಳನ್ನು ಅಪಹರಿಸಿ ಯಾರಾದರೊಬ್ಬರಿಗೆ ನೀಡಿ ಅವರಿಂದ ಅದಕ್ಕಾಗಿ ಹಣವನ್ನು ಪಡೆಯುವುದು ಕೂಡಾ ಅದೇ ರೀತಿಯ ನಿಕೃಷ್ಟ ಕೆಲಸವಾಗಿದೆ. ಲಂಚ ನೀಡುವವರೂ ಈ ಕೆಡುಕಿನಲ್ಲಿ ಅದೇ ರೀತಿ ಸಹಭಾಗಿಗಳಾಗುತ್ತಾರೆ. ಒಬ್ಬನ ನ್ಯಾಯಸಮ್ಮತ ಹಕ್ಕನ್ನು ನೀಡುವುದಕ್ಕಾಗಿ ಅವನಿಂದ ಹಣವನ್ನು

ಪಡೆದು ಅನ್ಯಾಯವಾಗಿದೆ. ಇದು ನಾವು ವಿಶ್ವಾಸದ ಬುನಾದಿಯಲ್ಲಿ ಸುರಕ್ಷಿತವಾಗಿರಿಸಲು ಕೊಟ್ಟ ವಸ್ತುವನ್ನು ಮರಳಿ ಪಡೆಯುವಾಗ ಅದಕ್ಕೆ ಹಣವನ್ನು ನೀಡಬೇಕೆಂದು ಕೇಳುವುದಕ್ಕೆ ಸಮಾನವಾಗಿದೆ.



# 49. ರಮಝಾನ್: ಪ್ರವಾದಿಯವರ(ಸ) ಮಾತುಗಳಲ್ಲಿ

عن سلمان الفارسي رَضِيَ اللّٰهُ عَنْهُ قال خَطَبَنَا رسول الله ﷺ فِي آخِرِ يَوْمٍ مِنْ شَعْبَان فقال يَا أَيُّهَا النَّاس قَدْ أَظَلَّكُمْ شَهْرٌ عَظِيمٌ شَهْرٌ مُبَارَكٌ فِيهِ لَيْلَةٌ خَيْرٌ مِنْ أَلْفِ شَهْرٍ، جَعَلَ اللّٰهُ صِيَامَهُ فَرِيضَةً وَقِيَامَ لَيْلِهِ تَطَوُّعًا، مَنْ تَقَرَّبَ فِيهِ بِخَصْلَةٍ مِنَ الْخَيْرِ كَانَ كَمَنْ أَدَّى فَرِيضَةً فِيمَا سِوَاهُ وَمَنْ أَدَّى فَرِيضَةً فِيهِ كَانَ كَمَنْ أَدَّى سَبْعِينَ فَرِيضَةً فِيمَا سِوَاهُ، وَهُوَ شَهْرُ الصَّبْرِ، وَالصَّبْرُ ثَوَابُهُ الْجَنَّةُ، وَشَهْرُ الْمُوَاسَاةِ وَشَهْرٌ يُزَادُ رِزْقُ الْمُؤْمِنِ فِيهِ، وَهُوَ شَهْرٌ أَوَّلُهُ رَحْمَةٌ وَأَوْسَطُهُ مَغْفِرَةٌ وَآخِرُهُ عِتْقٌ مِنَ النَّارِ. وَشَهْرٌ مَنْ فَطَّرَ فِيه صَائِمًا كَانَ مَغْفِرَةً لِذُنُوبِهِ وَعِتْقَ رَقَبَتِهِ مِنَ النَّارِ وَمَنْ سَقَى صَائِمًا سَقَاهُ اللّٰهُ مِنْ حَوْضِي شُرْبَةً لاَ يَظْمَأُ حَتَّى يَدْخُلَ الْجَنَّةَ، وَشَهْرٌ مَنْ خَفَّفَ عَنْ مَمْلُوكِهِ فِيهِ غَفَرَ اللّٰهُ لَهُ وَأَعْتَقَهُ مِنَ النَّارِ.

ಸಲ್ಮಾನ್ ಫಾರ್ಸಿ(ರ) ವರದಿ ಮಾಡುತ್ತಾರೆ. ಒಮ್ಮೆ ಶಅಬಾನ್ ತಿಂಗಳ ಕೊನೆಯ ದಿನದಂದು ಪ್ರವಾದಿ(ಸ) ನಮ್ಮನ್ನುದ್ದೇಶಿಸಿ ಈ ರೀತಿ ಪ್ರವಚನ ನೀಡಿದರು.

''ಜನರೇ! ನಿಮ್ಮ ಮೇಲೆ ಒಂದು ಅತ್ಯಂತ ಮಹತ್ವಪೂರ್ಣ ಮತ್ತು ಮಂಗಳದಾಯಕ ತಿಂಗಳು ನೆರಳು ಮಾಡಿದೆ. ಈ ತಿಂಗಳಲ್ಲಿ ಒಂದು ರಾತ್ರಿಯಿದೆ. ಅದು ಸಾವಿರ ತಿಂಗಳುಗಳಿಗಿಂತಲೂ ಶ್ರೇಷ್ಠವಾಗಿದೆ. ಈ ತಿಂಗಳ ಉಪವಾಸ ವ್ರತವನ್ನು ಅಲ್ಲಾಹನು

ಕಡ್ಡಾಯಗೊಳಿಸಿರುವನು. ಅದರ ರಾತ್ರಿಯಲ್ಲಿ ನಿಂತು ನಮಾಝ್ ಮಾಡುವುದನ್ನು ಐಚ್ಛಿಕ ಆರಾಧನೆಯೆಂದು ಸಾರಿರುವನು. ಈ ತಿಂಗಳಲ್ಲಿ ಕೇವಲ ಅಲ್ಲಾಹನ ಮೆಚ್ಚುಗೆ ಗಳಿಸಲಿಕ್ಕಾಗಿ ಒಂದು ಐಚ್ಛಿಕ ಆರಾಧನೆಯನ್ನು ಮಾಡುವವನು ಇತರ ತಿಂಗಳುಗಳಲ್ಲಿ ಒಂದು ಫರ್ಝ್ (ಕಡ್ಡಾಯ ವಿಧಿ) ನಿರ್ವಹಿಸಿದಂತಾಗುವುದು. ಈ ತಿಂಗಳಲ್ಲಿ ಒಂದು ಕಡ್ಡಾಯ ವಿಧಿ ನೆರವೇರಿಸುವವನು ಇತರ ತಿಂಗಳುಗಳಲ್ಲಿ 70 ಕಡ್ಡಾಯ ವಿಧಿಗಳನ್ನು ನಿರ್ವಹಿಸಿದಂತಾಗುವುದು. ಇದು ಸಹನೆ-ಸ್ಥೈರ್ಯಗಳ ತಿಂಗಳಾಗಿದೆ. ಸಹನೆ-ಸ್ಥೈರ್ಯಗಳ ಪ್ರತಿಫಲವು ಸ್ವರ್ಗವಾಗಿದೆ. ಇದು ಸಹಾನುಭೂತಿ ಮತ್ತು ಪರಸ್ಪರ ಸಹಕಾರದ ತಿಂಗಳಾಗಿದೆ. ಸತ್ಯ ವಿಶ್ವಾಸಿಗಳಿಗೆ ಜೀವನಾಧಾರದಲ್ಲಿ ಸಮೃದ್ಧಿಯುಂಟಾಗುವ ತಿಂಗಳಾಗಿದೆ. ಈ ತಿಂಗಳ ಆರಂಭವು ಅನುಗ್ರಹೀತವಾಗಿದೆ. ಮಧ್ಯಭಾಗವು ಪಾಪ ವಿಮೋಚನೆಯಾಗಿದೆ. ಕೊನೆಯು ನರಕದಿಂದ ಮುಕ್ತಿಯಾಗಿರುತ್ತದೆ. ಅನುಗ್ರಹೀತ ತಿಂಗಳಲ್ಲಿ ಒಬ್ಬ ವ್ಯಕ್ತಿ ಇನ್ನೋರ್ವ ಉಪವಾಸಿಗನ ಪಾರಣೆ ಮಾಡಿಸಿದರೆ ಅದರಿಂದ ಅವನ ಪಾಪಗಳಿಗೆ ಕ್ಷಮೆ ಮತ್ತು ನರಕದಿಂದ ಮುಕ್ತಿ ಲಭಿಸುವುದು. ಓರ್ವನು ಉಪವಾಸಿಗನಿಗೆ ಕುಡಿಯಲು ನೀಡಿದರೆ ಅಲ್ಲಾಹನು ಅವನಿಗೆ ತನ್ನ ಕೊಳದಿಂದ ಕುಡಿಸುವನು. ಆ ಬಳಿಕ ಅವನಿಗೆ ಸ್ವರ್ಗ ಪ್ರವೇಶಿಸುವ ವರೆಗೆ ಬಾಯಾರಿಕೆಯಾಗಲಾರದು. ಈ ತಿಂಗಳಲ್ಲಿ ಒಬ್ಬ ವ್ಯಕ್ತಿ ತನ್ನ ಕೈಕೆಳಗೆ ಇರುವವರೊಂದಿಗೆ ಸೌಮ್ಯವಾಗಿ ವರ್ತಿಸಿದರೆ, ಅಲ್ಲಾಹನು ಅವನ ಪಾಪಗಳನ್ನು ಕ್ಷಮಿಸಿ ಬಿಡುವನು. ಅವನನ್ನು ನರಕದಿಂದ ವಿಮೋಚಿಸುವನು.'' (ಬೈಹಕಿ)

ಇದು ಪ್ರವಾದಿಯವರು(ಸ) ರಮಝಾನ್ ತಿಂಗಳ ಮಹತ್ವ ಮತ್ತು ವಿಶೇಷತೆಯನ್ನು ವಿವರಿಸಿರುವ ಒಂದು ಪ್ರವಚನವಾಗಿದೆ. ಈ ಪ್ರವಚನವನ್ನು ಆಂಶಿಕವಾಗಿಯೂ ಸಂಪೂರ್ಣವಾಗಿಯೂ ಅನೇಕ ಹದೀಸ್ ಸಂಗ್ರಹಕಾರರು ವರದಿ ಮಾಡಿರುವರು. ರಮಝಾನಿನ ವಿಶೇಷತೆ ಮತ್ತು ಮಹತ್ವವನ್ನು ಪ್ರಸ್ತಾಪಿಸುತ್ತಾ ಈ ಪ್ರವಚನವು ಆರಂಭವಾಗುತ್ತದೆ. ಮುಂದುವರಿಯುತ್ತಾ ರಮಝಾನ್ ತಿಂಗಳನ್ನು ವಿಶಾಲವಾಗಿ ಹರಡಿ ತಂಪಾದ ನೆರಳನ್ನು ನೀಡುವ ಒಂದು ವೃಕ್ಷಕ್ಕೆ ಹೋಲಿಸಲಾಗಿದೆ. ರಮಝಾನ್ ಸಂಕಷ್ಟ ಮತ್ತು ಪೀಡನೆಯ ಕಾಲವಲ್ಲ, ಆಶ್ವಾಸನೆ ಮತ್ತು ಭರವಸೆಯ ಸಮಯವಾಗಿದೆ ಎಂದು ಸೂಚಿಸಲಾಗಿದೆ. ಈ ಸಮಾಧಾನ ಮತ್ತು ಸಂತೃಪ್ತಿಯು ಶರೀರಕ್ಕಲ್ಲ, ಆತ್ಮಕ್ಕೆ ಅನುಭವವಾಗುತ್ತದೆ. ಆತ್ಮಕ್ಕೆ ಅದನ್ನು ಅನುಭವಿಸಲು ಸಾಧ್ಯವಾಗಬೇಕಿದ್ದರೆ, ಅದನ್ನು ಸ್ಫೂರ್ತಿಯೊಂದಿಗೆ ಸ್ವಾಗತಿಸಬೇಕು ಮತ್ತು ಅದರ ಅಗತ್ಯಗಳನ್ನು ಪೂರ್ಣಗೊಳಿಸಲು ಸನ್ನದ್ಧರಾಗಿರಬೇಕು. ಇದುವೇ ಈ ತಿಂಗಳ ಮಹತ್ವ ಮತ್ತು ವಿಶೇಷತೆಯಾಗಿದೆ. ಆ ಬಳಿಕ ರಮಝಾನ್‌ತಿಂಗಳಲ್ಲಿ ಮಾತ್ರ ಇರುವ ವಿಶೇಷತೆಗಳನ್ನು ಪ್ರಸ್ತಾಪಿಸಲಾಗಿದೆ. 'ಲೈಲತುಲ್ ಕದ್ರ್,' ಕಡ್ಡಾಯ ಉಪವಾಸ, ರಾತ್ರಿಯ ಐಚ್ಛಿಕ ನಮಾಝ್ ಮೊದಲಾದವುಗಳು. ಮುಂದುವರಿದು ರಮಝಾನಿನಲ್ಲಿ ಅಲ್ಲಾಹನ ಸಂಪ್ರೀತಿಗಾಗಿ ವ್ಯಕ್ತಿ ಆಚರಿಸುವ ಕಡ್ಡಾಯ ಮತ್ತು ಐಚ್ಛಿಕ ಕರ್ಮಗಳಿಗೆ ಅಲ್ಲಾಹನ ಬಳಿ ಇರುವ ಮೌಲ್ಯ ಮತ್ತು ಪರಿಗಣನೆಯನ್ನು ಸ್ಪಷ್ಟ ಪಡಿಸಲಾಗಿದೆ. ಮನುಷ್ಯನು ಎಲ್ಲಾ ಸಂದರ್ಭಗಳಲ್ಲಿ ಮಾಡಿದ ಪುಣ್ಯಕರ್ಮಗಳಿಗೂ

ಅಲ್ಲಾಹನು ಅದಕ್ಕಿಂತಲೂ ಅಧಿಕ ಪ್ರತಿಫಲವನ್ನು ನೀಡುವನು. ಆದರೆ ರಮಝಾನ್ ತಿಂಗಳಲ್ಲಿ ಮಾಡುವ ಕರ್ಮಗಳಿಗೆ ಇತರ ಸಮಯಗಳಲ್ಲಿ ಮಾಡುವ ಕರ್ಮಗಳಿಗಿಂತ ಎಪ್ಪತ್ತು ಪಟ್ಟು ಅಧಿಕ ಪ್ರತಿಫಲ ನೀಡುವನು. ರಮಝಾನ್ ತಿಂಗಳಿಗೆ ಅಲ್ಲಾಹನು ನೀಡಿರುವ ಮಹತ್ವ ಮತ್ತು ಆ ದಿನಗಳಲ್ಲಿ ದಾಸನು ನಿರ್ವಹಿಸುವ ಸತ್ಕರ್ಮಗಳು ಅತ್ಯಂತ ಭಯ ಭಕ್ತಿಯಿಂದ ಕೂಡಿದ್ದು ನಿಷ್ಕಳಂಕವಾಗಿರುವುದೇ ಇದಕ್ಕಿರುವ ಕಾರಣವಾಗಿರುತ್ತದೆ. ಅದರ ಬಳಿಕ ರಮಝಾನ್ ಸಹನೆ ಮತ್ತು ಸಹಾನುಭೂತಿಯ ತಿಂಗಳಾಗಿದೆ ಎಂಬುದನ್ನು ಪ್ರಸ್ತಾಪಿಸಲಾಗಿದೆ.

ಉಪವಾಸವನ್ನು ಆಚರಿಸುವ ಮೂಲಕ ಸತ್ಯವಿಶ್ವಾಸಿ ದೇವಮಾರ್ಗದಲ್ಲಿ ಸ್ಥಿರವಾಗಿ ನಿಂತು ಸ್ವೇಚ್ಛೆಗಳ ಮೇಲೆ ನಿಯಂತ್ರಣವನ್ನು ಸಾಧಿಸುತ್ತಾನೆ. ಹೀಗೆ ಸ್ಥೈರ್ಯ ಮತ್ತು ಆತ್ಮನಿಯಂತ್ರಣವನ್ನು ಅಭ್ಯಾಸ ಮಾಡಿಕೊಳ್ಳುವನು ಎಂಬುದೇ ರಮಝಾನ್ ಸಹನೆಯ ತಿಂಗಳು ಎಂದಿರುವುದರ ಅರ್ಥವಾಗಿದೆ. ಆಗ ಅವನಿಗೆ ಅಲ್ಲಾಹನೊಂದಿಗಿರುವ ವಿಧೇಯತೆ ಹೆಚ್ಚುವುದು. ಸತ್ಯವಿಶ್ವಾಸಿ ಯುದ್ಧಭೂಮಿಯಲ್ಲಿರುವ ಸೈನಿಕನಂತೆ. ಅವನು ಜಾಗೃತನಾಗಿಯೂ, ಅಲ್ಲದೆಯೂ ಸದಾ ಪೈಶಾಚಿಕ ಶಕ್ತಿಗಳೊಂದಿಗೆ ಹೋರಾಡಬೇಕಿದೆ. ಸಹನೆಯ ಗುರಾಣಿಯನ್ನು ತಮ್ಮದಾಗಿಸಿಕೊಳ್ಳದ ವ್ಯಕ್ತಿಗಳು ಈ ಯುದ್ಧದ ಆರಂಭದಲ್ಲಿಯೇ ಆಯುಧವನ್ನು ಕೆಳಗಿಟ್ಟು ಶರಣಾಗುವರು. ಸಮಾಜದ ನಿರ್ಗತಿಕರ, ದರಿದ್ರರ ದುಃಖ ದುಮ್ಮಾನಗಳಲ್ಲಿ ಎಲ್ಲರೂ ಸಹಕಾರ ಮನೋಭಾವದಿಂದ ಸಹಾಯ ಮಾಡುವರು ಎಂದು ಸಹಾನುಭೂತಿಯ ತಿಂಗಳು ಎಂದು ಹೇಳಿರುವುದರ ಉದ್ದೇಶ. ಉಪವಾಸದ ದಿನಗಳಲ್ಲಿ ಸಾಧ್ಯವಿರುವವರು ಅಲ್ಲಾಹನು ಅವರಿಗೆ ನೀಡಿರುವ ಅನುಗ್ರಹದಲ್ಲಿ ಸುತ್ತು ಮುತ್ತಲಿರುವ ನಿರ್ಗತಿಕರನ್ನು ಪಾಲುದಾರರಾಗಿಸಬೇಕು. ಅವರ ಆಹಾರದ ವಿಷಯದಲ್ಲಿ ಗಮನ ನೀಡಬೇಕು. ಈ ರೀತಿ ಮಾಡುವುದರಿಂದ ಸತ್ಯವಿಶ್ವಾಸಿ ದರಿದ್ರನಾಗುವುದಿಲ್ಲ, ಅಲ್ಲಾಹನು ಅವನಿಗೆ ಈ ಲೋಕದಲ್ಲಿಯೇ ಮತ್ತಷ್ಟು ಅನುಗ್ರಹಗಳನ್ನು ನೀಡುವನು. ಮಾತ್ರವಲ್ಲ ಪರಲೋಕದಲ್ಲಿಯೂ ದಾನಧರ್ಮದ ಕಾರಣದಿಂದಾಗಿ ಅವನ ಪುಣ್ಯಗಳು ಹೆಚ್ಚುತ್ತಲೇ ಇರುವುದು. ಆದುದರಿಂದಲೇ ಪ್ರವಾದಿ(ಸ) ರಮಝಾನ್ ತಿಂಗಳು ಸತ್ಯವಿಶ್ವಾಸಿಯ ಜೀವನಾಧಾರ ಹೆಚ್ಚುವ ಸಮೃದ್ಧಿಯ ಕಾಲವೆಂದು ವಿಶೇಷವಾಗಿ ಪ್ರಸ್ತಾಪಿಸಿರುವರು. ಈ ತಿಂಗಳ ಮೂರು ದಶದಿನಗಳ ವಿಶೇಷತೆಯನ್ನು ಆ ಬಳಿಕ ಹೇಳಲಾಗಿದೆ. ಮೊದಲ ಹತ್ತು ದಿನಗಳು ಅನುಗ್ರಹ ಮತ್ತು ಕಾರುಣ್ಯದ ದಿನಗಳಾಗಿವೆ. ಅಲ್ಲಾಹನ ಅನುಗ್ರಹ, ಕರುಣೆ ನಮ್ಮ ಮೇಲೆ ವರ್ಷಿಸಬೇಕು ಹಾಗೂ ಉಪವಾಸ ಮತ್ತಿತರ ಸತ್ಕರ್ಮಗಳನ್ನು ಕಟ್ಟುನಿಟ್ಟಾದ ರೀತಿಯಲ್ಲಿ ನಿರ್ವಹಿಸಲು ನಮಗೆ ಶಕ್ತಿಯನ್ನು ನೀಡಬೇಕೆಂದು ಆ ದಿನಗಳಲ್ಲಿ ವಿಶೇಷವಾಗಿ ಪ್ರಾರ್ಥಿಸಬೇಕಾಗಿದೆ. ಎರಡನೆಯ ದಶದಿನಗಳಲ್ಲಿ ಸಂಭವಿಸಿ ಹೋದ ತಪ್ಪುಗಳಿಗೆ ಪ್ರಾಯಶ್ಚಿತ್ತ ಪಡುವುದರ ಜೊತೆಗೆ ಪ್ರಾರ್ಥನೆ, ಪಶ್ಚಾತ್ತಾಪದ ಜೊತೆಗೆ ಇನ್ನು ಮುಂದೆ ಪುನಃ ಅಂತಹ ತಪ್ಪುಗಳಲ್ಲಿ ಸಿಲುಕಿಕೊಳ್ಳದಿರುವುದಕ್ಕೆ ಹಾಗೂ ಆತ್ಮಶುದ್ಧೀಕರಣದ ದೃಢ ನಿರ್ಧಾರ ತೆಗೆದುಕೊಳ್ಳುವುದಕ್ಕೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಮೂರನೆಯ ದಶದಿನಗಳಲ್ಲಿ ನರಕದ

ಶಿಕ್ಷೆಯಿಂದ ರಕ್ಷಣೆ ಹೊಂದಲು ಬೇಕಾದ ವಿಶೇಷ ಪ್ರಾರ್ಥನೆ ಮತ್ತು ಕರ್ಮಗಳಿಗೆ ಹೆಚ್ಚು ಮಹತ್ವ ನೀಡಲಾಗುತ್ತದೆ. ಈ ಮೂರು ದಶದಿನಗಳನ್ನು ಸತ್ಯವಿಶ್ವಾಸಿ ಈ ಮೇಲೆ ಪ್ರಸ್ತಾಪಿಸಿದ ರೀತಿಯಲ್ಲಿ ಕಳೆದರೆ ಅವರು ಮೊದಲ ಹತ್ತು ದಿನಗಳಲ್ಲಿ ದೇವನ ಅನುಗ್ರಹಕ್ಕೆ ಪಾತ್ರರಾಗುವರು. ಎರಡನೆಯ ಹತ್ತು ದಿನಗಳಲ್ಲಿ ಪಾಪಗಳಿಂದ ಮುಕ್ತರಾಗುವರು. ಮೂರನೆಯ ಹತ್ತು ದಿನಗಳಲ್ಲಿ ನರಕದಿಂದ ಸಂಪೂರ್ಣವಾಗಿ ರಕ್ಷಣೆ ಹೊಂದುವರು.

ಕೊನೆಯದಾಗಿ ರಮಝಾನಿನಲ್ಲಿ ಪಾಪ ವಿಮೋಚನೆಗೆ, ನರಕದಿಂದ ಮುಕ್ತನಾಗಲು ಬೇಕಾದ ಕೆಲವು ಮಾರ್ಗಗಳನ್ನು ಸೂಚಿಸಲಾಗಿದೆ. ಓರ್ವ ಉಪವಾಸಿಗನಿಗೆ ಉಪವಾಸ ಪಾರಣೆ ಮಾಡಿಸುವುದು ಅಥವಾ ಕುಡಿಯಲು ನೀರನ್ನು ಕೊಡುವುದು, ತನ್ನ ಅಧೀನದಲ್ಲಿರುವವರೊಂದಿಗೆ ಸೌಜನ್ಯದಿಂದ ವರ್ತಿಸುವುದು. ಅವರಿಗೆ ವಿರಾಮ ಮತ್ತು ಸೌಲಭ್ಯಗಳನ್ನು ಒದಗಿಸುವುದು, ಇವುಗಳನ್ನೆಲ್ಲ ಉದಾಹರಣೆಯಾಗಿ ನೀಡಲಾಗಿದೆ. ಪಾಪವಿಮೋಚನೆಗೆ, ನರಕದಿಂದ ಮುಕ್ತಿಹೊಂದಲು ಸಂಪತ್ತು ಮತ್ತಿತರ ಸಾಮರ್ಥ್ಯಗಳು ಇರಲೇಬೇಕೆಂದಿಲ್ಲ, ಪ್ರತಿಯೊಬ್ಬರಿಗೂ ಅವರಿರುವ ಸ್ಥಿತಿಯಲ್ಲಿಯೇ ನಿಂತು ಅವುಗಳನ್ನು ಗಳಿಸಲು ಸಾಧ್ಯವಿದೆ. ಕೈಯಲ್ಲಿ ಏನೂ ಇಲ್ಲದ ವ್ಯಕ್ತಿ ಇನ್ನೊಬ್ಬನಿಗೆ ಕುಡಿಯಲು ನೀರನ್ನು ಕೊಡುವುದು, ಓರ್ವ ಲಕ್ಷಾಧೀಶ ಒಂದು ಲಕ್ಷ ರೂಪಾಯಿಯನ್ನು ದಾನ ನೀಡುವುದಕ್ಕೆ ಸಮಾನವಾದ ಪುಣ್ಯಕರ್ಮವಾಗಿದೆ. ಆದರೆ ಲಕ್ಷಾಧೀಶನೂ ಒಂದು ಲೋಟ ನೀರನ್ನು ಕೊಟ್ಟು ಸ್ವರ್ಗಕ್ಕೆ ಹೋಗಬಹುದೆಂದು ಆಶೆ ಪಡುವುದು ಬೇಡ.



# 50. ಸ್ವರ್ಗವನ್ನು ತೆರೆಯುವವರಾರು?

عَنْ أَبِي هُرَيْرَةَ رَضِيَ اللَّهُ عَنْهُ قَالَ قَالَ رَسُولُ اللَّهِ ﷺ إِذَا دَخَلَ رَمَضَانُ فُتِحَتْ أَبْوَابُ الْجَنَّةِ وَغُلِّقَتْ أَبْوَابُ جَهَنَّمَ وَسُلْسِلَتِ الشَّيَاطِينُ. (متفق عليه)

ಅಬೂ ಹುರೈರಾ(ರ) ವರದಿ ಮಾಡುತ್ತಾರೆ: ಪ್ರವಾದಿ(ಸ) ಹೇಳಿರುವರು. ''ರಮಝಾನ್ ತಿಂಗಳು ಆಗತವಾದರೆ ಸ್ವರ್ಗದ ಬಾಗಿಲುಗಳು ತೆರೆಯಲ್ಪಡುವುದು. ನರಕದ ಬಾಗಿಲುಗಳು ಮುಚ್ಚಲ್ಪಡುವುದು ಮತ್ತು ಶೈತಾನರನ್ನು ಬಂಧಿಸಲಾಗುವುದು.'' (ಮುತ್ತಫಕುನ್ ಅಲೈಹಿ)

ಇದು ರಮಝಾನ್ ತಿಂಗಳ ಮಹತ್ವ ಮತ್ತು ಪಾವಿತ್ರ್ಯತೆಯನ್ನು ತಿಳಿಸುವ ಪ್ರವಾದಿ ವಚನವಾಗಿದೆ. ಹನ್ನೆರಡು ತಿಂಗಳುಗಳ ಪೈಕಿ ಅತ್ಯಂತ ಶ್ರೇಷ್ಠವಾದ ತಿಂಗಳು ರಮಝಾನ್ ಆಗಿದೆ. ಅದರಲ್ಲಿ ಬರುವ ಲೈಲತುಲ್ ಕದ್ರ್ ಎಂಬ ಒಂದು ರಾತ್ರಿಯು ಸಾವಿರ ಮಾಸಗಳಿಗಿಂತಲೂ ಶ್ರೇಷ್ಠವಾಗಿದೆ. ಆ ದಿನ ಪರಿಶುದ್ಧವಾದ ದೇವಚರರು ದೇವನ ನಿರ್ದೇಶನಗಳೊಂದಿಗೆ ಭೂಮಿಗೆ ಇಳಿದು ಬರುವರು. ಮನುಷ್ಯರ ಪಾಲಿಗೆ ಇಹಪರ ಸೌಭಾಗ್ಯದ ಅಡಿಗಲ್ಲಾದ ಪವಿತ್ರ ಕುರ್‌ಆನಿನ ಅವತೀರ್ಣವು ಆರಂಭವಾದುದು ರಮಝಾನ್ ತಿಂಗಳಲ್ಲಾಗಿತ್ತು. ಇಸ್ಲಾಮಿನ ಚರಿತ್ರೆಯಲ್ಲಿ ಇಸ್ಲಾಮ್ ಮತ್ತು ಸತ್ಯನಿಷೇಧದ ಮಧ್ಯೆ ಮೊತ್ತ ಮೊದಲು ನಡೆದ ಯುದ್ಧ ಬದ್ರ್ ರಣಾಂಗಣದಲ್ಲಿ ನಡೆದಿತ್ತು. ಸತ್ಯನಿಷೇಧಿಗಳ ದೊಡ್ಡ ಬಲಶಾಲಿ ಸೈನ್ಯದೆದುರು ಇಸ್ಲಾಮಿನ ಸಣ್ಣ ದುರ್ಬಲ ಸೇನೆ ವಿಜಯ ಸಾಧಿಸಿದ್ದು ರಮಝಾನ್ ತಿಂಗಳಲ್ಲಾಗಿತ್ತು.

ರಮಝಾನ್ ತಿಂಗಳು ಆಗತವಾದರೆ ಸ್ವರ್ಗದ ಬಾಗಿಲುಗಳು ತೆರೆಯಲ್ಪಡುವುದು. ಆ ದಿನಗಳಲ್ಲಿ ಅಲ್ಲಾಹನ ನಿಜವಾದ ದಾಸರಿಗೆ ಸ್ವರ್ಗಕ್ಕೆ ಹೋಗಲು ಯಾವುದೇ ಅಡ್ಡಿ ಆತಂಕಗಳಿರುವುದಿಲ್ಲ, ಮಾತ್ರವಲ್ಲ ಸಜ್ಜನರಾದ ದಾಸರನ್ನು ಸ್ವಾಗತಿಸಲು ಸ್ವರ್ಗವು ಅದರ ಬಾಗಿಲುಗಳನ್ನು ತೆರೆದಿಟ್ಟು ಕಾಯುತ್ತಿರುತ್ತದೆ. ಇದೇ ವೇಳೆ ನರಕದ ಬಾಗಿಲುಗಳೆಲ್ಲ ಮುಚ್ಚಲ್ಪಡುವುದು. ಯಾರಿಗೂ ಅದರೊಳಗೆ ಪ್ರವೇಶವಿಲ್ಲ, ಕಾರಣವೇನೆಂದರೆ, ರಮಝಾನ್ ತಿಂಗಳಲ್ಲಿ ಭಯ ಭಕ್ತಿಯೊಂದಿಗೆ ಉಪವಾಸವನ್ನು ಆಚರಿಸುವಾಗ, ನಮಾಝುನ್ನು ನಿರ್ವಹಿಸುವಾಗ ಮತ್ತಿತರ ಪುಣ್ಯ ಕರ್ಮಗಳನ್ನು ಮಾಡುವಾಗ ಈ ಮೊದಲು ಮಾಡಿದ ಪಾಪಗಳೆಲ್ಲವೂ ಕ್ಷಮಿಸಲ್ಪಡುವುದು. ಆದುದರಿಂದ ಅವರು ಆ ದಿನ ಹುಟ್ಟಿದ ಮಗುವಿನಂತೆ ಪರಿಶುದ್ಧರಾಗಿರುವರು.

ಮನೋಹರವಾದ, ಗಹನವಾದ ಅರ್ಥವೈಶಾಲ್ಯವುಳ್ಳ ಈ ಪ್ರವಾದಿ ವಚನವನ್ನು ಕೆಲವರು ಸೀಮಿತವಾಗಿ ಅರ್ಥೈಸಿಕೊಳ್ಳುತ್ತಾರೆ. ಅದೇನೆಂದರೆ, ರಮಝಾನ್ ಆಗತವಾಗುವುದರೊಂದಿಗೆ ಅಲ್ಲಾಹನು ಕೆಲವು ದೇವಚರರನ್ನು ಕರೆದು ಅವರೊಂದಿಗೆ ಹೋಗಿ ಸ್ವರ್ಗದ ಬಾಗಿಲುಗಳನ್ನೆಲ್ಲ ತೆರೆದಿಡಬೇಕೆಂದು ಆದೇಶಿಸುವನು. ಇನ್ನು ಕೆಲವರನ್ನು ಕರೆದು ನರಕದ ಬಾಗಿಲುಗಳನ್ನೆಲ್ಲ ಮುಚ್ಚಿಬಿಡಬೇಕೆಂದು ಆದೇಶಿಸುವನು ಮತ್ತೆ ಕೆಲವು ದೇವಚರರನ್ನು ಕರೆದು ಶೈತಾನರ ಬಳಿಗೆ ಕಳುಹಿಸುವನು. ಅವರು ಭಾರವಾದ ಸಂಕೋಲೆಗಳೊಂದಿಗೆ ಇಳಿದು ಬಂದು ಶೈತಾನರನ್ನೆಲ್ಲ ಹಿಡಿದು ಬಂಧಿಸುವರು.

ಅಂದರೆ ತೆರೆಯುವ, ಮುಚ್ಚುವ, ಬಂಧಿಸುವ ಕೆಲಸಗಳನ್ನೆಲ್ಲ ಮಾಡುವುದು ಯಾರೆಂದು ಸ್ಪಷ್ಟವಿಲ್ಲ. ದೇವಚರರು, ಜಿನ್ನ್‌ಗಳು ಅಥವಾ ಅಲ್ಲಾಹನೇ ಸ್ವತಃ ಮಾಡುವನು ಎಂದೇನೂ ಹದೀಸಿನಲ್ಲಿ ಸ್ಪಷ್ಟವಾಗಿ ಹೇಳಲಾಗಿಲ್ಲ. ತೆರೆಯಲ್ಪಡುವುದು, ಮುಚ್ಚಲ್ಪಡುವುದು ಮುಂತಾದ ಕರ್ಮಣಿ ವಾಕ್ಯಗಳನ್ನು ಪ್ರಯೋಗಿಸಲಾಗಿದೆ. ಸ್ವರ್ಗದ ಬಾಗಿಲುಗಳನ್ನು ತೆರೆಯುವ, ನರಕದ ಬಾಗಿಲುಗಳನ್ನು ಮುಚ್ಚುವ, ಶೈತಾನರನ್ನು ಬಂಧಿಸುವ ಕೆಲಸವನ್ನು ದೇವಚರರೇ ಮಾಡುತ್ತಾರೆ ಎಂದಾದರೆ ಅದು ಬಹಳ ಸುಲಭವಾಗುತ್ತಿತ್ತು. ಬಳಿಕ ರಮಝಾನ್ ತಿಂಗಳು ಬಂದರೆ ಯಾರೂ ಯಾವುದರ ಬಗ್ಗೆಯೂ ಭಯ ಪಡಬೇಕಾಗಿಲ್ಲ. ನರಕಕ್ಕೆ ಹೋಗಲು ಸಿದ್ಧರಾಗಿ ನಿಂತವರಿಗೂ ಅದಕ್ಕೆ ಹೋಗಲು ಸಾಧ್ಯವಾಗುವುದಿಲ್ಲವಲ್ಲವೇ? ಎಲ್ಲರೂ ತೆರೆಯಲ್ಪಟ್ಟಿರುವ ಸ್ವರ್ಗಕ್ಕೇ ಹೋಗುವರು. ಆದುದರಿಂದ ಸ್ವರ್ಗಕ್ಕೆ ಹೋಗಲು ಯಾರೂ ವಿಶೇಷವಾದ ಕರ್ಮವನ್ನು ಮಾಡಬೇಕಾದ ಅಗತ್ಯವಿಲ್ಲ. ಈ ರೀತಿ ಮತ್ತು ಮನುಷ್ಯನ ವಿಶ್ವಾಸ, ಕರ್ಮವನ್ನು ಪರಿಗಣಿಸದೆ ದೇವಚರರು, ಜಿನ್ನ್‌ಗಳು ಸ್ವರ್ಗದ ಬಾಗಿಲುಗಳನ್ನು ತೆರೆಯುವ, ನರಕದ ಬಾಗಿಲನ್ನು ಮುಚ್ಚುವ ಕೆಲಸವನ್ನು ಮಾಡುತ್ತಾರೆ ಎಂಬುದಾಗಿ ಚಿಂತಿಸುವುದು ನ್ಯಾಯ ಸಮ್ಮತವಲ್ಲ. ಕಾರಣವೇನೆಂದರೆ ಪ್ರತಿಫಲವನ್ನು ಬಯಸಿ ಉಪವಾಸವನ್ನು ಆಚರಿಸಬೇಕು. ನಮಾಝ್ ನಿರ್ವಹಿಸಲು, ದಾನ-ಧರ್ಮಗಳನ್ನು ನೀಡಲು ಪ್ರವಾದಿ(ಸ) ಬೇರೆ ಹದೀಸ್‌ಗಳಲ್ಲಿ ಸಹಾಬಿಗಳು ನಿರ್ದೇಶಿಸಿರುವರು. ಪ್ರವಾದಿಗಳು ಹಾಗೂ ಶಿಷ್ಯರು ಈ ರೀತಿಯ ಪುಣ್ಯ ಕರ್ಮಗಳನ್ನು ಅತಿಹೆಚ್ಚಾಗಿ ನಿರ್ವಹಿಸಿದುದೂ ರಮಝಾನ್ ತಿಂಗಳಲ್ಲಾಗಿತ್ತು. ಉಪವಾಸವಿರುವವರು ಅತಿ ಹೆಚ್ಚು ಸಹನೆಯಿಂದ ವರ್ತಿಸಬೇಕೆಂದೂ, ಚಾಡಿ, ಪರದೂಷಣೆ, ಅನಗತ್ಯವಾದ ಮಾತುಕತೆ, ಕರ್ಮಗಳನ್ನು ತೊರೆಯಬೇಕೆಂದೂ, ಪ್ರವಾದಿ(ಸ) ಕಲಿಸಿರುವರು. ರಮಝಾನ್ ತಿಂಗಳಲ್ಲಿ ಅಲ್ಲಾಹನು ಅವನ ದಾಸರೊಂದಿಗೆ ಅತ್ಯಂತ ಹೆಚ್ಚು ಕರುಣೆಯನ್ನು ತೋರಿಸುತ್ತಾನೆಂದೂ ಅವರ ಪ್ರತಿಯೊಂದು ಕರ್ಮಗಳಿಗೆ ಎಷ್ಟೋ ಪಟ್ಟು ಅಧಿಕ ಪ್ರತಿಫಲವನ್ನು ನೀಡುತ್ತಾನೆಂದೂ ಪ್ರವಾದಿ ವಚನಗಳಲ್ಲಿ ಬಂದಿರುತ್ತದೆ.

ಪ್ರವಾದಿಚರ್ಯೆ, ಪವಿತ್ರ ಕುರ್‌ಆನ್ ಮತ್ತಿತರ ಗ್ರಂಥಗಳ ಅಧ್ಯಯನವನ್ನು ಮುಂದಿಟ್ಟುಕೊಂಡು ಈ ಮೇಲಿನ ಹದೀಸ್ ವಚನದ ಆಶಯವನ್ನು ಗ್ರಹಿಸಬೇಕಾಗಿದೆ.

ರಮಝಾನ್ ಆಗತವಾಗುವುದರೊಂದಿಗೆ ಸತ್ಯವಿಶ್ವಾಸಿ ಅದರ ಶ್ರೇಷ್ಠತೆ ಮತ್ತು ಮಹತ್ವದ ಬಗ್ಗೆ ಜಾಗೃತನಾಗುತ್ತಾನೆ. ತನಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಮತ್ತು ಹೆಚ್ಚು ಪರಿಶುದ್ಧನಾಗಲು, ಸತ್ಕರ್ಮಗಳ ಮೂಲಕ ಪುಣ್ಯವನ್ನು ಸಂಪಾದಿಸಲು ಇರುವ ತಿಂಗಳೆಂದು ಅವನು ಅದನ್ನು ಸ್ವಾಗತಿಸುತ್ತಾನೆ. ಅವನು ಪಾಪಗಳಿಗೆ ಪಶ್ಚಾತ್ತಾಪ ಪಡುತ್ತಾನೆ. ಕೆಟ್ಟ ಮಾತು ಮತ್ತು ಅಂತಹ ಕೆಲಸಗಳಿಂದ ದೂರ ಉಳಿಯುತ್ತಾನೆ. ನಿರಂತರ ಸತ್ಕರ್ಮಗಳನ್ನು ಮಾಡುತ್ತಿರುತ್ತಾನೆ. ಸತ್ಯವಿಶ್ವಾಸದೊಂದಿಗೆ ಸತ್ಕರ್ಮಗಳನ್ನು ಮಾಡುತ್ತಿರುವ ವ್ಯಕ್ತಿಯ ಮುಂದೆ ಸ್ವರ್ಗದ ಬಾಗಿಲುಗಳು ತೆರೆಯಲ್ಪಡುವುದು. ಸಂಭವಿಸಿ ಹೋದ ತಪ್ಪುಗಳಿಗೆ ಪಶ್ಚಾತ್ತಾಪ ಪಡುತ್ತಾ ಪ್ರಾಯಶ್ಚಿತ್ತ ಕೇಳುವವರಿಗೆ ಮತ್ತು ಮುಂದುವರಿದು ಕೆಟ್ಟ ಮಾತುಕತೆಗಳಿಂದ, ಕರ್ಮಗಳಿಂದ ದೂರ ಉಳಿಯುವವರ ಮುಂದೆ ನರಕದ ಬಾಗಿಲುಗಳು ಮುಚ್ಚಲ್ಪಡುವುದು. ಮನುಷ್ಯನ ಹೃದಯವು, ದೇವಭಯದಿಂದ ಬೆಳಗುವಾಗ, ಸಂಭವಿಸಿ ಹೋದ ತಪ್ಪುಗಳಿಗೆ ಪಶ್ಚಾತ್ತಾಪ ಪಟ್ಟು ಮರಳುವಾಗ, ಅಂತಹ ವ್ಯಕ್ತಿಯ ಮುಂದೆ ಶೈತಾನನ ಕುತಂತ್ರಗಳೊಂದೂ ಫಲಕಾರಿಯಾಗಲಾರದು. ಈ ರೀತಿ ಮನುಷ್ಯನನ್ನು ದಾರಿಗೆಡಿಸಲು ಸಿಕ್ಕಿರುವ ಸ್ವಾತಂತ್ರ್ಯವನ್ನು ಉಪಯೋಗಿಸಲು ಸಾಧ್ಯವಾಗದೆ ಅವನು ಸಂಕೋಲೆಗಳಲ್ಲಿ ಬಂಧಿತನಾದ ಅವಸ್ಥೆಯಲ್ಲಿರುವನು.

ಸಂಕ್ಷಿಪ್ತವಾಗಿ ರಮಝಾನ್ ತಿಂಗಳಲ್ಲಿ ಸ್ವರ್ಗದ ಬಾಗಿಲುಗಳನ್ನು ತೆರೆಯುವುದು, ನರಕದ ಬಾಗಿಲುಗಳನ್ನು ಮುಚ್ಚುವುದು, ಶೈತಾನರನ್ನು ಸಂಕೋಲೆಗಳಿಂದ ಬಂಧಿಸುವುದು ಮುಂತಾದವುಗಳನ್ನು ಮಾಡುವವರು ಮನುಷ್ಯರೇ ಆಗಿದ್ದಾರೆ. ಅವರ ಕರ್ಮಗಳ ಮೂಲಕ, ವಿಶ್ವಾಸದ ಮೂಲಕ, ರಮಝಾನ್ ತಿಂಗಳ ಶ್ರೇಷ್ಠತೆಯ ಮಹತ್ವವನ್ನು, ಅದೊಳಗೊಂಡಿರುವ ಮಹತ್ವವನ್ನು ಅರಿತು ಅದನ್ನು ಅನುಸರಿಸಿ ಬದಲಾಗದ ವ್ಯಕ್ತಿಗಳ ಮುಂದೆ ಸ್ವರ್ಗದ ಬಾಗಿಲುಗಳು ತೆರೆಯಲ್ಪಡುವುದಿಲ್ಲ, ನರಕದ ಬಾಗಿಲುಗಳು ಮುಚ್ಚಲ್ಪಡುವುದಿಲ್ಲ, ಶೈತಾನರು ಬಂಧಿತರಾಗುವುದಿಲ್ಲ, ಅವರ ಪಾಲಿಗೆ ಎಲ್ಲವೂ ಎಂದಿನಂತೆ ಅಥವಾ ಅದಕ್ಕಿಂತಲೂ ನಿಕೃಷ್ಟವಾಗಿ ಬಿಡುವುದು. ಆದುದರಿಂದಲೇ ಪ್ರತಿ ಬಾರಿಯ ರಮಝಾನ್ ತಿಂಗಳಲ್ಲಿಯೂ ಸತ್ಯವಿಶ್ವಾಸಿಗಳು ತಮ್ಮ ಆತ್ಮ ಸಾಕ್ಷಿಯೊಂದಿಗೆ ಈ ರೀತಿ ಪ್ರಶ್ನಿಸಿ ಕೊಳ್ಳಬೇಕು. ಈ ರಮಝಾನಿನಲ್ಲಿ ನಾನು ನನ್ನ ಕರ್ಮಗಳ ಮೂಲಕ ಸ್ವರ್ಗದ ಬಾಗಿಲನ್ನು ತೆರೆದೆನೇ? ನರಕದ ಬಾಗಿಲುಗಳನ್ನು ಮುಚ್ಚಿದೆನೇ? ಶೈತಾನರನ್ನು ಬಂಧಿಸಿದೆನೇ? 'ಇಲ್ಲ' ಎಂಬುದು ಉತ್ತರವಾಗಿದ್ದರೆ ಸಮಯವನ್ನು ವ್ಯರ್ಥ ಮಾಡದೆ ಅದಕ್ಕಾಗಿ ಪರಿಶ್ರಮ ಪಡಬೇಕು. ನಮ್ಮನ್ನು ಸೃಷ್ಟಿಸಿದ ಕರುಣಾಳುವಾದ ಅಲ್ಲಾಹನು ನಮಗಾಗಿಯೇ ಸ್ವರ್ಗವನ್ನು ಸೃಷ್ಟಿಸಿರುವನು. ನರಕವನ್ನು ಉಂಟು ಮಾಡಿದನು. ಎರಡಕ್ಕೂ ಇರುವ ದಾರಿಯನ್ನು ಸ್ಪಷ್ಟ ಪಡಿಸಿರುವನು. ಎರಡನ್ನೂ ತೆರೆಯುವ ಕೀಲಿ ಕೈಯನ್ನೂ ನಮ್ಮ ಕೈಗಳಲ್ಲೇ ನೀಡಿದನು. ಸ್ವರ್ಗದ ಬಾಗಿಲು ತೆರೆಯಲು ಬಹಳ ಸುಲಭವಾಗಿರುವ ಒಂದು ಸಮಯವನ್ನೂ ರಿಯಾಯಿತಿ ಇರುವ ಸಂದರ್ಭವನ್ನೂ ಅವನು ನಮಗಾಗಿ ಅನುಗ್ರಹಿಸಿರುವನು. ಅದುವೇ ರಮಝಾನ್ ಆಗಿದೆ. ಇನ್ನು ಯಾವುದನ್ನು ತೆರೆಯಬೇಕು

ಮತ್ತು ಹೇಗೆ ತೆರೆಯಬೇಕು ಎಂಬುದನ್ನು ತೀರ್ಮಾನಿಸಬೇಕಾದವನು ಮನುಷ್ಯನಾಗಿದ್ದಾನೆ. ಅವನಲ್ಲದೆ ಇನ್ನಾರೋ ಅವನಿಗಾಗಿ ಸ್ವರ್ಗವನ್ನು ತೆರೆಯುವ ಮತ್ತು ನರಕವನ್ನು ಮುಚ್ಚುವ ಕೆಲಸವನ್ನು ಮಾಡುವುದಿಲ್ಲ.



# 51. ನಾನು ಉಪವಾಸದಿಂದಿದ್ದೇನೆ, ನಾನು ಉಪವಾಸದಿಂದಿದ್ದೇನೆ

عَنْ أَبِي هُرَيْرَةَ رَضِيَ اللّٰهُ عَنْهُ قَالَ قَالَ رَسُولُ اللّٰهِ ﷺ إِذَا أَصْبَحَ أَحَدُكُمْ يَوْمًا صَائِمًا فَلَا يَرْفُثْ وَلَا يَجْهَلْ فَإِنِ امْرُءٌ شَاتَمَهُ أَوْ قَاتَلَهُ فَلْيَقُلْ إِنِّي صَائِمٌ إِنِّي صَائِمٌ (مسلم)

ಪ್ರವಾದಿ(ಸ) ಹೇಳಿರುವುದಾಗಿ ಹ. ಅಬೂ ಹುರೈರ(ರ) ವರದಿ ಮಾಡುತ್ತಾರೆ. ''ನಿಮ್ಮಲ್ಲಿ ಯಾರಾದರೂ ಒಂದು ದಿನ ಉಪವಾಸದಿಂದಿದ್ದರೆ ಅವನು ಅಶ್ಲೀಲತೆಯಲ್ಲಿ ತೊಡಗಬಾರದು. ಅವಿವೇಕತನ ತೋರಿಸಬಾರದು. ಯಾರಾದರೂ ಅವನನ್ನು ಬೈದರೆ ಅಥವಾ ಅವನೊಂದಿಗೆ ಜಗಳಾಡಿದರೆ ಉಪವಾಸಿಗನು ಈ ರೀತಿ ಹೇಳಲಿ. ನಾನು ಉಪವಾಸದಿಂದಿದ್ದೇನೆ. ನಾನು ಉಪವಾಸದಿಂದಿದ್ದೇನೆ. (ಮುಸ್ಲಿಮ್)

إِذَا كَانَ يَوْمَ صَوْمِ أَحَدِكُمْ فَلَا يَرْفُثْ وَلَا يَصْخَبْ فَإِنْ سَابَّهُ أَحَدٌ أَوْ قَاتَلَهُ فَلْيَقُلْ إِنِّي إِمْرُءٌ صَائِمٌ. (بخارى)

'ನಿಮ್ಮಲ್ಲಿ ಯಾರಾದರೂ ಉಪವಾಸದಿಂದಿದ್ದರೆ ಬಾಯಿಯಿಂದ ಅಶ್ಲೀಲ ಮಾತು ಹೊರಡಿಸದಿರಲಿ. ಸದ್ದುಗದ್ದಲ ಮಾಡದಿರಲಿ. ಯಾರಾದರೂ ಅವನನ್ನು ಬೈದರೆ ಅಥವಾ ಅವನೊಂದಿಗೆ ಜಗಳಾಡಿದರೆ ಉಪವಾಸಿಗನು ತಾನು ಉಪವಾಸದಿಂದಿದ್ದೇನೆ (ಆದ್ದರಿಂದ ಬೈಗುಳ ಅಥವಾ ಜಗಳ ತನಗೆ ಸೂಕ್ತವಲ್ಲ) ಎಂದು ಹೇಳಲಿ. (ಬುಖಾರಿ)

ಉಪವಾಸದ ಉದ್ದೇಶವನ್ನು ಸ್ಪಷ್ಟವಾಗಿ ತಿಳಿಸುವ ಪ್ರವಾದಿ ವಚನಗಳಿವು. ಉಪವಾಸಿಗನ ಸ್ವಭಾವವು ಹೇಗಿರಬೇಕು ಎಂಬುದನ್ನು ಈ ವಚನವು ಸ್ಪಷ್ಟಪಡಿಸುತ್ತದೆ.

ಉಪವಾಸ ಅಥವಾ ಹಗಲಿಡೀ ಹಸಿವು ದಾಹಗಳನ್ನು ಸಹಿಸಿ ಮನುಷ್ಯನು ಅನ್ನ ಪಾನೀಯಗಳನ್ನು ತೊರೆಯಬೇಕು ಎಂಬುದು ಒಂದು ಗುರಿಯಲ್ಲ. ಅದು ಮಹಾ ಗುರಿಯೆಡೆಗಿರುವ ಒಂದು ಮಾರ್ಗವಾಗಿದೆ. ಮನುಷ್ಯನನ್ನು ಅವನಿಗೆ ಅಗತ್ಯವಿಲ್ಲದ ಅನಗತ್ಯವಾದ ಕೆಲಸಗಳಿಂದ ದೂರವಿರಿಸಿ ಅಗತ್ಯವಾದ, ಪ್ರೋತ್ಸಾಹನೀಯವಾದ ವಿಚಾರಗಳಲ್ಲಿಯೂ ಮಾತುಗಳಲ್ಲಿಯೂ ಕರ್ಮಗಳಲ್ಲಿಯೂ ವ್ಯಸ್ತಗೊಳಿಸುವುದು ಎಂಬುದು ಇದರ ಮಹಾನ್ ಉದ್ದೇಶವಾಗಿದೆ.

ಮನುಷ್ಯನು ಬಹಳ ಸಮಯ ಅನ್ನಾಹಾರವನ್ನು ತ್ಯಜಿಸಿ ಇರುವುದರಿಂದ ಸರ್ವ ಶಕ್ತನಾದ ಅಲ್ಲಾಹನಿಗೆ ವಿಶೇಷವಾಗಿ ಏನೂ ಉಪಕಾರವಾಗುವುದಿಲ್ಲ. ಇದರಿಂದಾಗಿ ಆಧ್ಯಾತ್ಮದ ಪ್ರಜ್ಞೆ ಸಜೀವವಾಗುತ್ತದೆ. ಆತ್ಮ ನಿಯಂತ್ರಣವು ಸಾಧ್ಯವಾಗುತ್ತದೆ. ಸಹನೆ ಮತ್ತು ಕ್ಷಮಾಗುಣವು ಹೆಚ್ಚುತ್ತದೆ. ಈ ಗುಣಗಳ ಕಾರಣದಿಂದಾಗಿ ಅವನ ವಿಚಾರ, ಮಾತು, ಕರ್ಮಗಳೆಲ್ಲವೂ ಸಂಸ್ಕರಿಸಲ್ಪಡುವುದು. ಅದಕ್ಕಾಗಿಯೇ ಉಪವಾಸವ್ರತವನ್ನು ಕಡ್ಡಾಯಗೊಳಿಸಲಾಗಿದೆ. ಮನುಷ್ಯನನ್ನು ಈ ಉದ್ದೇಶದೆಡೆಗೆ ತಲುಪಿಸದ ಉಪವಾಸವು ವೃಥಾ ಕಾಲಹರಣವಾಗಿದೆ.

ಆಹಾರ ಮತ್ತು ನೀರು ನಿಷಿದ್ಧ ವಸ್ತುಗಳಲ್ಲ, ಮನುಷ್ಯನಿಗಾಗಿ ಸೃಷ್ಟಿಸಲ್ಪಟ್ಟವುಗಳೂ ಅವನ ಇಹಲೋಕ ಜೀವನಕ್ಕೆ ಆಧಾರವೂ ಆಗಿದೆ. ಉಪವಾಸವಿಲ್ಲದ ವೇಳೆಗಳಲ್ಲಿ ಅವುಗಳನ್ನು ಅಗತ್ಯಕ್ಕೆ ಅನುಸಾರವಾಗಿ ಉಪಯೋಗಿಸಬೇಕೆಂದು ಅಲ್ಲಾಹನು ನಿರ್ದೇಶಿಸಿರುವನು.

ಉಪವಾಸದ ದಿನಗಳಲ್ಲೂ, ಇನ್ನಿತರ ದಿನಗಳಲ್ಲೂ ನಿಷೇಧಿಸಲಾಗಿರುವ ಅನೇಕ ವಿಷಯಗಳಿವೆ. ಅಸೂಯೆ, ಪರದೂಷಣೆ, ಕಳ್ಳತನ, ಕಾಪಟ್ಯ, ವ್ಯಭಿಚಾರ, ವಂಚನೆ ಮುಂತಾದ ಕೆಡುಕುಗಳು. ಇವುಗಳೆಲ್ಲ ಸತ್ಯವಿಶ್ವಾಸಿ ಸದಾ ದೂರ ಉಳಿಯಬೇಕಾದ ಸಂಗತಿಗಳಾಗಿವೆ. ಇವುಗಳ ವಿಷಯದಲ್ಲಿ ಸತ್ಯವಿಶ್ವಾಸಿಗೆ ಸದಾ ಪವಾಸ ವ್ರತ. ಇದರ ಆಂತರ್ಯವನ್ನು ಸಶಕ್ತ ಗೊಳಿಸಲಿಕ್ಕಾಗಿ ಅನ್ನ ಪಾನೀಯಗಳ ವಿಷಯದಲ್ಲಿ ತಾತ್ಕಾಲಿಕ ಸಮಯಕ್ಕೆ ಉಪವಾಸ ವ್ರತವನ್ನು ಕಡ್ಡಾಯಗೊಳಿಸಲಾಗಿದೆ.

ಅನ್ನಪಾನೀಯಗಳನ್ನು ತೊರೆದು ಉಪವಾಸವನ್ನು ಆಚರಿಸುವಾಗ ಪರದೂಷಣೆ, ನಿರ್ದಯತೆ ಮುಂತಾದ ಕೆಡುಕುಗಳ ಬಗ್ಗೆ ಎಲ್ಲ ರೀತಿಯ ನಿಯಂತ್ರಣಗಳನ್ನು ಉಲ್ಲಂಘಿಸಿ ಬಿಡುವುದು ಕೆಲವು ವ್ಯಕ್ತಿಗಳ ದೌರ್ಬಲ್ಯವಾಗಿದೆ. ತಾತ್ಕಾಲಿಕವಾದ ನಿಷೇಧಗಳನ್ನು ಪಾಲಿಸಿ ಕೊಂಡು ಶಾಶ್ವತವಾದ ನಿಷೇಧಗಳನ್ನು ಉಲ್ಲಂಘಿಸಲಾಗುತ್ತದೆ. ಇದು ರೋಗವನ್ನು ಶಮನ ಗೊಳಿಸಲಿಕ್ಕಿರುವ ಔಷಧವನ್ನು ರೋಗವನ್ನು ಉಲ್ಬಣಗೊಳಿಸುವ ವಿಷವಾಗಿ ಬದಲಾಯಿಸಿದಂತಾಗುತ್ತದೆ.

ಉಪವಾಸಿಗನು ಕೋಪೋದ್ರಿಕ್ತನಾಗುವಂತಹ ಪರಿಸ್ಥಿತಿ ಉಂಟಾದರೂ ಕೋಪಿಸಿ ಕೊಳ್ಳಬಾರದು. ಅನ್ಯಾಯ ಮಾಡಬಾರದು, ಪರಿಸ್ಥಿತಿಯನ್ನು ಸಹನೆಯೊಂದಿಗೆ, ಸಮಚಿತ್ತ ದೊಂದಿಗೆ ಎದುರಿಸಲು ಅವನಿಗೆ ಸಾಧ್ಯವಾಗಬೇಕು. ಅದನ್ನು ಅಭ್ಯಾಸ ಮಾಡಿಕೊಳ್ಳಬೇಕು. ಕೋಪೋದ್ರಿಕ್ತನಾದರೆ ತಾನು ಉಪವಾಸಿಗನಿದ್ದೇನೆ ಎಂದು ಸ್ವಂತದೊಂದಿಗೂ ಸಂಬಂಧ ಪಟ್ಟವರನ್ನೂ ನೆನಪಿಸಿ ಅಸಹಿಷ್ಣುತೆ, ಅಸಹನೆ ಮುಂತಾದ ಪ್ರತಿಕ್ರಿಯೆಯಿಂದ ದೂರ ಉಳಿಯ ಬೇಕು. ಅದನ್ನೇ ಪ್ರವಾದಿ(ಸ) ಹೇಳಿರುವರು. 'ನಿಮ್ಮನ್ನು ಯಾರಾದರೂ ಬೈದರೆ ಅಥವಾ ನಿಮ್ಮೊಂದಿಗೆ ಜಗಳಾಡಿದರೆ ನೀವು, ನಾನು ಉಪವಾಸದಿಂದ್ದೇನೆ, ನಾನು ಉಪವಾಸದಿಂದ್ದೇನೆ ಹೇಳಿರಿ ಬಿಡಿರಿ.'



# 52. ಜೀವನ ಒಂದು ಪ್ರಯಾಣ

عَنِ ابْنِ عُمَرَ رَضِيَ اللّٰهُ عَنْهُ قَالَ أَخَذَ رَسُولُ اللّٰهِ ﷺ بِمَنْكِبِي فَقَالَ كُنْ فِي الدُّنْيَا كَأَنَّكَ غَرِيبٌ أَوْ عَابِرُ سَبِيلٍ. (بخارى)

ಹ. ಇಬ್ನ್ ಉಮರ್(ರ) ವರದಿ ಮಾಡುತ್ತಾರೆ: ಪ್ರವಾದಿ(ಸ) ನನ್ನ ಹೆಗಲ ಮೇಲೆ ಕೈ ಇರಿಸಿ ಈ ರೀತಿ ಉಪದೇಶಿಸಿದರು. ''ನೀನು ಇಹಲೋಕದಲ್ಲಿ ಓರ್ವ ವಿದೇಶಿಯಂತೆ ಅಥವಾ ಓರ್ವ ಪ್ರಯಾಣಿಕನಂತೆ ಬದುಕಬೇಕು.'' (ಬುಖಾರಿ)

ಲೌಕಿಕ ಜೀವನದ ವಾಸ್ತವಿಕತೆ ಮತ್ತು ಅದರ ಅವಸ್ಥೆಯನ್ನು ಬಹಳ ಸ್ಪಷ್ಟವಾಗಿ ಚಿತ್ರೀಕರಿಸುತ್ತಾ ಆ ವಾಸ್ತವಿಕತೆಯನ್ನು ಒಳಗೊಂಡು ಜೀವಿಸಲು ಈ ಸಣ್ಣ ವಚನದ ಮೂಲಕ ಪ್ರವಾದಿ(ಸ) ನಮಗೆ ಕಲಿಸಿದ್ದಾರೆ. ಈ ಉಪದೇಶವನ್ನು ನನ್ನ ಹೆಗಲನ್ನು ಹಿಡಿದು ಪ್ರವಾದಿ(ಸ) ನೀಡಿದರು ಎಂಬುದನ್ನು ವರದಿಗಾರರಾದ ಹ. ಇಬ್ನ್ ಉಮರ್(ರ) ವಿಶೇಷವಾಗಿ ಪ್ರಸ್ತಾಪಿಸಿದ್ದಾರೆ. ಈ ಉಪದೇಶವು ಬಹಳ ಮಹತ್ವವುಳ್ಳದ್ದು, ಅದೇ ರೀತಿ ಬಹಳ ಪ್ರಾಮುಖ್ಯತೆಯನ್ನು ನೀಡಬೇಕಾಗಿದೆ ಎಂಬುದನ್ನು ಇದು ಸೂಚಿಸುತ್ತದೆ.

ಮನುಷ್ಯನ ನಿಜವಾದ ಶಾಶ್ವತವಾದ ವಾಸಸ್ಥಾನವು ಪರಲೋಕವಾಗಿದೆ. ಪರಲೋಕ ಜೀವನಕ್ಕೆ ಆಗತ್ಯವಾದ ವಸ್ತುಗಳನ್ನು ಸಂಗ್ರಹಿಸಲಿಕ್ಕಾಗಿ ಅವನು ಇಹಲೋಕಕ್ಕೆ ಬಂದಿರುತ್ತಾನೆ. ಪ್ರತಿಯೊಬ್ಬರಿಗೂ ಒಂದು ನಿರ್ದಿಷ್ಟ ಸಮಯದ ವರೆಗೆ ಕೆಲಸ ಮಾಡಲು ಮತ್ತು ಪರಲೋಕಕ್ಕೆ ಅಗತ್ಯವಾದ ವಸ್ತುಗಳನ್ನು ಸಂಗ್ರಹಿಸಲು ಅವಕಾಶವನ್ನು ನೀಡಲಾಗಿದೆ. ಅವನ ವೀಸಾದ ಅವಧಿಯು ಮುಗಿದ ಕೂಡಲೇ ಮರಳಿ ಹೋಗಲೇಬೇಕು. ಅವಿತುಕೊಳ್ಳಲು ಅಥವಾ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇಹಲೋಕ ಮತ್ತು ಪರಲೋಕ ಜೀವನವನ್ನು ಜೊತೆಯಾಗಿ ಪರಿಗಣಿಸಿದರೆ ಇಹಲೋಕ ಜೀವನವು ಸಂಪೂರ್ಣ ಪ್ರಯಾಣವಾಗಿದೆ. ಓರ್ವ ಪ್ರಯಾಣಿಕ ವಿದೇಶವನ್ನು ಸ್ವದೇಶವೆಂದು ಭ್ರಮಿಸಿ ಅಲ್ಲಿಯ ಸುಖ ಸೌಕರ್ಯಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು, ಲಭಿಸಿದುದನ್ನೆಲ್ಲ ಅಲ್ಲಿಯೇ ಖರ್ಚು ಮಾಡುತ್ತಾ ಇದ್ದರೆ ಅವನ ಅವಸ್ಥೆ ಏನಾಗಿರಬಹುದು? ಸಮಯ ಮುಗಿದು ಸ್ವದೇಶಕ್ಕೆ ಮರಳುವಾಗ ವಾಹನಕ್ಕೆ [illegible]ಬೇಕಾದ

ಟಿಕೇಟಿನ ಹಣವೂ ಇಲ್ಲದ ಪರಿಸ್ಥಿತಿ ಉಂಟಾಗಬಹುದು. ಈ ರೀತಿಯಾಗಿ ಬಿಟ್ಟರೆ ಬಲ ಪ್ರಯೋಗದಿಂದ ಅಲ್ಲಿಂದ ಹೊರಕಟ್ಟಲಾಗುವುದು. ಊರಿಗೆ ಮರಳಿದರೂ ಅವನನ್ನು ಸ್ವಾಗತಿಸಲು ಗೌರವಿಸಲು ಯಾರೂ ಇರಲಾರರು. ನಿಂದನೀಯವಾದ, ಶೋಚನೀಯವಾದ ಜೀವನವನ್ನು ಊರಿನಲ್ಲಿ ಆ ವ್ಯಕ್ತಿ ಕಳೆಯಬೇಕಾಗಿ ಬರುವುದು. ಇಹಲೋಕ ಜೀವನವನ್ನೇ ಸಂಪೂರ್ಣ ಜೀವನ ಎಂದು ಭ್ರಮಿಸಿ ಕೊಂಡಿರುವವರಿಗೂ ಇದೇ ರೀತಿಯ ಪರಿಣಾಮವು ಕಾದಿರುವುದು.

ಇಹಲೋಕ ಜೀವನವು ಒಂದು ಪ್ರಯಾಣವಾಗಿದೆ ಅಥವಾ ಪ್ರಯಾಣದ ಮಧ್ಯೆ ಸಿಗುವ ತಂಗುದಾಣದಲ್ಲಿ ವಿಶ್ರಾಂತಿ ಪಡೆಯುವುದಕ್ಕೆ ಸಮಾನವಾಗಿದೆ. ಅಲ್ಪದಿನಗಳಿಗೆ ಅಗತ್ಯವಿರುವ ವಸ್ತುಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಬೇಕು. ಪರಲೋಕ ಜೀವನಕ್ಕೆ ಅಗತ್ಯವಾದ ಸಾಮಗ್ರಿಗಳನ್ನು ಸಂಗ್ರಹಿಸಿಡುವುದೇ ಈ ಪ್ರವಾಸಿ ಜೀವನದ ಉದ್ದೇಶವಾಗಿದೆ. ಆದುದರಿಂದ ಮನುಷ್ಯ ಅವನ ಬುದ್ಧಿಶಕ್ತಿಯನ್ನು ಶ್ರಮವನ್ನು ಅತಿಹೆಚ್ಚಾಗಿ ಪರಲೋಕ ಜೀವನಕ್ಕೆ ಅಗತ್ಯವಾದ ಸಂಪತ್ತನ್ನು ಸಂಗ್ರಹಿಸಲಿಕ್ಕಾಗಿ ವಿನಿಯೋಗಿಸಬೇಕಾಗಿದೆ. ಪ್ರಯಾಣಿಕರು, ತಂಗುದಾಣದಲ್ಲಿ ನಿಲ್ಲುವವರು ಸದಾ ಪ್ರಯಾಣಕ್ಕೆ ಸಿದ್ಧರಾಗಿರಬೇಕು. ಆ ಊರಿನ ಜನರು ಬಯಸಿದರೆ ಯಾವ ನಿಮಿಷದಲ್ಲಾದರೂ ಅವರು ಆ ಊರನ್ನು ತೊರೆಯಬೇಕಾಗಿ ಬರಬಹುದು. ಸಿಕ್ಕಿದ ಸಂದರ್ಭದಲ್ಲಿ ಮೊತ್ತ ಮೊದಲಾಗಿ ಅವನು ಪ್ರಯಾಣದ ಉದ್ದೇಶವನ್ನು ಪೂರ್ಣಗೊಳಿಸಲು ತ್ವರೆ ಮಾಡಬೇಕು. ಇಲ್ಲದೆ ಹೋದರೆ ಏನನ್ನೂ ಮಾಡದೆ ಬರಿಗೈಯಲ್ಲಿ ಅಥವಾ ಸಾಲದ ಹೊರೆಯೊಂದಿಗೆ ಹಿಂತಿರುಗಿ ಹೋಗಬೇಕಾಗಿ ಬರಬಹುದು. ಇಹಲೋಕ ಜೀವನದ ಬೆಡಗಿನಲ್ಲಿ ಮುಳುಗಿ ಪರಲೋಕ ಜೀವನಕ್ಕೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಲು ಮರೆತು ಬಿಡುವರು ಅಥವಾ ನಾಡಿದ್ದು ಮಾಡುವ, ನಾಳೆ ಮಾಡುವ ಎಂದು ಕರ್ತವ್ಯಗಳನ್ನು ಮುಂದಕ್ಕೆ ಹಾಕುವವರ ಅವಸ್ಥೆಯು ಇದುವೇ ಆಗಿರುವುದು. ಈ ಪ್ರವಾದಿ ವಚನವನ್ನು ವ್ಯಾಖ್ಯಾನಿಸುತ್ತಾ ಇಬ್ನು ಉಮರ್(ರ) ಹೇಳುತ್ತಾರೆ. 'ಸಾಯಂಕಾಲವಾದರೆ ಪ್ರಭಾತವನ್ನು ನಿರೀಕ್ಷಿಸಬೇಡಿರಿ. ಬೆಳಗಾದರೆ ಸಾಯಂಕಾಲವನ್ನು ನಿರೀಕ್ಷಿಸಬೇಡಿರಿ. ಆರೋಗ್ಯವಂತರಾಗಿರುವಾಗ ರೋಗಿಯಾಗಿರುವಾಗ ಯಾದರೆ ಬೇಕಾದವುಗಳನ್ನು ಸಂಗ್ರಹಿಸಿಟ್ಟು ಕೊಳ್ಳಿರಿ.' ಸತ್ಯವಿಶ್ವಾಸಿ ತನ್ನ ಕರ್ತವ್ಯವನ್ನು ಎಂದೂ ಮುಂದೂಡಬಾರದು'' ಎಂಬುದಾಗಿ ಇಬ್ನು ಉಮರ್(ರ) ಉಪದೇಶಿಸಿರುವರು. ಸಾಯಂಕಾಲ ವಾಗುವಾಗ ಆ ಹೊತ್ತಿಗೆ ಮಾಡಿ ಮುಗಿಸಬೇಕಾದ ಕೆಲಸಗಳನ್ನೆಲ್ಲಾ ಮಾಡಿ ಮುಗಿಸಬೇಕು. ಇಂದಿನದ್ದನ್ನು ನಾಳೆ ಮಾಡುವ ಎಂದು ನಿರೀಕ್ಷಿಸಬಾರದು. ನಾಳೆ ಜೀವಂತವಿರುವಿರಿ ಎಂಬುದಕ್ಕೆ ಏನು ಖಾತರಿ? ಅಥವಾ ಮರಣ ಹೊಂದಿದರೆ ನಿಮ್ಮ ಒಂದು ಕರ್ತವ್ಯವು ಬಾಕಿಯುಳಿದು ಬಿಡುವುದಕ್ಕೆ ಅವಕಾಶವಾಗುತ್ತದೆ. ಆರೋಗ್ಯವಿರುವಾಗ ಸಂಪಾದಿಸಿಟ್ಟರೆ ಮಾತ್ರ ಅನಾರೋಗ್ಯ ವೇಳೆಯಲ್ಲಿ ಉಪಯೋಗಿಸಲು ಸಾಧ್ಯ. ಅದೇ ರೀತಿ ಜೀವನದಲ್ಲಿ ಸಂಗ್ರಹಿಸಿಟ್ಟರೆ ಮಾತ್ರ ಮರಣಾನಂತರ ಉಪಕಾರಕ್ಕೆ ಒದಗಿ ಬರುವುದು.

ಓರ್ವ ದಾರ್ಶನಿಕ ಹೇಳುತ್ತಾರೆ. ''ಇಹಲೋಕ ಜೀವನದಲ್ಲಿ ಓರ್ವ ವ್ಯಕ್ತಿಯು ಈ ದಿನದ ಕೊನೆಯನ್ನು ಕಾಣಲು ನಾನಿರಲಾರೆ ಎಂದು ಭಾವಿಸಿ ಕೆಲಸ ಮಾಡಿದ ದಿನವು ಆ ಸತ್ಯವಿಶ್ವಾಸಿಯ ಪಾಲಿಗೆ ಬಹಳ ಫಲಪ್ರದ ದಿನವಾಗಿರುವುದು.'' ಅಬೂಬಕರ್ ಮುಝ್ನಿ ಎಂಬ ಮಹಾನುಭಾವರು ಈ ರೀತಿ ಹೇಳಿರುವರು. ''ನಿಮ್ಮ ನಮಾಝ್ ಪ್ರಯೋಜನಕಾರಿಯಾಗಬೇಕಾದರೆ, ''ಇನ್ನು ಬೇರೆ ನಮಾಝ್ ನಿರ್ವಹಿಸಲು ನನಗೆ ಅವಕಾಶ ಸಿಗಲಾರದು'' ಎಂದು ಭಾವಿಸಿ ನಮಾಝ್ ನಿರ್ವಹಿಸಬೇಕು.'' 'ನೀನು ಅಂತಿಮವಾಗಿ ಮರಳಿ ಹೋಗುವವನ ನಮಾಝ್ ನಿರ್ವಹಿಸು' ಎಂಬ ಪ್ರವಾದಿ ವಚನದ ಸಾರಾಂಶವೂ ಇದುವೇ ಆಗಿದೆ.

ಪ್ರವಾದಿ(ಸ) ಹೇಳಿದರು, ಹೆಚ್ಚಿನ ವ್ಯಕ್ತಿಗಳು ನಷ್ಟಪಡಿಸುವ ಎರಡು ಅನುಗ್ರಹಗಳಿವೆ. 'ಆರೋಗ್ಯ ಮತ್ತು ಬಿಡುವು.' ಒಮ್ಮೆ ಪ್ರವಾದಿ(ಸ) ಒಬ್ಬ ವ್ಯಕ್ತಿಗೆ ಈ ರೀತಿ ಉಪದೇಶಿಸಿದರು. ''ಐದು ವಿಷಯಗಳಿಗಿಂತ ಮುನ್ನ ಐದು ವಿಷಯಗಳನ್ನು ಉಪಯೋಗಿಸಬೇಕು. ವಾರ್ಧಕ್ಯಕ್ಕೆ ಮುನ್ನ ಯೌವನ, ರೋಗಕ್ಕೆ ಮುನ್ನ ಆರೋಗ್ಯ, ದಾರಿದ್ರ್ಯಕ್ಕೆ ಮುನ್ನ ಐಶ್ವರ್ಯ, ನಿಬಿಡತೆಗೆ ಮುನ್ನ ಬಿಡುವಿನ ಸಮಯ, ಮರಣಕ್ಕೆ ಮುನ್ನ ಜೀವನ.''



# 53. ಇಹಲೋಕ- ವಿಶ್ವಾಸಿಯ ಸೆರೆಮನೆ

عَنْ أَبِي هُرَيْرَةَ رَضِيَ اللّٰهُ عَنْه قَالَ قَالَ رَسُولُ اللّٰهِ ﷺ الدُّنْيَا سِجْنُ الْمُؤْمِنِ وَجَنَّةُ الْكَافِرِ (مسلم)

ಅಬೂ ಹುರೈರಾ(ರ)ರಿಂದ ವರದಿಯಾಗಿದೆ. ಪ್ರವಾದಿ(ಸ) ಹೇಳಿದರು: ''ಇಹಲೋಕವು ಸತ್ಯವಿಶ್ವಾಸಿಯ ಪಾಲಿಗೆ ಸೆರೆಮನೆಯಾಗಿದೆ. ಸತ್ಯನಿಷೇಧಿಯ ಪಾಲಿಗೆ ಸ್ವರ್ಗವಾಗಿದೆ.''

(ಮುಸ್ಲಿಮ್)

ಜೀವನದ ಕುರಿತು ಸತ್ಯವಿಶ್ವಾಸಿ ಮತ್ತು ಸತ್ಯನಿಷೇಧಿಯ ದೃಷ್ಟಿಕೋನದ ಮಧ್ಯೆ ಇರುವ ವ್ಯತ್ಯಾಸವನ್ನು ಸ್ಪಷ್ಟಪಡಿಸುವ ಪ್ರವಾದಿವಚನ ಇದಾಗಿದೆ. ಸೆರೆಮನೆಯೆಂದರೆ ತನ್ನಿಷ್ಟ ಪ್ರಕಾರ ವರ್ತಿಸಲು, ಕೆಲಸ ಮಾಡಲು ಸ್ವಾತಂತ್ರ್ಯವಿಲ್ಲದ, ಇತರರ ಆದೇಶಗಳಿಗೆ ಅನುಸಾರವಾಗಿ ಮಾತ್ರ ಜೀವಿಸಬೇಕಾದ ಅನಿವಾರ್ಯತೆ ಇರುವ ಅವಸ್ಥೆಯಾಗಿದೆ. ಮೇಲಧಿಕಾರಿಗಳು ಹೇಳಿದ ಕಡೆಗೆ ಮಾತ್ರ ಆ ವ್ಯಕ್ತಿಗೆ ಹೋಗಬಹುದು. ಅವರು ನೀಡುವುದನ್ನು ಮಾತ್ರ ತಿನ್ನಲು, ಧರಿಸಲು ಸಾಧ್ಯ. ಅವರು ಆದೇಶಿಸುವುದನ್ನೆಲ್ಲಾ ಚಾಚೂ ತಪ್ಪದೆ ಕಡ್ಡಾಯವಾಗಿ ಮಾಡಲೇ ಬೇಕು. ಸೆರೆಮನೆ ವಾಸಿಯ ಸ್ವಂತ ಇಷ್ಟಾನಿಷ್ಟಗಳಿಗೆ ಅಲ್ಲಿ ಯಾವುದೇ ಬೆಲೆ ಇರುವುದಿಲ್ಲ. ಅದೇ ರೀತಿ ಸೆರೆಮನೆ ವಾಸಿಯು ಎಂದೂ ತಾನಿರುವ ಸೆರೆಮನೆಯನ್ನು ಇಷ್ಟ ಪಡುವುದಿಲ್ಲ. ಎಷ್ಟು ಶೀಘ್ರವಾಗಿ ಸಾಧ್ಯವೋ ಅಷ್ಟು ಬೇಗನೆ ಸೆರೆಮನೆಯಿಂದ ಬಿಡುಗಡೆ ಹೊಂದಿ ರಕ್ಷಣೆ ಪಡೆಯಬೇಕು ಎಂಬುದಾಗಿ ಸದಾ ಆ ವ್ಯಕ್ತಿ ಆಶಿಸುತ್ತಿರುತ್ತಾನೆ.

ಇದಕ್ಕೆ ವಿರುದ್ಧವಾಗಿ ಸ್ವರ್ಗದಲ್ಲಿರುವವರಿಗೆ ಯಾವುದೇ ನಿಯಮ ನಿಬಂಧನೆಗಳನ್ನು ಪಾಲಿಸಬೇಕಾಗಿಲ್ಲ. ಅವರಿಗಿಷ್ಟ ಬಂದಂತೆ ವರ್ತಿಸಬಹುದು. ಬೇಕಾದಲ್ಲಿಗೆಲ್ಲಾ ಹೋಗಬಹುದು. ಬಯಸಿದ್ದೆಲ್ಲವೂ ಆಸ್ವಾದಿಸಬಹುದು. ಅವರೆಂದೂ ತಾನಿರುವ ಸ್ವರ್ಗವನ್ನು ಬಿಟ್ಟು ಹೋಗಲು ಇಷ್ಟ ಪಡುವುದಿಲ್ಲ. ಸದಾ ಅದೇ ಸ್ವರ್ಗದಲ್ಲಿ ವಾಸಿಸುತ್ತಿರಬೇಕೆಂದು ಅವರು ಬಯಸುತ್ತಾರೆ.

ಸತ್ಯವಿಶ್ವಾಸಿಯು ಈ ಲೋಕದಲ್ಲಿ ಓರ್ವ ಸೆರೆಮನೆವಾಸಿಯಂತೆ ತಗ್ಗಿಬಗ್ಗಿ, ನಿಯಮ ನಿಬಂಧನೆಗಳನ್ನು ಅನುಸರಿಸಿ ಜೀವಿಸಬೇಕಾದವನಾಗಿದ್ದಾನೆ. ಅಲ್ಲಾಹನಿಗೆ ದಾಸ್ಯಭಾವನೆಯನ್ನು

ಅವನು ಪ್ರಕಟಿಸಬೇಕು. ಅಲ್ಲಾಹನ ನಿಯಮ ನಿರ್ದೇಶನಗಳನ್ನು ಅನುಸರಿಸಬೇಕು. ಶಿಲಾವಿಗ್ರಹಗಳನ್ನಾಗಲೀ, ಮನುಷ್ಯರೂ ಸೇರಿದಂತೆ ಇತರ ಸೃಷ್ಟಿಗಳನ್ನಾಗಲಿ, ಸ್ವೇಚ್ಛೆಯನ್ನಾಗಲೀ ಅವನು ಅನುಸರಿಸಬಾರದು. ಅವರೆಲ್ಲರ ದಾಸ್ಯದಿಂದ ಅವನು ಮುಕ್ತನಾಗಿದ್ದಾನೆ. ಆದುದರಿಂದ ಸತ್ಯವಿಶ್ವಾಸಿಯ ದಾಸ್ಯತನ ಮತ್ತು ಅನುಸರಣೆಯು ಮಹತ್ವಪೂರ್ಣವಾಗಿ ಬಿಡುತ್ತದೆ.

ಸತ್ಯವಿಶ್ವಾಸಿಗಳು ಈ ಐಹಿಕ ಜೀವನದ ಸುಖಭೋಗಗಳನ್ನು ಸರ್ವಸ್ವವೆಂದು ಪರಿಗಣಿಸುವುದಿಲ್ಲ, ಅವರ ಪಾಲಿಗೆ ಈ ಲೋಕವು ತಾತ್ಕಾಲಿಕ ತಂಗುದಾಣವಾಗಿದೆ. ಪರಲೋಕವು ಅವರ ಗುರಿಯಾಗಿದೆ. ಅಲ್ಲಿಯೇ ಅವರ ನಿಜವಾದ ಜೀವನವಿರುವುದು. ಅಲ್ಲಿಗೆ ಹೋಗಿ ತಲುಪಲು ಅವನು ಸದಾ ಆಶೆ ಪಡುತ್ತಿರುತ್ತಾನೆ. ವಿಶ್ವಾಸಿಗಳ ಪಾಲಿಗೆ ಈ ಪ್ರವಾದಿ ವಚನವು ತನ್ನನ್ನು ಸ್ವತಃ ನೋಡಿಕೊಳ್ಳಬೇಕಾದ ಕನ್ನಡಿಯಂತಿದೆ. ಈ ಲೋಕದ ಕುರಿತು ತನ್ನ ಮನಸ್ಥಿತಿ ಏನು? ವ್ಯಕ್ತಿಯ ವಿಶ್ವಾಸದ ನೈಜತೆಯು ಈ ಪ್ರಶ್ನೆಯ ಉತ್ತರದ ಮೇಲೆ ನಿಂತಿರುತ್ತದೆ. ಈ ಲೋಕವನ್ನು ಧಾರಾಳ ನಿಯಮ ನಿಬಂಧನೆಗಳು, ಜವಾಬ್ದಾರಿಗಳು ತುಂಬಿದ ಒಂದು ತಾತ್ಕಾಲಿಕ ತಂಗುದಾಣವಾಗಿ ಪರಿಗಣಿಸುತ್ತಾರೋ? ಹೌದು ಎಂದಾದರೆ ಅವರು ಖಂಡಿತವಾಗಿಯೂ ಸತ್ಯವಿಶ್ವಾಸಿಗಳೇ ಆಗಿದ್ದಾರೆ. ಹಾಗಲ್ಲದೆ ಈ ಲೋಕವನ್ನು ಅವರು ಒಂದು ಸ್ವರ್ಗವೆಂದು ಭಾವಿಸಿ ಬಯಸಿದ್ದೆಲ್ಲವನ್ನೂ ಅನುಭವಿಸುತ್ತಾ, ಇಚ್ಛಿಸುವುದನ್ನೆಲ್ಲಾ ಮಾಡುವ ತೀರ್ಮಾನವನ್ನು ತೆಗೆದುಕೊಂಡಿದ್ದಾರೆ ಎಂದಾದರೆ ಅದು ಸತ್ಯನಿಷೇಧಿಗಳು ಮತ್ತು ಅವಿಶ್ವಾಸಿಗಳ ಸ್ವಭಾವವಾಗಿದೆ.



# 54. ಸಮಯವನ್ನು ವ್ಯರ್ಥಗೊಳಿಸದಿರಿ

عَن عمروبن ميمون الأودي قال قال رسول الله ﷺ لِرَجُلٍ وَهُوَ يَعِظُهُ إغْتَنِمْ خَمْسًا قَبْلَ خَمْسٍ شَبَابَكَ قَبْلَ هَرَمِكَ وَصِحَّتَكَ قَبْلَ سَقْمِكَ وَغِنَاكَ قَبْلَ فَقْرِكَ وفَرَاغَكَ قَبْلَ شُغُلِكَ وَحَيَاتَكَ قَبْلَ مَوْتِكَ (ترمذي)

ಅಮ್ರ್ ಇಬ್ನ್ ಮೈಮೂನಿಲ್ ಔದೀಯವರಿಂದ ವರದಿಯಾಗಿದೆ. ಪ್ರವಾದಿ(ಸ) ಒಬ್ಬನಿಗೆ ಉಪದೇಶ ನೀಡುತ್ತಾ ಹೇಳಿದರು. 'ಐದು ವಿಷಯಗಳಿಗಿಂತ ಮೊದಲು ಐದು ವಿಷಯಗಳನ್ನು ವ್ಯರ್ಥಗೊಳಿಸದೆ ಉಪಯೋಗಿಸಬೇಕು. ವಾರ್ಧಕ್ಯದ ಸಮಸ್ಯೆ ಉಂಟಾಗುವ ಮೊದಲು ಯೌವನವನ್ನು, ರೋಗಿಯಾಗುವ ಮೊದಲು ಆರೋಗ್ಯವನ್ನು, ದಾರಿದ್ರ್ಯಕ್ಕೆ ಮೊದಲು ಸಂಪತ್ತನ್ನು, ಕೆಲಸಕ್ಕೆ ಮುನ್ನ ಬಿಡುವಿನ ವೇಳೆಯನ್ನು, ಮರಣಕ್ಕೆ ಮುನ್ನ ಜೀವನವನ್ನು ಉಪಯೋಗಿಸಬೇಕು.' (ತಿರ್ಮಿದಿ)

ಮಾರ್ಗದರ್ಶನವನ್ನು ಕೇಳಿ ಬಂದ ಓರ್ವ ಅನುಯಾಯಿಗೆ ಪ್ರವಾದಿ(ಸ) ನೀಡಿರುವ ಅನರ್ಘ್ಯ ಉಪದೇಶಗಳಿವು. ದಾರ್ಶನಿಕ ಗಹನತೆ ಅಥವಾ ಕ್ಲಿಷ್ಟತೆ ಇಲ್ಲದ ಸರಳವಾದ ನಿರ್ದೇಶನಗಳು. ಯಾವ, ನಿರಕ್ಷರಿಗೂ ಗ್ರಹಿಸಲು ಇತರರಿಗೆ ತಿಳಿಸಲು ಸಾಧ್ಯವಾಗುವಂತಿದೆ. ಆದರೆ ಗಾಢವಾಗಿ ಚಿಂತಿಸುವವರಿಗೆ ಚಿಲುಮೆಯಂತೆ ಅಗಾಧವೂ, ಆಕಾಶದಂತೆ ವಿಶಾಲವೂ ಆಗಿದೆ. ಅದೇ ರೀತಿ ಬೇಕಾದರೆ ಇದನ್ನು ಇನ್ನಷ್ಟು ಸಂಕ್ಷಿಪ್ತಗೊಳಿಸಬಹುದು. ''ಎಲ್ಲಾ ಕೆಲಸಗಳನ್ನೂ ಸರಿಯಾದ ಸಮಯಕ್ಕೆ ನಿರ್ವಹಿಸಬೇಕು.'' ಈ ರೀತಿ ಹೇಳಿದರೆ ಜನಸಾಮಾನ್ಯರಿಗೆ ಇದರ ವಿಶಾಲವಾದ ಅರ್ಥ ತಿಳಿಯಬೇಕೆಂದಿಲ್ಲ, ಆದುದರಿಂದ ಯಾವುದೇ ಸಾಮಾನ್ಯ ವ್ಯಕ್ತಿಗೂ ಮನದಟ್ಟಾಗುವ ಶೈಲಿಯನ್ನು ಪ್ರವಾದಿ(ಸ) ಉಪಯೋಗಿಸಿರುವರು.

ಕರ್ತವ್ಯಗಳನ್ನು ಅದರ ಸರಿಯಾದ ಸಮಯಕ್ಕೆ ನಿರ್ವಹಿಸಬೇಕು. ಇದು ಜೀವನದಲ್ಲಿ ವಿಜಯಕ್ಕಿರುವ ಮೂಲ ಮಂತ್ರವಾಗಿದೆ. ಯೌವನ, ಆರೋಗ್ಯ, ಸಂಪತ್ತು, ಸಮಯ ಇವೆಲ್ಲವೂ ಅಲ್ಲಾಹನು ನೀಡಿರುವ ಮಹತ್ವಪೂರ್ಣ ಅನುಗ್ರಹಗಳಾಗಿವೆ. ಇವುಗಳ ಪೈಕಿ ಯಾವುದನ್ನೂ ವ್ಯರ್ಥವಾಗಿ ಕಳೆಯಲು ನೀಡಲಾಗಿಲ್ಲ, ಪ್ರತಿಯೊಂದು ಘಟ್ಟಕ್ಕೂ ಅದಕ್ಕನುಸಾರವಾದ

ಜವಾಬ್ದಾರಿಯೂ ಹೊಣೆಗಾರಿಕೆಯೂ ಇದೆ. ಅವುಗಳನ್ನು ಸರಿಯಾಗಿ ಅರಿತು ನಿರ್ವಹಿಸುವುದೇ ಮನುಷ್ಯನು ಈ ಅನುಗ್ರಹಗಳಿಗೆ ಪ್ರತಿಯಾಗಿ ಸಲ್ಲಿಸುವ ಕೃತಜ್ಞತೆಯಾಗಿದೆ. ಜೀವನದ ಪ್ರತಿಯೊಂದು ಕಾಲಘಟ್ಟದಲ್ಲಿ ಅದರ ಕರ್ತವ್ಯಗಳನ್ನು ಕಡೆಗಣಿಸುವುದೆಂದರೆ ಸ್ವಂತ ಜೀವನವನ್ನು ನಷ್ಟಗೊಳಿಸಿದಂತೆ ಮಾತ್ರವಲ್ಲ, ಅಲ್ಲಾಹನೊಂದಿಗೆ ಕೃತಘ್ನತೆ ತೋರಿಸಿದಂತೆಯೂ ಆಗುತ್ತದೆ.

ಯೌವನ ಎಂಬುದು ಆವೇಶ, ಉತ್ಸಾಹ ತುಂಬಿ ತುಳುಕುತ್ತಿರುವ ಕಾಲಘಟ್ಟವಾಗಿರುತ್ತದೆ. ಈ ಘಟ್ಟದಲ್ಲಿ ಶೈತಾನನ ವಂಚನೆಗೆ ಒಳಗಾಗದಿರಲು ಅಲ್ಲಾಹನನ್ನು ಭಯಪಟ್ಟು ಅವನ ಆರಾಧನೆಯಲ್ಲಿ ಕಳೆಯಬೇಕು. ಜ್ಞಾನವನ್ನು, ಸಂಪತ್ತನ್ನು ಗಳಿಸುವುದು, ತನಗೂ ತನ್ನ ಸುತ್ತ ಮುತ್ತಲಿನವರಿಗೂ ಉಪಕಾರಪ್ರದವಾದ ಕೆಲಸಗಳನ್ನು ಮಾಡುವುದು, ದೇವಮಾರ್ಗದಲ್ಲಿ ಪರಿಶ್ರಮ ಪಡುವುದು ಇವೆಲ್ಲವೂ ಯುವ ಪ್ರಾಯದ ಕರ್ತವ್ಯಗಳಾಗಿವೆ. ಆರೋಗ್ಯವಿರುವವರ ಕರ್ತವ್ಯವೂ ಇದುವೇ ಆಗಿದೆ. ಯೌವನವನ್ನೂ, ಆರೋಗ್ಯವನ್ನೂ ನೀಡಿದ ಅಲ್ಲಾಹನ ಭೂಮಿಯಲ್ಲಿ ಅವನನ್ನು ಧಿಕ್ಕರಿಸಿ, ನಿಷೇಧಿಸಿ ಜೀವಿಸುವುದೆಂದರೆ ಅದೆಷ್ಟು ದೊಡ್ಡ ಕೃತಘ್ನತೆ! ಪ್ರಜ್ಞಾಶೂನ್ಯತೆಯ ಪರದೆಯನ್ನು ಕಿತ್ತೆಸೆದು ನೋಡಿದವರಿಗೆ ಮಾತ್ರ ಅದರ ಮಹತ್ವ ಮತ್ತು ಭಯಾನಕತೆಯು ವ್ಯಕ್ತವಾಗಬಲ್ಲದು. ಅವನ ಮನಸ್ಸಿನಲ್ಲಿ ದೇವನಿಂದ ಲಭಿಸಿದ ಬೆಳಕು ಹರಿಯಲಾರಂಭಿಸುತ್ತದೆ.

ದಾರಿದ್ರ್ಯ ಬರುವ ಮೊದಲು ಸಂಪತ್ತನ್ನು ಉಪಯೋಗಿಸಿರಿ ಎಂದರೆ, ಸಂಪತ್ತನ್ನು ಸಾಧ್ಯವಿರುವಷ್ಟು ಸುಖ ಲೋಲುಪತೆಗೆ ವ್ಯಯಿಸಿ ಅನುಭವಿಸಿ ಎಂದರ್ಥವಲ್ಲ. ಸಂಪತ್ತು ಎಂಬುದು ದೇವನ ಒಂದು ಅನುಗ್ರಹವಾಗಿದೆ. ಅತಿಯಾದ ಸುಖಾಡಂಬರ, ದುಂದುವೆಚ್ಚವನ್ನು ಮಾಡಲಿಕ್ಕಾಗಿ ಅದನ್ನು ನೀಡಲಾಗಿಲ್ಲ. ಅಗತ್ಯಕ್ಕೆ ಅನುಗುಣವಾಗಿ ಮಾತ್ರ ಅದನ್ನು ಬಳಸಬೇಕು. ಅನಾಥರಿಗೆ, ದರಿದ್ರರಿಗೆ, ನಿರ್ಗತಿಕರಿಗೆ, ನೆರೆಹೊರೆಯವರಿಗೆ ಸಹಾಯ ಮಾಡಬೇಕು. ಅದು ಶ್ರೀಮಂತರ ಕರ್ತವ್ಯವಾಗಿರುತ್ತದೆ. ಸಂಪತ್ತು ಸಿಕ್ಕಿರುವುದರ ಹೆಸರನಲ್ಲಿ ದೇವನಿಗೆ ಸಲ್ಲಿಸುವ ಕೃತಜ್ಞತೆಯೂ ಆಗಿರುತ್ತದೆ.

ಜೀವನವು ಒಂದು ಪರೀಕ್ಷೆಯಾಗಿದೆ. ಆಯುಷ್ಯ, ಆರೋಗ್ಯ, ಸಂಪತ್ತು ಎಲ್ಲವೂ ಅದರ ಪ್ರಶ್ನೆಗಳಾಗಿವೆ. ಜೀವನದ ಪರೀಕ್ಷೆಯನ್ನು ಬರೆಯುವಾಗ ಬಹಳ ಸೂಕ್ಷ್ಮತೆಯನ್ನು, ಜಾಗರೂಕತೆಯನ್ನು ಪಾಲಿಸಬೇಕು. ಪ್ರತಿಯೊಂದು ಪ್ರಶ್ನೆಗೂ ಅದರ ಸೂಕ್ತ ಸಮಯದಲ್ಲಿ ಉತ್ತರ ಬರೆಯದೆ ಹೋದರೆ, ಮುಂದೆ ಎಂದೂ ಅದನ್ನು ಬರೆಯಲು ಸಾಧ್ಯವಿಲ್ಲ. ನಿನ್ನೆ ಮುಗಿದಿರುವ ಗಣಿತದ ಪ್ರಶ್ನೆಗೆ, ಇಂದು ನಡೆಯುತ್ತಿರುವ ಸಮಾಜ ಶಾಸ್ತ್ರದ ಪರೀಕ್ಷೆಯಲ್ಲಿ ಉತ್ತರಿಸಲು ಸಾಧ್ಯವಿಲ್ಲ. ಉತ್ತರಿಸಿದರೂ ಅದನ್ನು ಮೌಲ್ಯಮಾಪಕರು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಜೀವನವೆಂಬ ಪರೀಕ್ಷೆಗೆ ಉತ್ತರ ಬರೆಯಬೇಕಿದ್ದರೆ, ಕಲಿಯಬೇಕಾದ ಪಾಠಗಳು ಕುರ್‌ಆನ್ ಮತ್ತು ಸುನ್ನತ್‌ಗಳಾಗಿವೆ. ಈ ಪಾಠಗಳನ್ನು ಕಡೆಗಣಿಸಿ, ಬೇರೆ ಯಾವ ಪಾಠಗಳನ್ನು ಕಲಿತರೂ ಈ ಪರೀಕ್ಷೆಗೆ ಸರಿಯಾಗಿ ಉತ್ತರ ಬರೆಯಲು ಸಾಧ್ಯವಾಗುವುದಿಲ್ಲ. ಮರಣವು

ಬಂದು ಬಿಡುವುದರೊಂದಿಗೆ ಪರೀಕ್ಷಾ ಸಮಯವು ಕೊನೆಗೊಳ್ಳುತ್ತದೆ. ನೀವು ಪ್ರಶ್ನೆಗಳಿಗೆ ಉತ್ತರ ಬರೆದಿದ್ದರೂ, ಬರೆಯದೆ ಇದ್ದರೂ ಪರೀಕ್ಷಾ ಸಮಯ ಮುಗಿದಿರುತ್ತದೆ.



# 55. ಶಕ್ತಿ ಮತ್ತು ದೌರ್ಬಲ್ಯ

عَنْ أَبِي هُرَيْرَةَ رَضِيَ اللَّهُ عَنْهُ قَالَ قَالَ رَسُولُ اللَّهِ ﷺ
الْمُؤْمِنُ الْقَوِيُّ خَيْرٌ وَأَحَبُّ إِلَى اللَّهِ مِنَ الضَّعِيفِ وَفِي كُلٍّ خَيْرٌ
احْرِصْ عَلَى مَا يَنْفَعُكَ وَاسْتَعِنْ بِاللَّهِ وَلَا تَعْجِزْ وَإِنْ أَصَابَكَ
شَيْءٌ فَلَا تَقُلْ لَوْ أَنِّي فَعَلْتُ كَانَ كَذَا وَكَذَا وَلَكِنْ قُلْ قَدَّرَ اللَّهُ مَا
شَاءَ فَعَلَ فَإِنَّ لَوْ تَفْتَحُ عَمَلَ الشَّيْطَانِ . (مشكوة)

ಅಬೂ ಹುರೈರಾ(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಈ ರೀತಿ ಹೇಳಿರುವರು. ಶಕ್ತಿವಂತ ವಿಶ್ವಾಸಿಯು ಉತ್ಕೃಷ್ಟನಾಗಿದ್ದಾನೆ. ಅಶಕ್ತರಿಗಿಂತ ಅಲ್ಲಾಹನು ಇಂತಹವರನ್ನೇ ಇಷ್ಟಪಡುತ್ತಾನೆ. ಎಲ್ಲದರಲ್ಲಿಯೂ ಪುಣ್ಯವಿದೆ. ನಿನಗೆ ಪ್ರಯೋಜನವಿರುವುದನ್ನು ಸಂಗ್ರಹಿಸುವುದರ ಬಗ್ಗೆ ಜಾಗೃತನಾಗಿರಬೇಕು. ಅಲ್ಲಾಹನೊಂದಿಗೆ ಸಹಾಯವನ್ನು ಯಾಚಿಸುತ್ತಿರಬೇಕು. ನೀನು ಆತ್ಮವಿಶ್ವಾಸವಿಲ್ಲದವನಾಗಬಾರದು. ಏನಾದರೂ ಆಪತ್ತು ಸಂಭವಿಸಿದರೆ, ನಾನು ಹಾಗೆ ಮಾಡುತ್ತಿದ್ದರೆ ಹಾಗಾಗುತ್ತಿತ್ತು. ಹೀಗೆ ಮಾಡಿದ್ದರೆ ಹೀಗಾಗುತ್ತಿತ್ತು ಎಂದೆಲ್ಲಾ ಹೇಳಬಾರದು. ನೀನು ಈ ರೀತಿ ಹೇಳಬೇಕು. 'ಅಲ್ಲಾಹನು ಇಷ್ಟಪಟ್ಟಿದ್ದನ್ನು ವಿಧಿಸಿದನು ಮತ್ತು ಮಾಡಿದನು.' 'ಮಾಡಿದ್ದರೆ' ಎಂಬುದು ಪೈಶಾಚಿಕತೆಯ ಬಾಗಿಲನ್ನು ತೆರೆಯುತ್ತದೆ. (ಮಿಶ್ಕಾತ್)

ಶಕ್ತಿ ಮತ್ತು ದೌರ್ಬಲ್ಯದ ಧಾರ್ಮಿಕ ದೃಷ್ಟಿಕೋನವನ್ನು ಈ ಹದೀಸ್‌ನ ಮೂಲಕ ಪ್ರವಾದಿ(ಸ) ಸ್ಪಷ್ಟಪಡಿಸಿದ್ದಾರೆ. ಶಕ್ತಿ, ಸೌಲಭ್ಯ ಮತ್ತು ಮನುಷ್ಯರಿಗೆ ಪ್ರಯೋಜನಕಾರಿಯಾದ ಬೇರೆಲ್ಲಾ ಕಾರ್ಯಗಳು ಇಸ್ಲಾಮಿನ ದೃಷ್ಟಿಕೋನದಲ್ಲಿ ಒಳಿತು ಮತ್ತು ಪುಣ್ಯವಾಗಿದೆ. ಸಬಲ ವಿಶ್ವಾಸಿಯು ದುರ್ಬಲ ವಿಶ್ವಾಸಿಗಿಂತ ಅಲ್ಲಾಹನ ಪ್ರೀತಿಗೆ ಪಾತ್ರನು ಎಂದು ಪ್ರವಾದಿ(ಸ) ಯಾವುದೇ ಗೊಂದಲವಿಲ್ಲದೆ ಬಹಳ ಸ್ಪಷ್ಟವಾಗಿ ತಿಳಿಸಿದ್ದಾರೆ. ಇಲ್ಲಿ ಸಬಲನಾದ ವಿಶ್ವಾಸಿ ಎಂದು ಹೇಳಲಾಗಿರುವುದು ಶಾರೀರಿಕ ಸಬಲತೆಯನ್ನು ಮಾತ್ರ ಉದ್ದೇಶವಾಗಿಟ್ಟುಕೊಂಡಲ್ಲ, ಶಾರೀರಿಕ,

ಸಬಲತೆ, ಮಾನಸಿಕ ಸಬಲತೆ, ಸಂಪತ್ತಿನ ಶಕ್ತಿ, ಬುದ್ಧಿಶಕ್ತಿ, ಜ್ಞಾನ ಶಕ್ತಿ ಈ ರೀತಿ ಮನುಷ್ಯನು ಸ್ವಪ್ರಯತ್ನದಿಂದ ಬೆಳೆಸಬಹುದಾದ ಎಲ್ಲಾ ಒಳ್ಳೆಯ ಗುಣಗಳನ್ನು ಅದು ಒಳಗೊಂಡಿದೆ. ಎಲ್ಲಾ ಕೆಲಸಗಳಲ್ಲೂ ಪುಣ್ಯವಿದೆ ಎಂದೂ ನಿಮಗೆ ಪ್ರಯೋಜನವಾಗುವ ವಿಷಯಗಳನ್ನು ಗಳಿಸಲು ಉತ್ಸಾಹ ತೋರಿಸಬೇಕೆಂದೂ ಮುಂದುವರಿಯುತ್ತಾ ಹೇಳಲಾಗಿರುವುದರಿಂದ ಈ ವಿಷಯವು ಸ್ಪಷ್ಟವಾಗುತ್ತದೆ.

ಇಹಲೋಕ ಜೀವನದಲ್ಲಿ ಮನುಷ್ಯರಿಗೆ ನಿಜವಾಗಿ ಒಳಿತು, ಸಮೃದ್ಧಿ ಮತ್ತು ಸೌಂದರ್ಯವನ್ನು ನೀಡುವ ಎಲ್ಲಾ ವಿಷಯಗಳೂ ಧಾರ್ಮಿಕ ದೃಷ್ಟಿಯಲ್ಲೂ ಒಳಿತುಗಳಾಗಿವೆ. ಅವುಗಳನ್ನು ಗಳಿಸುವುದು ಪುಣ್ಯವಾಗಿದೆ. ಪ್ರಯೋಜನಕಾರಿಯಾದ ಕೆಲಸಗಳನ್ನು ಮಾಡಿರಿ ಎಂದಲ್ಲ, ಬದಲಾಗಿ ಅವುಗಳನ್ನು ಗಳಿಸಲು ಪೈಪೋಟಿಯೊಂದಿಗೆ ಪ್ರಯತ್ನಿಸಿರಿ ಎಂದು ಪ್ರವಾದಿ(ಸ) ಕಲಿಸಿರುವರು.

ಧರ್ಮವನ್ನು ಆಚರಿಸುವುದೆಂದರೆ, ಜೀವನದ ಸೌಲಭ್ಯ, ಸೌಭಾಗ್ಯಗಳೊಂದಿಗೆ ವಿರಕ್ತಿಯನ್ನು ತೋರಿಸುವುದು ಎಂಬ ಕಲ್ಪನೆಯನ್ನು ಈ ಹದೀಸ್ ವಚನವು ನಿಷೇಧಿಸುತ್ತದೆ. ಮನುಷ್ಯನಿಗೆ ಧರ್ಮಬದ್ಧವಾದ ಎಲ್ಲಾ ಸೌಭಾಗ್ಯಗಳನ್ನು ಆಸ್ವಾದಿಸಿಕೊಂಡೇ ಅಲ್ಲಾಹನನ್ನು ಭಯಭಕ್ತಿಯಿಂದ ಆರಾಧನೆ ಮಾಡಲು ಸಾಧ್ಯವಿದೆ. ಅಂತಹವರನ್ನು ಅಲ್ಲಾಹನು ಐಹಿಕ ಸೌಕರ್ಯಗಳನ್ನು ವರ್ಜಿಸಿ, ಕೇವಲ ದೇವಾರಾಧನೆಯಲ್ಲಿ, ಪ್ರಾರ್ಥನೆಗಳಲ್ಲಿ ಮುಳುಗಿ ಜೀವಿಸುವವರಿಗಿಂತ ಹೆಚ್ಚು ಇಷ್ಟ ಪಡುವನು. ಅಲ್ಲಾಹನು ಈ ಲೋಕದಲ್ಲಿ ಸೃಷ್ಟಿಸಿರುವ ಅಲಂಕಾರ ವಸ್ತುಗಳು, ಆನಂದದ ಮೂಲಗಳೆಲ್ಲ ಮನುಷ್ಯನಿಗಿರುವುದಾಗಿದೆ. ಮನುಷ್ಯನು ಅವುಗಳನ್ನು ಆಸ್ವಾದಿಸುವುದರಲ್ಲಿ ಅಲ್ಲಾಹನಿಗೆ ತೃಪ್ತಿ ಇದೆ. ಅದನ್ನು ವರ್ಜಿಸುವುದರಿಂದ ಅವನಲ್ಲಿ ಅತೃಪ್ತಿ ಉಂಟಾಗುತ್ತದೆ.

ಭೌತಿಕವಾದ ಸಂಪತ್ತಿಗಾಗಿ ಅಲ್ಲಾಹನಲ್ಲಿ ಸಹಾಯವನ್ನು ಯಾಚಿಸಬಹುದು ಮತ್ತು ಯಾಚಿಸಬೇಕು. ಆದರೆ ದೇವನೊಂದಿಗೆ ಸಹಾಯವನ್ನು ಕೇಳುವುದು ಆಲಸಿಗಳಾಗಿ, ನಿಷ್ಕ್ರಿಯರಾಗಿ ಬಿದ್ದುಕೊಂಡಲ್ಲ, ಕಠಿಣವಾಗಿ ಪರಿಶ್ರಮ ಪಡಬೇಕು ಮತ್ತು ಆತ್ಮವಿಶ್ವಾಸವನ್ನು ಹೊಂದಿರಬೇಕು. ಮನುಷ್ಯನ ಜೀವನದಲ್ಲಿ ನಷ್ಟಗಳು, ವಿಪತ್ತುಗಳು ಸಂಭವಿಸುವುದು ಸ್ವಾಭಾವಿಕವಾಗಿದೆ. ಸಂಭವಿಸಿ ಹೋದ ನಷ್ಟಗಳನ್ನು ಹೇಳುತ್ತಾ ನಿರಾಶರಾಗುವುದರಲ್ಲಿ ಅರ್ಥವಿಲ್ಲ, ನಾನು ಹಾಗೆ ಮಾಡುತ್ತಿದ್ದರೆ, ಹೀಗೆ ಸಂಭವಿಸುತ್ತಿರಲಿಲ್ಲ ಅಥವಾ ಈ ಮಾರ್ಗದಲ್ಲಿ ಹೋಗುತ್ತಿದ್ದರೆ ಆ ನಷ್ಟ ಸಂಭವಿಸುತ್ತಿರಲಿಲ್ಲ ಎಂದೆಲ್ಲಾ ವಿಷಾದಿಸುತ್ತಿರುವುದು ನಿಷ್ಪ್ರಯೋಜಕವಾಗಿದೆ. ಸಂಭವಿಸಿರುವುದು ವಿಧಿಯಾಗಿತ್ತೆಂದು ಸಮಾಧಾನಪಟ್ಟು ನಷ್ಟಗಳನ್ನು ಕಡಿಮೆಗೊಳಿಸಲು ಮತ್ತು ಹೆಚ್ಚು ನಷ್ಟ ಸಂಭವಿಸದಂತೆ ಮುಂಜಾಗರೂಕತೆ ವಹಿಸಬೇಕು. ನಷ್ಟಗಳು ಸಂಭವಿಸಿದಾಗ, ಅಲ್ಲಾಹನನ್ನು ಮರೆತು ಸ್ವಂತ ಕೊರತೆಗಳನ್ನು ನೆನಪಿಸಿ ವಿಷಾದಿಸುತ್ತಿರುವುದು. ಲಾಭವುಂಟಾದರೆ ಅಲ್ಲಾಹನನ್ನು ಮರೆತು ಸ್ವಸಾಮರ್ಥ್ಯವನ್ನು ನೆನಪಿಸಿ ಅಹಂಕಾರ ಪಡುವುದೂ ಪೈಶಾಚಿಕವಾಗಿದೆ.

ಸಬಲನಾದ ವಿಶ್ವಾಸಿಯು ದುರ್ಬಲ ವಿಶ್ವಾಸಿಗಿಂತ ಅಲ್ಲಾಹನಿಗೆ ಪ್ರೀತಿ ಪಾತ್ರನು ಎಂದು ಹೇಳುವಾಗ, ಸ್ವಂತ ನಿಯಂತ್ರಣದಲ್ಲಿರದ ವಿಷಯಗಳ ಕಾರಣದಿಂದ ದೌರ್ಬಲ್ಯಕ್ಕೊಳಗಾದ ವ್ಯಕ್ತಿಗಳನ್ನು ಅಲ್ಲಾಹನು ದ್ವೇಷಿಸುತ್ತಾನೆ ಎಂದು ಅರ್ಥವಲ್ಲ. ಅಲ್ಲಾಹನು ಮನುಷ್ಯರಿಗೆ ಶಕ್ತಿ ಮತ್ತು ಸೌಭಾಗ್ಯವನ್ನು ಇಷ್ಟ ಪಡುತ್ತಾನೆ. ದೌರ್ಬಲ್ಯ ಮತ್ತು ದೌರ್ಭಾಗ್ಯಗಳನ್ನಲ್ಲ. ಅಲ್ಲಾಹನು ಇಷ್ಟ ಪಡುವುದನ್ನು ಹುಡುಕುವ ಮತ್ತು ಅದನ್ನು ಗಳಿಸುವ ವ್ಯಕ್ತಿಗಳನ್ನು ಅಲ್ಲಾಹನು ಪ್ರೀತಿಸುತ್ತಾನೆ. ನ್ಯಾಯ ಸಮ್ಮತ ಕಾರಣಗಳಿಂದ ಅದನ್ನು ಅರಸಲು ಸಾಧ್ಯವಾಗದೆ. ಹುಡುಕಿಯೂ ಗಳಿಸಲು ಸಾಧ್ಯವಾಗದೆ ಇರುವವರು ಅವನ ಅನಿಷ್ಟಕ್ಕೆ ಪಾತ್ರರಾಗುವುದಿಲ್ಲ. ಅಲ್ಲಾಹನು ಇಷ್ಟ ಪಡುವುದನ್ನು ಗಳಿಸಲು ಸಾಮರ್ಥ್ಯಕ್ಕನುಸಾರ ಪರಿಶ್ರಮಿಸುವವರು, ಆ ಪರಿಶ್ರಮದಲ್ಲಿ ವಿಜಯಿಗಳಾದರೂ, ಇಲ್ಲದಿದ್ದರೂ ಅವನ ಇಷ್ಟದಾಸರಲ್ಲೇ ಸೇರುತ್ತಾರೆ.



## 56. ಬುದ್ಧಿವಂತ ಯಾರು?

عَنْ شَدَّادِ بْنِ أَوْسٍ قَالَ قَالَ رَسُولُ اللهِ ﷺ الْكَيِّسُ مَنْ دَانَ نَفْسَهُ وَعَمِلَ لِمَا بَعْدَ الْمَوْتِ وَالْعَاجِزُ مَنْ أَتْبَعَ نَفْسَهُ هَوَاهَا وَتَمَنَّى عَلَى اللهِ (ترمذى وابن ماجة)

ಹ. ಶದ್ದಾದ್ ಬಿನ್ ಔಸ್(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿದರು. 'ತನ್ನ ಚಿತ್ತವನ್ನು ನಿಯಂತ್ರಣದಲ್ಲಿಟ್ಟುಕೊಂಡವನು ಮತ್ತು ಮರಣಾನಂತರದ ಜೀವನಕ್ಕಾಗಿ ಕರ್ಮ ವೆಸಗಿದವನು ಜಾಣ. ತನ್ನನ್ನು ತಾನು ಈ ಲೋಕದ ವ್ಯಾಮೋಹದ ದಾರಿಯಲ್ಲಿ ಮುನ್ನಡೆಸುತ್ತಾ ಅಲ್ಲಾಹನಿಂದ ಪೊಳ್ಳು ನಿರೀಕ್ಷೆಯಿರಿಸಿದವನು ಮೂರ್ಖ.' (ತಿರ್ಮಿದಿ, ಇಬ್ನು ಮಾಜ)

ಸಾಮರ್ಥ್ಯ, ಬುದ್ಧಿವಂತಿಕೆ, ಮೂರ್ಖತನ ಇತ್ಯಾದಿಗಳ ಇಸ್ಲಾಮೀ ಮಾನದಂಡಗಳನ್ನು ಈ ಪ್ರವಾದಿವಚನವು ವಿವರಿಸುತ್ತದೆ. ಲೌಕಿಕ ಸಂಪತ್ತನ್ನು ಸಂಗ್ರಹಿಸುವವರು, ಅದರಲ್ಲಿ ನಿಪುಣರು, ಅವರಿಷ್ಟಪಟ್ಟದ್ದನ್ನೆಲ್ಲಾ ಮಾಡುತ್ತಾ, ಅನುಭವಿಸುತ್ತಾ ಇರಲು ಸಾಧ್ಯವಿರುವವರನ್ನು ಲೌಕಿಕ ಜೀವನದಲ್ಲಿ ಸಮರ್ಥರು, ಬುದ್ಧಿವಂತರು ಎಂದು ಪರಿಗಣಿಸಲಾಗುತ್ತದೆ. ಲೌಕಿಕ ಸಂಪತ್ತು ಹೆಚ್ಚಿಲ್ಲದವರು, ಕುತಂತ್ರಗಳನ್ನು ಮಾಡದವರು, ಮನಸ್ಸು ಇಚ್ಛಿಸಿದ್ದನ್ನೆಲ್ಲಾ ಮಾಡಲು ಬಯಸದ ಜನರನ್ನು ದುರ್ಬಲರೆಂದೂ, ಮೂರ್ಖರೆಂದೂ ತಿಳಿಯಲಾಗುತ್ತದೆ.

ಆದರೆ ಇಸ್ಲಾಮಿನ ದೃಷ್ಟಿಯಲ್ಲಿ ಜೀವನವೆಂದರೆ ಈ ಇಹಲೋಕದಲ್ಲಿ ಕಳೆಯುವ ಕೆಲವು ದಿನಗಳ ಜೀವನವಲ್ಲ, ಮರಣಾನಂತರದ ಅನಂತವೂ ಶಾಶ್ವತವೂ ಆದ ಒಂದು ಜೀವನವು ಮನುಷ್ಯನಿಗಾಗಿ ಕಾಯುತ್ತಿದೆ. ಅದುವೇ ಯಥಾರ್ಥ ಜೀವನವಾಗಿದೆ. ಕ್ಷಣಿಕವಾದ ಲೌಕಿಕ ಜೀವನದ ಸುಖಕ್ಕಾಗಿ ಅನಂತವಾದ ಮರಣಾನಂತರದ ಜೀವನವನ್ನು ಕಡೆಗಣಿಸುವುದು ಬುದ್ಧಿವಂತಿಕೆ ಅಥವಾ ವಿವೇಕವಲ್ಲ, ಮರಣಾನಂತರದ ಜೀವನದ ವಿಜಯವು ಲೌಕಿಕ ಜೀವನದಲ್ಲಿ ಮನುಷ್ಯನು ಅಲ್ಲಾಹನ ವಿಧಿ ನಿಷೇಧಗಳನ್ನು ಪಾಲಿಸುವುದನ್ನು ಅವಲಂಬಿಸಿದೆ. ಆದುದರಿಂದ ಇಹಲೋಕದಲ್ಲಿ ಅಲ್ಲಾಹನ ಆದೇಶಗಳನ್ನು ಅನುಸರಿಸಿ ಜೀವಿಸುವವನೇ ನಿಜವಾದ ಬುದ್ಧಿವಂತ.

ಅಲ್ಲಾಹನ ಆದೇಶಗಳನ್ನು ಅನುಸರಿಸಿ ಜೀವಿಸುವುದಕ್ಕೆ ದೃಢವಾದ ವಿಶ್ವಾಸ ಮತ್ತು ಆತ್ಮನಿಯಂತ್ರಣವು ಅನಿವಾರ್ಯವಾಗಿದೆ. ಮನುಷ್ಯನು ಸ್ವೇಚ್ಛೆಗಳನ್ನು ನಿರ್ಲಕ್ಷಿಸಿ, ಅದನ್ನು ಮೆಟ್ಟಿ ನಿಂತಾಗಲೇ ಅಲ್ಲಾಹನಿಗೆ ವಿಧೇಯನಾಗುತ್ತಾನೆ. ಬುದ್ಧಿ, ವಿವೇಕ ಮತ್ತು ಆತ್ಮಬಲವಿರುವವರಿಗೆ ಮಾತ್ರ ಈ ಕೆಲಸ ಸಾಧ್ಯ. ಅಲ್ಲಾಹನ ವಿಧಿ ನಿಷೇಧಗಳ ಬಗ್ಗೆ ಮನುಷ್ಯನ ನಿಲುವೇನು ಎಂಬುದು ಮನುಷ್ಯನ ಬುದ್ಧಿ ಮತ್ತು ಶಕ್ತಿಯ ಒರೆಗಲ್ಲಾಗಿದೆ. ಮನಸ್ಸು ಇಚ್ಛಿಸಿದ್ದೆಲ್ಲವನ್ನೂ ಮಾಡುತ್ತಾ ಸಾಗುವುದು, ಅನುಭವಿಸುವುದು ಎಲ್ಲರಿಗೂ ಸುಲಭದ ಕೆಲಸವಾಗಿದೆ. ಆದರೆ ಮಾಡಬೇಕಾದುದನ್ನು ತಿಳಿಯಬೇಕಿದ್ದರೆ ಅದಕ್ಕೆ ಅರಿವು ಮತ್ತು ಆತ್ಮಸ್ಥೈರ್ಯದ ಅವಶ್ಯಕತೆಯಿದೆ.

ಆದುದರಿಂದ ಇಚ್ಛಿಸಿದ್ದೆಲ್ಲವನ್ನೂ ಅನುಭವಿಸುವುದು ಎಂಬುದು ಓರ್ವ ವ್ಯಕ್ತಿಯ ಬುದ್ಧಿವಂತಿಕೆಯೋ, ಸೌಭಾಗ್ಯವೋ ಅಲ್ಲ, ತದ್ವಿರುದ್ಧವಾಗಿ ದೌರ್ಬಲ್ಯ ಮತ್ತು ದೌರ್ಭಾಗ್ಯ ವಾಗಿದೆ. ದೇವನ ಸಂಪ್ರೀತಿಗೆ ವಿರುದ್ಧವಾಗಿ ಕ್ಷಣಿಕ ಸುಖವನ್ನು ಅನುಭವಿಸಲು ಅದಕ್ಕೆ ಎಷ್ಟು ಸಾಮರ್ಥ್ಯ ಮತ್ತು ಯುಕ್ತಿಯನ್ನು ಪ್ರಕಟಿಸಿದರೂ ಅದರಿಂದ ಶಾಶ್ವತ ಶಿಕ್ಷೆ ಅನುಭವಿಸಬೇಕಾಗಿ ಬರಬಹುದು ಎಂಬ ವಾಸ್ತವಿಕತೆಯನ್ನು ನೆನಪಿಸದ ಮೂರ್ಖನಾಗುತ್ತಾನೆ.

ಸಾಮಾನ್ಯವಾಗಿ ಜನರನ್ನು ಮರುಳುಗೊಳಿಸುವ ಒಂದು ವ್ಯಾಮೋಹದ ಕುರಿತು ಈ ಪ್ರವಾದಿ ವಚನವು ಗಮನ ಸೆಳೆಯುತ್ತದೆ. ಅದೇನೆಂದರೆ ತಾನಿಷ್ಟ ಪಡುವುದನೆಲ್ಲಾ ಮಾಡುತ್ತಾ ಇರುವುದು ಆ ಬಳಿಕ ಅಲ್ಲಾಹನು ತನ್ನನ್ನು ಕ್ಷಮಿಸುವನೆಂದು ಸಮಾಧಾನ ಪಟ್ಟುಕೊಳ್ಳುವುದು. ಅಜ್ಞಾನದಿಂದಾಗಿ, ಮರೆವಿನಿಂದಾಗಿ, ನಿರ್ಬಂಧಿತ ಅವಸ್ಥೆಗಳಲ್ಲಿ ಮನುಷ್ಯನಿಂದ ಸಂಭವಿಸಿದ ಪಾಪಗಳನ್ನು ಕರುಣಾಮಯಿಯಾದ ಅಲ್ಲಾಹನು ಕ್ಷಮಿಸುವನು. ಅಂತಹ ಸಂದರ್ಭಗಳಲ್ಲಿ ಅವನು ಅಲ್ಲಾಹನನ್ನು ಮನಃಪೂರ್ವಕ ನಿಷೇಧಿಸಿರುವುದಿಲ್ಲ, ಧಿಕ್ಕರಿಸಿರುವುದಿಲ್ಲ, ಆದರೆ ಸ್ವೇಚ್ಛೆಯ ಪ್ರಕಾರ ಜೀವಿಸಿ ಅಲ್ಲಾಹನು ನನ್ನನ್ನು ಕ್ಷಮಿಸಬಹುದೆಂದು ಭಾವಿಸುವವರು ಸ್ವಯಂ ಅಲ್ಲಾಹನಿಗೆ ವಿಧೇಯರಾಗುವ ಬದಲು ಅಲ್ಲಾಹನು ಅವರಿಗೆ ವಿಧೇಯನಾಗಬೇಕೆಂದು ನಿರೀಕ್ಷಿಸುವವರಾಗಿದ್ದಾರೆ. ಅವರು ಅಲ್ಲಾಹನನ್ನು ಆರಾಧಿಸುವವರಲ್ಲ, ಸ್ವೇಚ್ಛೆಯ ಆರಾಧಕರಾಗಿದ್ದಾರೆ.



# 57. ದಿವಾಳಿಕೋರ ಯಾರು?

عن أبى هريرة رضي الله عنه إنَّ رَسُولَ اللّٰه ﷺ قَالَ أتَدْرُونَ

مَنِ الْمُفْلسُ؟ قَالُوا الْمُفْلسُ فِينَا مَنْ لَا دِرْهَمَ لَهُ وَلَا مَتَاعَ

فَقَالَ إنَّ الْمُفْلسَ مِنْ أُمَّتِي مَنْ يَأْتِي يَوْمَ الْقِيَامَةِ بِصَلَاةٍ

وَصِيَامٍ وَزَكَاةٍ وَيَأْتِي قَدْ شَتَمَ هَذَا وَقَذَفَ هَذَا وَأكَلَ مَالَ هَذَا

وَسَفَكَ دَمَ هَذَا وَضَرَبَ هَذَا فَيُعْطَى هَذَا مِنْ حَسَنَاتِهِ وَهَذَا مِنْ حَسَنَاتِهِ

فَإنْ فَنِيَتْ حَسَنَاتُهُ قَبْلَ أنْ يُقْضَيَ مَا عَلَيْهِ أُخِذَ مِنْ خَطَايَاهُمْ

فَطُرِحَتْ عَلَيْهِ ثُمَّ طُرِحَ فِي النَّارِ (مسلم)

ಹ. ಅಬೂ ಹುರೈರಾ(ರ) ಉಲ್ಲೇಖಿಸಿರುವಂತೆ ಒಮ್ಮೆ ಪ್ರವಾದಿ(ಸ) ''ದರಿದ್ರನು ಯಾರೆಂದು ನಿಮಗೆ ಗೊತ್ತೇ?'' ಎಂದು ಪ್ರಶ್ನಿಸಿದರು. ಸಹಾಬಿಗಳು, ''ಸಂಪತ್ತಾಗಲೀ, ಸರಕುಗಳಾಗಲೀ ಇಲ್ಲದವನು'' ಎಂದು ಉತ್ತರಿಸಿದರು. ಆಗ ಪ್ರವಾದಿ(ಸ) ಹೇಳಿದರು. ''ನನ್ನ ಸಮುದಾಯದ ದರಿದ್ರ ವ್ಯಕ್ತಿ ಯಾರೆಂದರೆ ಆವನು ಪುರುತ್ಥಾನ ದಿನದಂದು ನಮಾಝ್, ಉಪವಾಸ ಮತ್ತು ಝಕಾತ್‌ನಂತಹ ಸತ್ಕರ್ಮಗಳೊಂದಿಗೆ ಬರುವನು. ಆದರೆ ಅವನು (ಇಹದಲ್ಲಿ) ಯಾರಿಗಾದರೂ ಬೈದಿರುವನು, ಯಾರ ಮೇಲಾದರೂ ಸುಳ್ಳಾರೋಪ ಹೊರಿಸಿರುವನು, ಯಾರದಾದರೂ ಸೊತ್ತನ್ನು ಕಬಳಿಸಿರುವನು, ಯಾರದಾದರೂ ರಕ್ತ ಹರಿಸಿರುವನು, ಯಾರನ್ನಾದರೂ ಥಳಿಸಿರುವನು. ಆ ಬಳಿಕ ಅವನ ಸತ್ಕರ್ಮಗಳನ್ನೆಲ್ಲಾ ಆ (ಅವನಿಂದ ಹಾನಿ ಅನುಭವಿಸಿದ) ಜನರಿಗೆ ಹಂಚಿ ಬಿಡಲಾಗುವುದು. ಅವರ ಬೇಡಿಕೆಗಳು ಈಡೇರುವ ಮುನ್ನವೇ ಅವನ ಸತ್ಕರ್ಮಗಳೆಲ್ಲ ಮುಗಿದು ಬಿಡುವವು. ಆ ಬಳಿಕ ಅವರ ಪಾಪಗಳನ್ನು ಅವನ ಮೇಲೆ ಹೊರಿಸಲಾಗುವುದು. ತರುವಾಯ ಅವನನ್ನು ನರಕಕ್ಕೆ ತಳ್ಳಿ ಬಿಡಲಾಗುವುದು.'' (ಮುಸ್ಲಿಮ್)

ಇದು ಜನಸಾಮಾನ್ಯರಿಗೂ ಬುದ್ಧಿವಂತರಿಗೂ ಏಕಪ್ರಕಾರ ಅರ್ಥವಾಗಬಹುದಾದ ಸಾರವತ್ತಾದ, ಸರಳವಾದ ಒಂದು ಪ್ರವಾದಿ ವಚನವಾಗಿದೆ.

ಮನುಷ್ಯನ ಪಾಲಿಗೆ ನಿಜವಾದ ದಾರಿದ್ರ್ಯ (ದಿವಾಳಿತನ) ಏನು ಎಂಬುದನ್ನು ಈ ಪ್ರವಾದಿವಚನವು ನಮಗೆ ಮನವರಿಕೆ ಮಾಡಿಸುತ್ತದೆ. ಇಹಲೋಕದ ದಾರಿದ್ರ್ಯವು ತಾತ್ಕಾಲಿಕ ವಾದುದಾಗಿದೆ. ಇಂದಲ್ಲ, ನಾಳೆ ಅದು ಕೊನೆಗೊಳ್ಳುತ್ತದೆ. ಇಲ್ಲದಿದ್ದರೂ ಮರಣದೊಂದಿಗೆ ಅದು ಮುಗಿದು ಬಿಡುತ್ತದೆ. ಆದರೆ ಪರಲೋಕದಲ್ಲಿ ಎದುರಿಸಬೇಕಾದ ದಿವಾಳಿಕೋರತನವು ಶಾಶ್ವತವಾದುದಾಗಿದೆ. ಅದು ಮನುಷ್ಯರನ್ನು ನರಕಕ್ಕೆ ಎಸೆದು ಬಿಡುತ್ತದೆ. ಸಂಪತ್ತು ಇಲ್ಲದಿರುವುದು ವಾಸ್ತವದಲ್ಲಿ ದಿವಾಳಿತನವಲ್ಲ, ದಿವಾಳಿತನವು ಸತ್ಕರ್ಮವೆಂಬ ಮೂಲ ಬಂಡವಾಳದ ಅಭಾವದ ಹೆಸರಾಗಿದೆ. ಅಂತ್ಯದಿನದಂದು ವಿಚಾರಣೆಯ ವೇಳೆ ಸತ್ಕರ್ಮವೆಂಬ ಮೂಲ ಬಂಡವಾಳದೊಂದಿಗೆ ಹಾಜರಾದರೂ, ಸಹಜೀವಿಗಳೊಂದಿಗೆ ತೋರಿಸಿದ ಕೆಟ್ಟ ವರ್ತನೆಯ ಕಾರಣದಿಂದಾಗಿ ಅವೆಲ್ಲವನ್ನೂ ಕಳೆದುಕೊಂಡು ಬಿಡಬೇಕಾಗಿ ಬರುವವನೇ ನಿಜವಾದ ದಿವಾಳಿಕೋರ. ಅದುವೇ ಪರಿಹಾರವಿಲ್ಲದ ದಿವಾಳಿತನ. ಇದು ಈ ಪ್ರವಾದಿ ವಚನದ ಮೂಲಕ ಸಿಗುವ ಅತ್ಯಂತ ಪ್ರಮುಖ ಪಾಠವಾಗಿದೆ.

ಅಂತ್ಯದಿನದಂದು ದಿವಾಳಿಯಾಗುವ ಒಬ್ಬ ವ್ಯಕ್ತಿಯ ಅವಸ್ಥೆಯನ್ನು ಪ್ರವಾದಿ(ಸ) ಈ ವಚನದ ಮೂಲಕ ವಿವರಿಸಿರುವರು. ಆ ವ್ಯಕ್ತಿ ಕ್ರಮಪ್ರಕಾರ ಐದು ಹೊತ್ತು ನಮಾಝ್ ನಿರ್ವಹಿಸಿರುವನು. ಕ್ರಮಪ್ರಕಾರ ಝಕಾತ್ ನೀಡಿರುವನು. ರಮಝಾನ್ ತಿಂಗಳ ಉಪವಾಸವನ್ನು ಚಾಚೂ ತಪ್ಪದೇ ಪಾಲಿಸಿರುವನು. ಈ ರೀತಿ ಬಹಳ ದೊಡ್ಡ ಪ್ರಮಾಣದ ಬಂಡವಾಳದೊಂದಿಗೆ ಆ ವ್ಯಕ್ತಿ ವಿಚಾರಣೆಯ ಸಭೆಯಲ್ಲಿ ಹಾಜರಾಗುವನು. ಆದರೆ ಅವನು ಅಲ್ಲಿ 'ದಿವಾಳಿ' ಎಂದು ಘೋಷಿಸಲ್ಪಡುವನು. ಕೇವಲ ದಿವಾಳಿ ಎಂದು ಮಾತ್ರವಲ್ಲ, ಶಿಕ್ಷಾರ್ಹ ನಾದ ದಿವಾಳಿಕೋರ. ಕಾರಣವೇನೆಂದರೆ ಅವನ ಆರಾಧನೆಗಳು ಅವನ ಜೀವನದಲ್ಲಿ ಸುಧಾರಣೆಯನ್ನು ಮಾಡಿರಲಿಲ್ಲ, ಸಹಜೀವಿಗಳೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಲು ಪ್ರೇರೇಪಿಸಿರಲಿಲ್ಲ, ಅವರ ಹಕ್ಕುಗಳನ್ನು ಕಸಿಯುವುದರಿಂದ ತಡೆಯಲಿಲ್ಲ, ಇವುಗಳೆಲ್ಲವೂ ಆರಾಧನೆಗಳನ್ನು ಕಡ್ಡಾಯಗೊಳಿಸಿರುವುದರ ಹಿಂದಿರುವ ಉದ್ದೇಶಗಳಾಗಿವೆ. ನಮಾಝ್, ಉಪವಾಸಗಳನ್ನು ಸರಿಯಾಗಿ ನೆರವೇರಿಸಿದರೂ ಅದರಿಂದ ಯಾವುದೇ ಪ್ರೇರಣೆಯನ್ನು ಪಡೆಯದೆ, ಸಹಜೀವಿಗಳೊಂದಿಗೆ ಉತ್ತಮ ರೀತಿಯಲ್ಲಿ ವ್ಯವಹರಿಸದೆ, ಅವರ ಜೀವನ, ಸಂಪತ್ತು, ಅಭಿಮಾನವನ್ನು ಗೌರವಿಸದೆ ಜೀವಿಸಿದ್ದು, ಕಳ್ಳತನ ಮಾಡಿ, ಆಕ್ರಮಿಸಿ, ಬಂಡವಾಳವನ್ನು ಸಂಗ್ರಹಿಸುವುದಕ್ಕೆ ಸಮಾನವಾಗಿದೆ. ಅಕ್ರಮವಾಗಿ ಸಂಪಾದಿಸಿದ ಬಂಡವಾಳ ನ್ಯಾಯಾಧೀಶನ ಮುಂದೆ ಹೋದಾಗ ಅದರ ನಿಜವಾದ ಒಡೆಯರಿಗೆ ಹಿಂದಿರುಗಿಸಿ ಕೊಡಬೇಕಾಗಿ ಬರುವುದಲ್ಲವೇ? ಸಹಜೀವಿಗಳ ಮೇಲೆ ಅಕ್ರಮವೆಸಗುತ್ತಾ ಆರಾಧನಾ ಕರ್ಮಗಳೆಂಬ ಬಂಡವಾಳದೊಂದಿಗೆ ಅಲ್ಲಾಹನ ಮುಂದೆ ಹಾಜರಾಗುವ ಸತ್ಕರ್ಮಗಳ

ಅವಸ್ಥೆಯೂ ಇದೇ ರೀತಿಯಾಗಿರುವುದು. ಅವರ ಸತ್ಕರ್ಮದ ಸತ್ಫಲವನ್ನು ಒಂದೊಂದಾಗಿ ಅವರಿಂದ ಅನ್ಯಾಯಕ್ಕೊಳಗಾದ ವ್ಯಕ್ತಿಗಳಿಗೆ ಅಲ್ಲಾಹನು ಹಂಚಿ ಬಿಡುವನು. ಹೀಗೆ ಅವನ ಸತ್ಕರ್ಮಗಳೆಲ್ಲ ಮುಗಿಯುವುದು. ಇತರರ ಹಕ್ಕುಗಳು ಇನ್ನೂ ಬಾಕಿ ಉಳಿದುಬಿಟ್ಟರೆ ಅನ್ಯಾಯಕ್ಕೊಳಗಾದ ವ್ಯಕ್ತಿಯ ಪಾಪಗಳನ್ನು ಅವನ ಮೇಲೆ ಹೊರಿಸಲಾಗುವುದು. ಈ ರೀತಿ ಸ್ವಯಂ ಪಾಪಗಳ ಜೊತೆಗೆ ಇತರರ ಪಾಪಗಳಿಗೂ ಅವನು ಶಿಕ್ಷೆಯನ್ನು ಅನುಭವಿಸಬೇಕಾಗಿ ಬರುವುದು.

ಕಡ್ಡಾಯ ಆರಾಧನೆಗಳ ಜೊತೆಗೆ ಐಚ್ಛಿಕ ಆರಾಧನೆಗಳಲ್ಲೂ ದಿಕ್ರ್, ದುವಾಗಳಲ್ಲೂ ಬಹಳ ಕಾಳಜಿಯಿರುವ ಅನೇಕ ಭಕ್ತರಿರುತ್ತಾರೆ. ಜನರೊಂದಿಗೆ ಉತ್ತಮ ರೀತಿಯಲ್ಲಿ ವ್ಯವಹರಿಸುವುದರ ಮಹತ್ವವನ್ನು ಅವರು ಪರಿಗಣಿಸುವುದಿಲ್ಲ, ವ್ಯಾಪಾರ, ವ್ಯವಹಾರದಲ್ಲಿ ವಂಚನೆಯನ್ನು ಮಾಡುವ ಆರಾಧಕರಿದ್ದಾರೆ. ಕೆಲವರ ಭಯಭಕ್ತಿ, ಆರಾಧನೆಗಳು ಇತರ ವ್ಯಕ್ತಿಗಳ ಅಭಿಮಾನವನ್ನು ಹಾನಿ ಮಾಡುವುದರಿಂದ ಅವರನ್ನು ತಡೆಯುವುದಿಲ್ಲ, ಇಂತಹ ಅಭ್ಯಾಸವಿರುವ ಜನರಿಗೆ ಈ ಪ್ರವಾದಿವಚನವು ಕಠಿಣ ಎಚ್ಚರಿಕೆಯ ರೂಪದಲ್ಲಿದೆ. ಅಂದರೆ ಸಹಜೀವಿಗಳೊಂದಿಗೆ ಅನ್ಯಾಯವೆಸಗುವ ವ್ಯಕ್ತಿಗಳ ಆರಾಧನೆಗಳು ಸೃಷ್ಟಿಕರ್ತನ ಮುಂದೆ ಯಾವ ಪ್ರಯೋಜನಕ್ಕೂ ಬರುವುದಿಲ್ಲ.



# 58. ಯಥಾ ಪ್ರಜಾ ತಥಾ ರಾಜಾ

عَنْ ابن إسحاق رَضِيَ اللّٰهُ عَنْهُ قَالَ قَالَ رَسُولُ اللّٰهِ ﷺ كَمَا تَكُونُونَ كَذَٰلِكَ يُؤَمَّرُ عَلَيْكُمْ. (مشكوة)

ಇಬ್ನು ಇಸ್ಹಾಕ್(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿದರು. ''ನೀವು ಹೇಗಿರುವಿರೋ, ಅದನ್ನು ಅನುಸರಿಸಿ ನಿಮ್ಮ ಮೇಲೆ ನಿಯುಕ್ತರಾಗಿರುವ ನಾಯಕತ್ವ ಇರುತ್ತದೆ.'' (ಮಿಶ್ಕಾತ್)

ಸಂಸ್ಕೃತ ಭಾಷೆಯಲ್ಲಿ ಒಂದು ಹೇಳಿಕೆಯಿದೆ. 'ಯಥಾ ರಾಜಾ ತಥಾ ಪ್ರಜಾ' .ರಾಜನು ಹೇಗಿರುತ್ತಾನೋ ಅದರಂತೆಯೇ ಪ್ರಜೆಗಳೂ ಇರುತ್ತಾರೆ. ರಾಜನು ಒಳ್ಳೆಯವನಾಗಿದ್ದರೆ, ಪ್ರಜೆಗಳೂ ಒಳ್ಳೆಯವರಾಗಿರುತ್ತಾರೆ. ತದ್ವಿರುದ್ಧವಾಗಿದ್ದರೆ ಅದೇ ರೀತಿ ಇರುವುದು. ಆಡಳಿತ ಗಾರರು ಕೆಟ್ಟವರಾಗಿದ್ದರೆ ಆಡಳಿತವೂ ಕೆಡುವುದು. ಆಡಳಿತವು ಕೆಟ್ಟು ಹೋದರೆ ಸಮಾಜದಲ್ಲಿ ಅವ್ಯವಸ್ಥೆ, ಅಶಾಂತಿ, ಅರಾಜಕತೆ ಉಂಟಾಗುವುದು. ಇದು ಎಲ್ಲರಿಗೂ ತಿಳಿದಿರುವ ವಿಷಯವೇ ಆಗಿದೆ. ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಅರಾಜಕತೆ, ಅಶಾಂತಿ, ಅವ್ಯವಸ್ಥೆ ಉಂಟಾದಾಗ ಆಡಳಿತಗಾರರ ವಿರುದ್ಧ ಪ್ರಕ್ಷೋಭೆಗಳುಂಟಾಗುತ್ತವೆ. ಹಾಗೆ ಆಡಳಿತವು ಬದಲಾಗುತ್ತದೆ. ಪ್ರಜೆಗಳಿಗೆ ಸ್ವಾತಂತ್ರ್ಯವಿಲ್ಲದ ಸರ್ವಾಧಿಕಾರಿಗಳ ಆಳ್ವಿಕೆಯಿರುವಲ್ಲಿಯೂ ಜನರು ಅನ್ಯಾಯ, ಮರ್ದನವನ್ನು ಸಹಿಸಿ, ಅದರಿಂದ ಮುಕ್ತರಾಗಲು ಸಂದರ್ಭವನ್ನು ಕಾಯುತ್ತಾ ನಿಶ್ಶಬ್ದರಾಗಿ ಜೀವಿಸಬೇಕಾಗುತ್ತದೆ.

ಈ ಎರಡೂ ವಿಧದ ಜನರಲ್ಲಿಯೂ ಒಂದು ರೀತಿಯ ಸಂಕಲ್ಪವಿದೆ. ತಮ್ಮ ಕಷ್ಟ ಕಾರ್ಪಣ್ಯಗಳಿಗೆಲ್ಲ ಈ ಆಡಳಿತಗಾರರೇ ಕಾರಣ ಎಂಬುದಾಗಿ ಅವರು ಭಾವಿಸುತ್ತಾರೆ. ಪ್ರತ್ಯಕ್ಷವಾಗಿ ಅದು ಸರಿಯಾಗಿದೆ. ಸರಳವಾದ ಒಂದು ವಾಸ್ತವಿಕತೆ. ಈ ಮನೋಭಾವದ ಅಡಿಪಾಯದಲ್ಲಿಯೇ ಪ್ರಸ್ತುತ ಇರುವ ಸರಕಾರದ ವಿರುದ್ಧ ಹೋರಾಟ ನಡೆಯುತ್ತದೆ. ಆದರೆ ಈ ರೀತಿಯ ಹೋರಾಟಗಳು ಹೆಚ್ಚುವುದರಿಂದ ಸಮಾಜದಲ್ಲಿ ಅನ್ಯಾಯ ಮತ್ತು ಕಷ್ಟ ಕಾರ್ಪಣ್ಯಗಳು ಕೊನೆಗೊಂಡಿವೆಯೇ? ಚುನಾವಣೆಗಳ ಮೂಲಕ, ಜನರ ಪ್ರತಿಭಟನೆಗಳ ಮೂಲಕ ಭೂಮಾಲಕರನ್ನು ಹೊಡೆದುರುಳಿಸುವುದರಿಂದ, ವಿದೇಶಿಯರ

ಮಧ್ಯ ಪ್ರವೇಶದಿಂದ ಎಷ್ಟೋ ಸರಕಾರಗಳು ಬದಲಾಗುತ್ತದೆ. ನಮ್ಮ ದೇಶದಲ್ಲಿಯೇ ಐದು ವರ್ಷಗಳಿಗೊಮ್ಮೆ ನಡೆಯುವ ಚುನಾವಣೆಗಳ ಮೂಲಕ ರಾಷ್ಟ್ರ ಮಟ್ಟದಲ್ಲಿ, ಪ್ರಾದೇಶಿಕ ಮಟ್ಟದಲ್ಲಿ ಜನ ಪ್ರತಿನಿಧಿಗಳು ಬದಲಾಗುತ್ತಾ ಇರುತ್ತಾರೆ. ಆದರೂ ನಮ್ಮ ಸಮಸ್ಯೆಗಳೆಲ್ಲಾ ಪರಿಹರಿಸಲ್ಪಟ್ಟಿವೆಯೇ? ಕಡಿಮೆಯಾದರೂ ಆಗಿದೆಯೇ? ಇಲ್ಲ, ಇಷ್ಟು ಮಾತ್ರವಲ್ಲ, ಹಳೆಯ ಸಮಸ್ಯೆಗಳು ಹೆಚ್ಚುತ್ತಾ, ಹೆಚ್ಚು ಜಟಿಲವಾಗುತ್ತಾ ಹೋಗುವುದರ ಜೊತೆಗೆ ಹೊಸ ಹೊಸ ಸಮಸ್ಯೆಗಳು ಹುಟ್ಟಿಕೊಳ್ಳುತ್ತಾ ಹೋಗುತ್ತಿವೆ. ಅವ್ಯವಸ್ಥೆ, ಅಸಮಾನತೆ, ತಾರತಮ್ಯ, ಅನ್ಯಾಯ ಎಲ್ಲವೂ ಮುಂದುವರಿಯುತ್ತಲೇ ಇದೆ. 'ಯಾವ ಸರಕಾರ ಬಂದರೂ ರಾಗಿ ಬೀಸೋದು ತಪ್ಪುವುದಿಲ್ಲ' ಎಂಬ ಹಳೆಯ ಹೇಳಿಕೆ ಇದೆ. ಯಾವ ಸರಕಾರ ಅಧಿಕಾರಕ್ಕೆ ಬಂದರೂ ಬಡವ ರಾಗಿ ಬೀಸುವುದು ತಪ್ಪುವುದಿಲ್ಲ, ಅಂದರೆ ಬಡವರು ಬಡವರಾಗಿಯೇ ಉಳಿಯುತ್ತಾರೆ. ಇದರ ನಿಜವಾದ ಅರ್ಥವನ್ನು ಜನರಿಂದು ಮರೆತು ಬಿಟ್ಟಿದ್ದಾರೆ. ಯಾವ ಸರಕಾರ ಬಂದರೂ ಬಡತನ ನಿವಾರಣೆ ಆಗುತ್ತಿಲ್ಲ, ಅವರ ಅವಸ್ಥೆ ಅದೇ ರೀತಿಯಲ್ಲಿ ಮುಂದುವರಿಯುತ್ತದೆ.

ಒಳ್ಳೆಯವರೆಂದು ಭಾವಿಸಿ ಜನರು ವಿಶ್ವಾಸವಿಟ್ಟು ಹೊಸ ಹೊಸ ಜನಪ್ರತಿನಿಧಿಗಳನ್ನು ಬದಲಾಯಿಸುತ್ತಾ ಹೋದರೂ ನಾಡಿನ ಕಷ್ಟಕಾರ್ಪಣ್ಯಗಳು ಪರಿಹಾರವಾಗದೆ ಉಳಿದಿರುವುದಕ್ಕೆ ಕಾರಣವೇನು? ಈ ಪ್ರಶ್ನೆಯನ್ನು ಮುಂದಿರಿಸಿದಾಗ 'ಯಥಾ ರಾಜ ತಥಾ ಪ್ರಜಾ' ಎಂಬ ಹೇಳಿಕೆಯು ಅಷ್ಟು ಸರಳವಲ್ಲ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ವಿಷಯವು ಹೀಗಿದ್ದರೆ, ಜನರ ದೃಷ್ಟಿಯಲ್ಲಿ ಉತ್ತಮ ವ್ಯಕ್ತಿಯಾಗುವ ರಾಜನು ಆಡಳಿತ ವಹಿಸಿದ ಕೂಡಲೇ ರಾಜ್ಯದಲ್ಲಿ ನ್ಯಾಯ, ನೀತಿ, ಸಮೃದ್ಧಿಯು ತುಂಬಿ ತುಳುಕಬೇಕಿತ್ತಲ್ಲವೇ? ಹಾಗೆ ಸಂಭವಿಸುವುದಿಲ್ಲ, ಯಾವ ರಾಜರಿಂದಲೂ ಅದು ಸಾಧ್ಯವಾಗುವುದಿಲ್ಲ ಅಥವಾ ಅದು ಸಾಧ್ಯವಾಗಿಸುವ ಯಾರಾದರೂ ಇದ್ದರೆ, ಅಂತಹವರನ್ನು ರಾಜರನ್ನಾಗಿಸಲು ಜನರಿಂದ ಸಾಧ್ಯವಾಗುತ್ತಿಲ್ಲ.

ಆರಂಭದಲ್ಲಿ ಪ್ರಸ್ತಾಪಿಸಿರುವ ಪ್ರವಾದಿ(ಸ) ವಚನದ ಮಹತ್ವವು ಇಲ್ಲಿ ಅರ್ಥವಾಗುತ್ತದೆ. ಇದು ಈ ಮೊದಲು ಹೇಳಿದ ಸಂಸ್ಕೃತದ ಹೇಳಿಕೆಗೆ ತದ್ವಿರುದ್ಧವಾದ ಹೇಳಿಕೆಯಾಗಿದೆ. 'ಯಥಾ ಪ್ರಜಾ ತಥಾ ರಾಜಾ' ಸರಕಾರವು ಉತ್ತಮವಾಗಿದ್ದರೆ, ಸಮಾಜವು ಉತ್ತಮವಾಗುವುದಿಲ್ಲ, ಸಮಾಜದಲ್ಲಿರುವ ವ್ಯಕ್ತಿಗಳ ಸ್ವಭಾವವನ್ನನುಸರಿಸಿ ಸರಕಾರವಿರುತ್ತದೆ. ಸಮೂಹವು ಸ್ವತಃ ಒಳ್ಳೆಯವರದ್ದಾಗಿರದಿದ್ದರೆ, ನಮ್ಮ ಸರಕಾರವು ಉತ್ತಮವಾಗಬೇಕೆಂದು ಆಶೆಪಟ್ಟು ಏನೂ ದೊಡ್ಡ ಸಾಧನೆಯಾಗುವುದಿಲ್ಲ, ಜನಸಾಮಾನ್ಯನು ಹಾಲಾಗಿದ್ದರೆ, ಅದರ ನಾಯಕ ಬೆಣ್ಣೆಯಂತೆ, ಕೆಟ್ಟು ಹೋದ ಹಾಲನ್ನು ಎಷ್ಟು ಕಡೆದರೂ ಒಳ್ಳೆಯ ಬೆಣ್ಣೆ ಸಿಗಲು ಸಾಧ್ಯವಿಲ್ಲ, ಭ್ರಷ್ಟಾಚಾರ, ಅನ್ಯಾಯ ಇಲ್ಲದ ಒಳ್ಳೆಯ ಆಡಳಿತವನ್ನು ಆಗ್ರಹಿಸುವ ಪ್ರಜೆಗಳು, ಅದಕ್ಕೆ ವಿರುದ್ಧವಾಗಿ ಮತ ಚಲಾಯಿಸಿದರೆ ಮಾತ್ರ ಸಾಲದು. ನ್ಯಾಯ ಪಾಲಿಸುವ, ಪ್ರಜೆಗಳನ್ನು ಪ್ರೀತಿಸುವ ಆಡಳಿತಗಾರರನ್ನು ಆರಿಸುವುದರಿಂದ ಮಾತ್ರ ಅದು ಸಾಧ್ಯವಾಗುವುದಿಲ್ಲ, ಸ್ವತಃ ಅನ್ಯಾಯ, ಅನೀತಿಯನ್ನು ದ್ವೇಷಿಸಲು ಮತ್ತು ದೂರೀಕರಿಸಲು ಸಿದ್ಧರಾಗಿರಬೇಕು. ಪರಿಸ್ಥಿತಿ ತನಗೆ ವಿರುದ್ಧ ವಾದಾಗ ಕೆಟ್ಟದೆಂದೂ ಅನುಕೂಲಕರವಾದಾಗ ಸ್ವೀಕಾರಾರ್ಹವೆಂದೂ ಭಾವಿಸಬಾರದು.

ದೌರ್ಭಾಗ್ಯವಶಾತ್ ಇದು ನಮ್ಮ ಇಂದಿನ ಅವಸ್ಥೆಯಾಗಿದೆ. ಮಹಾ ಚುನಾವಣೆಗಳು, ಸಣ್ಣ ಚುನಾವಣೆಗಳು ಮಧ್ಯಂತರ ಚುನಾವಣೆಗಳು ನಡೆಯುತ್ತಲೇ ಇದ್ದರೂ ಒಂದು ಒಳ್ಳೆಯ ಸರಕಾರವನ್ನುಂಟು ಮಾಡಲು ನಮಗೆ ಸಾಧ್ಯವಾಗದಿರುವುದು ಇದೇ ಕಾರಣದಿಂದಾಗಿದೆ.

ಜನಸಾಮಾನ್ಯರ ಚಾರಿತ್ರ್ಯ, ಸ್ವಭಾವ, ಆಚರಣೆಗಳು, ನಿರೀಕ್ಷೆಗಳು, ಆಶೆಗಳು ಇವುಗಳನ್ನೇ ಸರಕಾರವು ಪ್ರತಿನಿಧೀಕರಿಸುತ್ತದೆ. ಸರಕಾರಕ್ಕೆ ಜನರನ್ನು ಶಿಕ್ಷಿಸಲು ಸಾಧ್ಯವಿದೆ. ಶಿಕ್ಷಣವನ್ನು ನೀಡಲಾಗುವುದಿಲ್ಲ, ಶಿಕ್ಷಣವು ಜನರಿಂದ ಸರಕಾರಕ್ಕೆ ಸಿಗಬೇಕಿದೆ. ರಾಜನು ಒಳ್ಳೆಯವನಾಗಿದ್ದರೆ ರಾಷ್ಟ್ರವು ಒಳ್ಳೆಯದಾಗುವುದಾದರೆ, ದೇವನು ಪ್ರವಾದಿಗಳಾಗಿ ರಾಜರುಗಳನ್ನೇ ಆಯ್ಕೆ ಮಾಡಿ ಕೊಳ್ಳುತ್ತಿದ್ದನು. ಆದರೆ ಪ್ರವಾದಿಗಳೆಲ್ಲರೂ ಸಮಾಜದ ಕೆಳಸ್ತರದಿಂದ ಮೇಲೆ ಬಂದವರಾಗಿದ್ದಾರೆ. ಪ್ರವಾದಿಗಳ ಮೂಲಕ ಒಳ್ಳೆಯ ಸಮಾಜ ಉಂಟಾಗುವುದು. ಒಳ್ಳೆಯ ಸಮಾಜದಲ್ಲಿ ಒಳ್ಳೆಯ ಆಡಳಿತಗಾರನು ಇರುವುದು ಸಂಪ್ರದಾಯ. ಉತ್ತಮ ರಾಜನಿಗೆ ಉತ್ತಮ ರಾಜ್ಯ ಎಂದಲ್ಲ, ಉತ್ತಮ ರಾಜ್ಯಕ್ಕೆ ಉತ್ತಮ ರಾಜನಿರುವುದು ಎಂಬುದು ಸರಿಯಾದ ನಿಲುವು.

ರಾಜ್ಯದ ಒಳಿತಿನಲ್ಲಿ ರಾಜನಿಗೆ ಯಾವುದೇ ಪಾಲು ಇಲ್ಲವೆಂದಲ್ಲ, ಉತ್ತಮ ರಾಜ್ಯದಲ್ಲಿ ಕೆಟ್ಟ ರಾಜನು ಬಂದು ಬಿಟ್ಟರೆ ಆ ರಾಜ್ಯವು ಕೆಟ್ಟು ಹೋಗುವುದು. ಆದರೆ ಉತ್ತಮ ರಾಜ್ಯದಲ್ಲಿ ಕೆಟ್ಟ ರಾಜನು ಆಡಳಿತ ವಹಿಸುವುದು ವಿರಳವಾಗಿದೆ. ರಾಜ್ಯವು ಕೆಡುವಾಗಲೇ ರಾಜನೂ ಕೆಡಲಾರಂಭಿಸುತ್ತಾನೆ. ಕೆಟ್ಟ ರಾಜ್ಯದಲ್ಲಿ ಉತ್ತಮ ರಾಜನಿದ್ದರೆ, ಅದರಿಂದ ಕೆಲವು ಉತ್ತಮ ಬದಲಾವಣೆಗಳುಂಟಾಗಬಹುದು. ಆದರೆ ಅದು ಮುಂದುವರಿಯಲು ಮತ್ತು ಸಮಾಜವು ಸಂಪೂರ್ಣವಾಗಿ ಉತ್ತಮವಾಗಲು ಸಾಧ್ಯವಾಗಬೇಕು ಎಂದೇನಿಲ್ಲ, ರಾಜ್ಯವು ಕೆಟ್ಟು ಹೋಗದಿದ್ದರೆ ಒಳ್ಳೆಯ ರಾಜನೇ ಇರುವನು. ಕೆಟ್ಟ ಸಮಾಜದಲ್ಲಿ ಅವರ ದುಷ್ಕೃತ್ಯಗಳು, ದೌರ್ಬಲ್ಯಗಳು ಎಲ್ಲದಕ್ಕೂ ಅನುಕೂಲವಾಗಿರುವ ನೇತೃತ್ವವೇ ಬೆಳೆದು ಬರುವುದು. ಇದು ಈ ಪ್ರವಾದಿ ವಚನದ ಆಶಯವಾಗಿದೆ.

ಸಮಾಜದ ಒಳಿತಿಗೆ ಸರಕಾರ ಮತ್ತು ಸಾಮೂಹಿಕ ವ್ಯವಸ್ಥೆಗಳೆಲ್ಲವೂ ಒಳ್ಳೆಯದಾಗಿರ ಬೇಕಾದುದು ಅನಿವಾರ್ಯವಾಗಿದೆ. ಆದರೆ ಅದು ಉತ್ತಮವಾಗಬೇಕಿದ್ದರೆ ಸಮಾಜ ದಲ್ಲಿರುವ ವ್ಯಕ್ತಿಗಳಿಗೆ ಒಳಿತಿನೊಂದಿಗೆ ಆಸಕ್ತಿಯಿರಬೇಕು. ಸಮಾಜವು ಉತ್ತಮವಾಗುವುದು ಅದರಲ್ಲಿರುವ ಮನುಷ್ಯರ ಮನಸ್ಸಿನ ಸಂಸ್ಕರಣೆಯಿಂದಾಗಿದೆ. ಮನುಷ್ಯನ ಮನಸ್ಸಿನಲ್ಲಿ ಮುಖ್ಯವಾಗಿ ಮೊದಲು ಹೋರಾಟ ಆರಂಭವಾಗಬೇಕು. ಮನಸ್ಸಿನಲ್ಲಿ ಉಂಟಾಗುವ ಬದಲಾವಣೆಯಿಂದಲೇ ಒಳ್ಳೆಯ ವ್ಯಕ್ತಿಗಳು ಮತ್ತು ಉತ್ತಮ ಸಮಾಜ ನಿರ್ಮಾಣವಾಗುತ್ತದೆ. ಒಳ್ಳೆಯ ಸಮಾಜದಲ್ಲಿಯೇ ಒಳ್ಳೆಯ ಸರಕಾರವಿರುತ್ತದೆ.

**''ಯಾವ ಸಮುದಾಯವನ್ನೂ ಅದು ಸ್ವತಃ ಬದಲಾಗುವವರೆಗೆ ಅಲ್ಲಾಹನು ಅವರನ್ನು ಬದಲಾಯಿಸುವುದಿಲ್ಲ.''** (ಪವಿತ್ರ ಕುರ್‌ಆನ್)



# 59. ಜ್ಞಾನ ಸಂಪಾದನೆ: ಸ್ವರ್ಗಕ್ಕೆ ದಾರಿ

عن أبي سعيد الخدري قال قال رسول الله ﷺ لن يشبع المؤمن من خير يسمعه حتى يكون منتهاه الجنة. (ترمذی)

ಅಬೂ ಸಈದ್ ಖುದ್ರಿ(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳಿದರು. ''ವಿಶ್ವಾಸಿಗೆ ಒಳ್ಳೆಯದನ್ನು ಆಲಿಸಿ ಹೊಟ್ಟೆ ತುಂಬುವುದಿಲ್ಲ. ಅವನ ಅಂತಿಮ ತಾಣವು ಸ್ವರ್ಗವಾಗುವವರೆಗೆ.'' (ತಿರ್ಮಿದಿ)

ಜ್ಞಾನ ಸಂಪಾದನೆಯ ಕುರಿತು ಇರುವ ಅನೇಕ ಹದೀಸ್‌ಗಳ ಪೈಕಿ ಇದೂ ಒಂದಾಗಿದೆ. ಒಬ್ಬ ಸತ್ಯವಿಶ್ವಾಸಿಯ ಜ್ಞಾನ ಸಂಪಾದನೆಯು ಎಂದೂ ಕೊನೆಗೊಳ್ಳುವುದಿಲ್ಲ ಎಂಬುದನ್ನು ಈ ಪ್ರವಾದಿ ವಚನವು ನಮಗೆ ಕಲಿಸುತ್ತದೆ. ಮರಣದವರೆಗೂ ಅದು ಮುಂದುವರಿಯುವುದು, ಮುಂದುವರಿಯಬೇಕು, ಮುಂದುವರಿಯಬೇಕಾದುದು ಅತೀ ಅಗತ್ಯ. 'ಹೊಟ್ಟೆ ತುಂಬುವುದಿಲ್ಲ' ಎಂಬ ಮಾತು ಈ ವಿಷಯವನ್ನೇ ತಿಳಿಸುತ್ತದೆ. ಹೊಟ್ಟೆ ತುಂಬಿದ ಬಳಿಕ ಆಹಾರವು ಅನಗತ್ಯವೆನಿಸುತ್ತದೆ. ಹೊಟ್ಟೆತುಂಬದವನಿಗೆ ಅತೀ ಅಗತ್ಯವೆನಿಸುತ್ತದೆ. ಸತ್ಯವಿಶ್ವಾಸಿಗೆ ಜ್ಞಾನಾರ್ಜನೆಯಿಂದ ಹೊಟ್ಟೆ ತುಂಬುವುದಿಲ್ಲ ಎಂಬುದರ ಅರ್ಥವೇನೆಂದರೆ ವಿಶ್ವಾಸಿಗೆ ಜ್ಞಾನಾರ್ಜನೆ ಸಾಕಾಗಿ, ಇನ್ನು ಕಲಿಯುವುದು ಅನಗತ್ಯ ಎಂಬ ಅವಸ್ಥೆ ಉಂಟಾಗುವುದಿಲ್ಲ. ಸದಾ ಅದು ಅವನ ಆಗತ್ಯವೇ ಆಗಿರುತ್ತದೆ.

''ಒಳ್ಳೆಯದನ್ನು ಆಲಿಸುವುದು'' ಎಂದು ಈ ವಚನದಲ್ಲಿ ಹೇಳಲಾಗಿದೆ. ಹಳೆಯ ಕಾಲದಲ್ಲಿ ಶಿಕ್ಷಣಗಳಿಸಲು, ಮದರಸಗಳಾಗಲೀ, ಪಾಠಪುಸ್ತಕಗಳಾಗಲೀ ಇರಲಿಲ್ಲ. ಗುರುಗಳ ಬಾಯಿಯಿಂದ ಕೇಳಿ ಕಲಿಯುವಂತಹ ಸಂಪ್ರದಾಯವಿತ್ತು. ಈ ನಿಟ್ಟಿನಲ್ಲಿ ಒಳ್ಳೆಯದನ್ನು ಆಲಿಸುವುದು ಎಂದಾಗುತ್ತದೆ. ಆದರೆ ಇಲ್ಲಿ ಕೇವಲ ಔಪಚಾರಿಕವಾಗಿ ಗುರುವರ್ಯರ ಉಪದೇಶವನ್ನು ಮಾತ್ರ ಉಪದೇಶಿಸಲಾಗಿಲ್ಲ. ಯಾವುದಾದರೂ ಪ್ರತ್ಯೇಕ ಪಾಠಶಾಲೆಗಳ ಮೂಲಕ, ಗುರುಗಳ ಮೂಲಕ, ಪಾಠಪುಸ್ತಕಗಳ ಮೂಲಕ ಕಲಿತರೆ ಮಾತ್ರ ಅದು ಜ್ಞಾನ ಸಂಪಾದನೆ ಎಂಬ ಕಲ್ಪನೆಯು ಇಸ್ಲಾಮಿಗೆ ಅಪರಿಚಿತವಾದುದಾಗಿದೆ. ತನಗೆ ತಿಳಿಯದ ವಿಷಯವು ಅದು ಎಲ್ಲಿಂದ ದೊರೆತರೂ ಅದು ಜ್ಞಾನ ಸಂಪಾದನೆಯಾಗಿದೆ ಎಂಬ ಕಾರಣಕ್ಕ

ಆದರಣೀಯವಾಗಿದೆ, ಎಂಬುದು ಇಸ್ಲಾಮಿನ ದೃಷ್ಟಿಕೋನವಾಗಿದೆ. ಆದುದರಿಂದ ವಿದ್ವಾಂಸರ ಮೂಲಕವಾಗಲಿ, ಪಾಮರರಿಂದಾಗಲೀ, ದಾಸರಿಂದಾಗಲೀ, ಮಾಲಿಕರಿಂದಾಗಲೀ, ಯಾರ ಮೂಲಕ ಸಿಕ್ಕಿದರೂ ಜ್ಞಾನವನ್ನು ಸ್ವೀಕರಿಸಬೇಕು. ತಿರ್ಮಿದಿಯಲ್ಲಿ ಬಂದಿರುವ ಇನ್ನೊಂದು ಪ್ರವಾದಿ ವಚನದಲ್ಲಿ ಈ ರೀತಿ ಇದೆ. ''ಜ್ಞಾನ ಎಂಬುದು ವಿಶ್ವಾಸಿಯ ಕಳೆದು ಹೋದ ಸಂಪತ್ತಾಗಿದೆ. ಎಲ್ಲಿಂದ ದೊರೆತರೂ ಅವನದಕ್ಕೆ ಅರ್ಹನಾಗಿರುತ್ತಾನೆ.''

ವಿದ್ಯಾರ್ಜನೆಯನ್ನು ಅತ್ಯಂತ ಪುಣ್ಯವಿರುವ ಆರಾಧನೆಯೆಂದು ಇಸ್ಲಾಮ್ ಪರಿಗಣಿಸುತ್ತದೆ. ವಿದ್ಯಾರ್ಜನೆಯಲ್ಲಿ ತೊಡಗಿಕೊಂಡವನು ಅಲ್ಲಾಹನ ಮಾರ್ಗದಲ್ಲಿರುತ್ತಾನೆ. ಅಂದರೆ ಸ್ವರ್ಗದ ಮಾರ್ಗದಲ್ಲಿರುತ್ತಾನೆ. ಒಂದು ಪ್ರವಾದಿ ವಚನದಲ್ಲಿ ಈ ರೀತಿ ಬಂದಿದೆ. ''ವಿದ್ಯೆ ಗಳಿಸಲಿಕ್ಕಾಗಿ ಹೊರಟ ವ್ಯಕ್ತಿ ಅವನು ಹಿಂತಿರುಗಿ ಬರುವವರೆಗೆ ಅಲ್ಲಾಹನ ಮಾರ್ಗದಲ್ಲಿರುತ್ತಾನೆ.'' ವಿದ್ಯೆ ಗಳಿಸುವುದು ಪ್ರತಿಯೊಬ್ಬ ಸತ್ಯವಿಶ್ವಾಸಿಯ ಕರ್ತವ್ಯವಾಗಿರುತ್ತದೆ ಎಂದೂ ವಿದ್ಯಾರ್ಜನೆಗಾಗಿ ಚೀನಾ ದೇಶಕ್ಕೆ ಹೋಗಬೇಕಾದರೂ ಅದನ್ನು ಗಳಿಸಬೇಕು ಎಂದು ಆದೇಶಿಸಿರುವ ಪ್ರವಾದಿ ವಚನಗಳು ಚಿರಪರಿಚಿತವಾಗಿವೆಯಲ್ಲವೇ?

ವಿದ್ಯಾಭ್ಯಾಸ ಗಳಿಸುವ ಕರ್ತವ್ಯವನ್ನು ಕೆಲವರು ಕೇವಲ ಧಾರ್ಮಿಕ ವಿದ್ಯಾಭ್ಯಾಸಕ್ಕೆ ಸೀಮಿತಗೊಳಿಸಿಕೊಂಡಿರುವರು. ಆದರೆ ಇದು ನ್ಯಾಯ ಸಮ್ಮತವಲ್ಲ. ಮನುಷ್ಯನ ಐಹಿಕ ಮತ್ತು ಪಾರತ್ರಿಕ ಜೀವನಕ್ಕೆ ಅವಶ್ಯಕವಾದ ಎಲ್ಲಾ ಜ್ಞಾನವನ್ನು ಗಳಿಸಬೇಕೆಂದು ಪ್ರವಾದಿ(ಸ) ಸಮುದಾಯದೊಂದಿಗೆ ಆದೇಶಿಸಿರುವರು.

ಪ್ರವಾದಿ(ಸ)ರ ಪ್ರಮುಖ ಅನುಯಾಯಿಗಳ ಪೈಕಿ ಓರ್ವರಾಗಿರುವ ಮುಆದ್ ಬಿನ್ ಜಬಲ್(ರ) ವಿದ್ಯಾಭ್ಯಾಸದ ಬಗ್ಗೆ ಮಾಡಿರುವ ಉಪನ್ಯಾಸವನ್ನು ಇಬ್ನು ಅಬ್ದುಲ್ ಬರ್ರ್ ಉಲ್ಲೇಖಿಸಿರುವರು.

ನೀವು ವಿದ್ಯಾಭ್ಯಾಸ ಗಳಿಸಿರಿ. ವಿದ್ಯಾಭ್ಯಾಸವು ದೇವಭಯವಾಗಿದೆ. ಜ್ಞಾನವನ್ನು ಗಳಿಸುವುದು ಎಂಬುದೇ ದೇವಾರಾಧನೆಯಾಗಿದೆ. ಪರಸ್ಪರ ಜ್ಞಾನವನ್ನು ಹಂಚಿಕೊಳ್ಳುವುದು ದೇವಸ್ಮರಣೆಯಾಗಿದೆ. ಜಿಹಾದ್ ವೈಜ್ಞಾನಿಕ ಸಂಶೋಧನೆಯಾಗಿದೆ. ಅರಿವಿಲ್ಲದವರಿಗೆ ವಿದ್ಯೆಯನ್ನು ನೀಡುವುದು ದಾನವಾಗಿದೆ. ಅರ್ಹರಿಗೆ ವಿದ್ಯೆಯನ್ನು ನೀಡುವುದು ಪುಣ್ಯ ಕರ್ಮವಾಗಿದೆ. ಏಕೆಂದರೆ ಜ್ಞಾನವು ಮಿತಿಮೇರೆಗಳನ್ನು ತಿಳಿಸಿಕೊಡುತ್ತದೆ. ಸ್ವರ್ಗದ ಆಕಾಂಕ್ಷಿಗಳಿಗಿರುವ ದಾರಿದೀಪ ಇದುವೇ ಆಗಿದೆ. ಜ್ಞಾನವು ಏಕಾಂತದಲ್ಲಿ ಒಡನಾಡಿಯೂ ಮಾರ್ಗದರ್ಶಕವೂ ಆಗಿರುವುದು. ವಿದೇಶದಲ್ಲಿ ಅದು ನಿಮಗೆ ಸಹ ಯಾತ್ರಿಕನಂತೆ. ಸುಖ ದುಃಖಗಳಲ್ಲಿ ವಿದ್ಯೆಯೇ ನಿಮಗೆ ಮಾರ್ಗದರ್ಶಕವಾಗಿರುತ್ತದೆ. ಜ್ಞಾನವು ಶತ್ರುಗಳ ಮುಂದೆ ಆಯುಧವಾಗಿದೆ. ಮಿತ್ರರ ಮುಂದೆ ನಿಮ್ಮ ಪಾಲಿಗೆ ಅಲಂಕಾರವಾಗಿದೆ. ಜ್ಞಾನದ ಕಾರಣದಿಂದಾಗಿ ಅಲ್ಲಾಹನು ಕೆಲವರನ್ನು ಶ್ರೇಷ್ಠರನ್ನಾಗಿಸುತ್ತಾನೆ. ಅವರನ್ನು ಧಾರ್ಮಿಕ ನಾಯಕರನ್ನಾಗಿಯೂ, ನೇತಾರರಾಗಿಯೂ ಮಾಡುತ್ತಾನೆ. ಅವರ ಪರಂಪರೆ ಮತ್ತು

ಕರ್ಮಗಳು ಅನುಸರಿಸಲ್ಪಡುತ್ತದೆ. ನಿರಂತರ ಮುಂದುವರಿಯುತ್ತದೆ. ಅವರ ಅಭಿಪ್ರಾಯಗಳು ನಂಬಲರ್ಹವೆಂದು ಪರಿಗಣಿಸಲ್ಪಡುವುದು. ದೇವಚರರೂ ಅವರ ಒಡನಾಡಿಗಳಾಗ ಬಯಸುವರು. ಅಂತಹ ವ್ಯಕ್ತಿಗಳಿಗೆ ದೇವಚರರು ತಮ್ಮ ರೆಕ್ಕೆಗಳನ್ನು ಚಾಚುವರು. ಹಸಿಯಾಗಿರುವ, ಒಣಗಿರುವ ಎಲ್ಲಾ ವಸ್ತುಗಳು, ಸಮುದ್ರದ ಮೀನುಗಳು, ಮತ್ತಿತರ ಜೀವಿಗಳು, ನೆಲದ ಮೇಲಿರುವ ಕ್ರೂರ ಜಂತುಗಳು, ಸರ್ಪಗಳೆಲ್ಲವೂ ಅವರಿಗಾಗಿ ಪ್ರಾರ್ಥಿಸುತ್ತಿರುವುದು. ಕಾರಣವೆಂದರೆ ಅಜ್ಞಾನ ತುಂಬಿದ ಮನಸ್ಸಿನ ಜೀವವೇ ಜ್ಞಾನವಾಗಿದೆ. ಗಾಢಾಂಧಕಾರದಲ್ಲಿ ಕಣ್ಣಿಗೆ ಬೆಳಕು, ಜ್ಞಾನದ ಕಾರಣದಿಂದಲೇ ದೇವನದಾಸನು ಸಜ್ಜನ ವ್ಯಕ್ತಿಯಾಗುತ್ತಾನೆ. ಉನ್ನತ ಸ್ಥಾನವನ್ನು ಗಳಿಸುತ್ತಾನೆ. ಜ್ಞಾನ ಗಳಿಸಲಿಕ್ಕಾಗಿ ಚಿಂತನೆ ನಡೆಸುವುದು ಉಪವಾಸಕ್ಕೆ ಸಮಾನವಾಗಿದೆ. ಕಲಿಕೆಯು ರಾತ್ರಿಯ ನಮಾಝಿಗೆ ಸಮಾನವಾಗಿದೆ. ಜ್ಞಾನದ ಕಾರಣದಿಂದಾಗಿ ಕುಟುಂಬ ಸಂಬಂಧಗಳು ಭದ್ರವಾಗುತ್ತದೆ. ಮಿತಿಮೇರೆಗಳು ಸರಿಯಾಗಿ ತಿಳಿಯುತ್ತದೆ. ಜ್ಞಾನವು ನಾಯಕನಂತೆ. ಕರ್ಮವು ನೀತಿಯಾಗಿದೆ. ಭಾಗ್ಯವಂತರಿಗೆ ಅದು ಲಭಿಸುವುದು. ಭಾಗ್ಯಹೀನರಿಗೆ ಅದು ಲಭಿಸುವುದಿಲ್ಲ.



# 60. ಕುರ್‌ಆನ್ ಪಠಣದ ಮಹತ್ವ

عَنْ أَبِي هُرَيْرَةَ رَضِيَ اللهُ عَنْهُ عَنِ النبيِ ﷺ قَالَ وَمَنْ سَلَكَ طَرِيقًا يَلْتَمِسُ فِيهِ عِلْمًا سَهَّلَ اللهُ لَهُ بِهِ طَرِيقًا إِلَى الْجَنَّةِ وَمَا اجْتَمَعَ قَوْمٌ فِي بَيْتٍ مِنْ بُيُوتِ اللهِ يَتْلُونَ كِتَابَ اللهِ وَيَتَدَارَسُونَهُ بَيْنَهُمْ إِلَّا نَزَلَتْ عَلَيْهِمُ السَّكِينَةُ وَغَشِيَتْهُمُ الرَّحْمَةُ وَحَفَّتْهُمُ الْمَلَائِكَةُ وَذَكَرَهُمُ اللهُ فِيمَنْ عِنْدَهُ وَمَنْ بَطَّأَ بِهِ عَمَلُهُ لَمْ يُسْرِعْ بِهِ نَسَبُهُ. (مسلم)

ಅಬೂಹುರೈರಾ(ರ) ವರದಿ ಮಾಡುತ್ತಾರೆ. ಪ್ರವಾದಿ(ಸ) ಹೇಳುತ್ತಾರೆ. ''ಜ್ಞಾನ ಗಳಿಸುತ್ತಾ ಓರ್ವ ವ್ಯಕ್ತಿ ಒಂದು ಮಾರ್ಗವನ್ನು ಸ್ವೀಕರಿಸಿದರೆ ಆದರ ಮೂಲಕ ಅಲ್ಲಾಹನು ಅವನಿಗೆ ಸ್ವರ್ಗದ ಮಾರ್ಗವನ್ನು ಸುಗಮಗೊಳಿಸುವನು. ಮಸೀದಿಗಳಲ್ಲಿ ಅಲ್ಲಾಹನ ಪವಿತ್ರ ಕುರ್‌ಆನನ್ನು ಓದಿ ಅದರ ಬಗ್ಗೆ ಪರಸ್ಪರ ಚರ್ಚಿಸುತ್ತಾ, ಕಲಿಯುವವರ ಮೇಲೆ ಅಲ್ಲಾಹನ ಶಾಂತಿಯು ವರ್ಷಿಸುತ್ತಿರುತ್ತದೆ. ದೇವನ ಕರುಣೆಯು ಅವರನ್ನು ಸುತ್ತುವರೆಯುವುದು. ದೇವಚರರು ಅವರನ್ನು ಸುತ್ತುವರಿಯುವರು. ಅಲ್ಲಾಹನು ಅವನ ಸನ್ನಿಧಿಯಲ್ಲಿರುವವರೊಂದಿಗೆ ಇಂತಹವರನ್ನು ಪ್ರಶಂಸಿಸುವನು. ಆದರೆ ಕರ್ಮವನ್ನು ಹಿಂದಕ್ಕೆ ಹಾಕಿದವನನ್ನು ಗುರಿಯು ಮುಂದಕ್ಕೆ ಕೊಂಡೊಯ್ಯುವುದಿಲ್ಲ'' (ಮುಸ್ಲಿಮ್)

ವಿದ್ಯೆ ಗಳಿಸುವುದು, ವಿಶೇಷವಾಗಿ ಕುರ್‌ಆನ್ ಓದುವುದಕ್ಕೆ ಮತ್ತು ಅದರ ಪ್ರಕಾರ ಸತ್ಕರ್ಮಗಳನ್ನು ಮಾಡುವುದಕ್ಕೆ ಇರುವ ಮಹತ್ವವನ್ನು ಈ ಪ್ರವಾದಿ ವಚನದಲ್ಲಿ ತಿಳಿಸಲಾಗಿದೆ. ಇಲ್ಲಿ ಇಲ್ಮ್ (ವಿದ್ಯೆ) ಎಂದಿರುವುದರ ಉದ್ದೇಶ ತನಗೆ ಮತ್ತು ತನ್ನ ಪರಿಸರದಲ್ಲಿರುವವರಿಗೆ ಪ್ರಯೋಜನವಾಗುವ ಎಲ್ಲಾ ವಿದ್ಯೆಗಳಾಗಿವೆ. ವೈದ್ಯ ಶಾಸ್ತ್ರ , ಕರ್ಮ ಶಾಸ್ತ್ರ ಯಾವುದೂ ಆಗಿರಬಹುದು. ಯಾವುದೇ ರೀತಿಯ ವಿದ್ಯೆಯನ್ನು ಅರಿಯುವುದು ಮತ್ತು ಗಳಿಸುವುದು ಮನುಷ್ಯನ ಹಕ್ಕಾಗಿದೆ. ಜ್ಞಾನಾರ್ಜನೆಗೆ ಇಸ್ಲಾಮ್ ನೀಡಿರುವ ಪ್ರೇರಣೆ ಮತ್ತು ಉಪದೇಶಗಳನ್ನು ಅದರ ಸರಿಯಾದ ಅರ್ಥದಲ್ಲಿ ಸ್ವೀಕರಿಸಿ ಅನುಸರಿಸಿದ ಜನರಿದ್ದ ಕಾಲದಲ್ಲಿ, ಮುಸ್ಲಿಮರು ಜಗತ್ತಿನ ಅತ್ಯಂತ ಬುದ್ಧಿವಂತ, ಸಂಸ್ಕಾರಯುತ ಜನರಾಗಿದ್ದರು. ಬಳಿಕ ಬಂದ

ಕೆಲವು ಜನರು ''ಅಲ್‌ಇಲ್ಮ್'' ಎಂದರೆ ಕೇವಲ ಧರ್ಮದ ಬಗೆಗಿನ ಜ್ಞಾನ ಮಾತ್ರ ಎಂದೂ, ಧರ್ಮ ಜ್ಞಾನವೆಂದರೆ ಮುಖ್ಯವಾಗಿ ಕರ್ಮಶಾಸ್ತ್ರ, ಆ ಬಳಿಕ ಕುರ್‌ಆನ್ ಮತ್ತು ಸುನ್ನತ್ ಮಾತ್ರವೆಂದೂ ಪ್ರಚಾರಪಡಿಸಲು ಆರಂಭಿಸಿದರು. ಕೇವಲ ಲೌಕಿಕ ಶಿಕ್ಷಣದ ವಿಷಯದಲ್ಲಿ ಮಾತ್ರವಲ್ಲ, ಧರ್ಮದ ಬಗೆಗಿನ ಜ್ಞಾನದ ವಿಷಯದಲ್ಲೂ ಸಮುದಾಯವು ಬಹಳ ಹಿಂದಕ್ಕೆ ಬೀಳುವುದಕ್ಕೆ ಇದು ಕಾರಣವಾಯಿತು.

''ಸಲಕ ತರೀಕನ್'' ಎಂಬ ಮೂಲಪದವನ್ನು ''ಮಾರ್ಗ ಸ್ವೀಕರಿಸಿದರೆ'' ಎಂದು ಅನುವಾದಿಸಲಾಗಿದೆ. ಒಂದು ಮಾರ್ಗವನ್ನು ಕಂಡುಕೊಂಡು ಅದರ ಮೂಲಕ ಮುಂದುವರೆಯುವುದು ಎಂದು ಇದರ ಅರ್ಥ. ವಿದ್ಯಾಲಯ ಅಥವಾ ವಿದ್ವಾಂಸರನ್ನು ಹುಡುಕಿಕೊಂಡು ಹೋಗುವ ಪ್ರಯಾಣ. ವಿದ್ಯಾಲಯಗಳಲ್ಲಿ ಕುಳಿತು ಪಾಠವನ್ನು ಆಲಿಸುವುದು, ನೋಟ್ಸ್‌ಗಳನ್ನು ಬರೆಯುವುದು, ಗ್ರಂಥಗಳನ್ನು ಓದಿ ಕಲಿಯುವುದು, ಬಾಯಿಪಾಠ ಮಾಡುವುದು, ಜ್ಞಾನವನ್ನು ಹೆಚ್ಚಿಸಲಿಕ್ಕಾಗಿ ಚರ್ಚೆಗಳಲ್ಲಿ, ಸಂಶೋಧನೆಗಳಲ್ಲಿ ನಿರತನಾಗುವುದು ಮುಂತಾದ ಜ್ಞಾನ ಗಳಿಸುವುದಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನು ಈ ವಚನಗಳ ಮೂಲಕ ಉದ್ದೇಶಿಸಲಾಗಿದೆ. ಪ್ರಯೋಜನ ಪ್ರದವಾದ ಜ್ಞಾನವನ್ನು ಗಳಿಸಲಿಕ್ಕಾಗಿ ಸ್ವೀಕರಿಸುವ ಎಲ್ಲಾ ಮಾರ್ಗಗಳೂ ಸ್ವರ್ಗಕ್ಕಿರುವ ಮಾರ್ಗಗಳೇ ಆಗಿವೆ. ಸರಿಯಾದ ಜ್ಞಾನವನ್ನು ಗಳಿಸಿದರೆ ಸ್ವರ್ಗಕ್ಕಿರುವ ದಾರಿಯು ಸುಲಭವಾಯಿತು. ಏಕೆಂದರೆ ಸರಿಯಾದ ಜ್ಞಾನವು ಮನುಷ್ಯನನ್ನು ಸತ್ಕರ್ಮಗಳಿಗೆ ಪ್ರೇರೇಪಿಸುತ್ತದೆ. ವ್ಯಕ್ತಿ ಅದನ್ನು ಮಾಡುತ್ತಾನೆ. ಸತ್ಕರ್ಮವು ವ್ಯಕ್ತಿಯನ್ನು ಸ್ವರ್ಗಕ್ಕೆ ಹಕ್ಕುದಾರನಾಗಿಸುತ್ತದೆ.

ಜ್ಞಾನಗಳಲ್ಲಿ ಅತ್ಯಂತ ಶ್ರೇಷ್ಠವಾದುದು ಕುರ್‌ಆನ್ ಪಠಣವಾಗಿದೆ. ಕುರ್‌ಆನ್ ಅವನಿಗೆ ತನ್ನ ಸೃಷ್ಟಿಯ ಉದ್ದೇಶ ಮತ್ತು ಜೀವನದ ಉದ್ದೇಶವನ್ನು ಕಲಿಸುತ್ತದೆ. ಬೇರೆಲ್ಲಾ ಶಾಸ್ತ್ರಗಳು ಮನುಷ್ಯನಿಗೆ ಅವನ ಬಗ್ಗೆ, ಅವನು ಜೀವಿಸುತ್ತಿರುವ ಪ್ರಪಂಚದ ರೀತಿ, ಅದರ ಚಲನೆಯ ಕುರಿತು ಕಲಿಸುತ್ತದೆ. ಯಾವುದೇ ವಸ್ತುವಿನ ಮೂಲ ಮತ್ತು ಅದರ ಉಪಯೋಗವನ್ನು ಅರಿತರೆ ಮಾತ್ರ ಅದನ್ನು ಉಪಯೋಗಿಸಬಹುದು. ಒಂದು ವಸ್ತುವನ್ನು ಯಾವ ಉದ್ದೇಶಕ್ಕಾಗಿ ಯಾವ ರೀತಿ ಉಪಯೋಗಿಸಬೇಕೆಂದು ಸೃಷ್ಟಿಸಲಾಗಿಯೋ ಆ ಬಗ್ಗೆ ಸರಿಯಾಗಿ ಅರಿವು ಇದ್ದರೆ ಮಾತ್ರ ಅದರಿಂದ ಸರಿಯಾದ ಉಪಯೋಗ ಮತ್ತು ಪ್ರಯೋಜನ ಉಂಟಾಗಲು ಸಾಧ್ಯ. ಆ ರೀತಿ ಉಪಯೋಗಿಸಬೇಕಿದ್ದರೆ ಅದನ್ನು ಉಪಯೋಗಿಸುವ ವಿಧಾನದ ಬಗ್ಗೆ ಸರಿಯಾದ ತಿಳುವಳಿಕೆ ಇರಬೇಕು. ಈ ಅರಿವನ್ನು ಕುರ್‌ಆನ್ ನೀಡುತ್ತದೆ. ಆದುದರಿಂದಲೇ ಕುರ್‌ಆನ್ ಪಠಣವು ಇತರೆಲ್ಲ ಜ್ಞಾನಗಳಿಗಿಂತಲೂ ಶ್ರೇಷ್ಠತೆಯನ್ನು ಮತ್ತು ಮಹತ್ವವನ್ನು ಪಡೆದುಕೊಳ್ಳುತ್ತದೆ.

'ಅಲ್ಲಾಹನ ಆರಾಧನಾಲಯವೊಂದರಲ್ಲಿ' ಎಂಬುದನ್ನು ಯಾವುದಾದರೂ ಒಂದು ಮಸೀದಿಯಲ್ಲಿ ಎಂದು ಸಾಮಾನ್ಯವಾಗಿ ಅರ್ಥೈಸಲಾಗುತ್ತದೆ. ಪದಾನುಪದ ಅರ್ಥವನ್ನು ತೆಗೆದುಕೊಂಡರೆ ಇದನ್ನು ಕೇವಲ ಮಸೀದಿ ಎಂದು ಮಾತ್ರ ಪರಿಗಣಿಸಬೇಕಾಗಿಲ್ಲ.

...ಸ್ಮರಣೆಗೆ ಮತ್ತು ಧಾರ್ಮಿಕ ವಿದ್ಯಾಭ್ಯಾಸ ನೀಡಲು ನಿರ್ಮಿಸಲ್ಪಟ್ಟ ಯಾವುದೇ ಆರಾಧನಾಲಯಗಳಾಗಿರಬಹುದು. ವಿದ್ಯಾಲಯಗಳು ಮತ್ತು ಕಲಿಕಾ ಕೇಂದ್ರಗಳೆಲ್ಲಾ ಇದರ ಪರಿಧಿಯಲ್ಲಿ ಬರುತ್ತದೆ. ಕುರ್‌ಆನ್ ಪಠಣ ಎಂದರೆ ಕೇವಲ ಕುರ್‌ಆನನ್ನು ಓದುವುದಲ್ಲ ಎಂಬುದನ್ನು ಕೂಡಾ ಈ ಹದೀಸ್ ಸ್ಪಷ್ಟಪಡಿಸುತ್ತದೆ. ಏಕಾಂತದಲ್ಲಿ ಕುಳಿತು ಓದುವಾಗ ಮನಸ್ಸಿನಲ್ಲಿ ಮಾಡುವ ವಿಚಾರಗಳನ್ನು ಆ ಕೂಡಲೇ ಕಾರ್ಯಗತಗೊಳಿಸಬಾರದು. ಗುರುಗಳೊಂದಿಗೆ, ಸಹಪಾಠಿಗಳೊಂದಿಗೆ ಚರ್ಚೆ ಮಾಡಿ, ಆ ವಿಷಯದಲ್ಲಿಸರಿಯಾದ ನಿಲುವು ಸ್ವೀಕರಿಸುವ ಬಗ್ಗೆ ಸ್ಪಷ್ಟತೆ ಇರಬೇಕು.ಅಂತಹ ಚರ್ಚೆಗಳಲ್ಲಿ ಈ ಮೊದಲು ಆಲೋಚಿಸಿರದ, ತಿಳಿದಿರದ ಅನೇಕ ವಿಷಯಗಳು ಪ್ರತಿಯೊಬ್ಬರಿಗೂ ತಿಳಿಯಲು ಮತ್ತು ಆಲೋಚಿಸಲು ಅವಕಾಶ ಲಭಿಸುತ್ತವೆ.

ಈ ರೀತಿಯಲ್ಲಿ ಕುರ್‌ಆನನ್ನು ಕಲಿಯುವವರು, ಅವರ ಮನಸ್ಸನ್ನು ಅಲ್ಲಾಹನ ವಚನಗಳಲ್ಲಿ ಮುಳುಗಿಸಿರುತ್ತಾರೆ. ಆಗ ಪ್ರಾಪಂಚಿಕವಾದ ಎಲ್ಲಾ ಆಶೆ ಆಕಾಂಶೆಗಳಿಂದಲೂ, ನಿರೀಕ್ಷೆಗಳಿಂದಲೂ ಮನಸ್ಸು ಮುಕ್ತವಾಗಿರುತ್ತದೆ. ಮನಸ್ಸಿನಲ್ಲಿ ಶಾಂತಿ ಮತ್ತು ಸಮಾಧಾನವು ತುಂಬುತ್ತದೆ. ಕೆಲವು ಸಹಾಬಿಗಳು ಕುರ್‌ಆನ್ ಪಾರಾಯಣ ಮಾಡುವಾಗ ಒಂದು ಮೋಡವು ಅವರ ತಲೆಯ ಮೇಲೆ ನಿಂತ ಅನುಭವವಾಗುವುದರ ಬಗ್ಗೆ ಪ್ರವಾದಿ ಮುಹಮ್ಮದ್‌ರ (ಸ) ಜೊತೆ ಹೇಳಿದಾಗ, ಅದುವೇ ಕುರ್‌ಆನ್ ಪಾರಾಯಣದಿಂದ ಸಿಗುವ ಶಾಂತಿ ಎಂದು ಪ್ರವಾದಿ(ಸ)ಯವರು ವಿವರಿಸಿ ಹೇಳಿರುವುದಾಗಿ ಪ್ರಬಲವಾದ ಹದೀಸ್‌ಗಳಲ್ಲಿ ಬಂದಿರುತ್ತದೆ.

ಕುರ್‌ಆನ್ ಪಾರಾಯಣ ಮಾಡುವವರಿಗೆ ಸಿಗುವ ಮತ್ತೊಂದು ಅನುಗ್ರಹ ರಹ್ಮತ್ (ದೇವನ ಕಾರುಣ್ಯ) ಆಗಿರುತ್ತದೆ. ದೇವನ ಕರುಣೆಯಿಂದ ಪಾಪ ವಿಮೋಚನೆಯೇ ಈ ಹದೀಸ್‌ನಲ್ಲಿ ಉದ್ದೇಶಿಸಲಾಗಿದೆ. ಅಲ್ಲಾಹನು ಅವರ ಪಾಪಗಳನ್ನು ಕ್ಷಮಿಸಿ ಬಿಡುವನು. ಒಮ್ಮೆ ಪ್ರವಾದಿಯವರು(ಸ) ಧರ್ಮದ ಕುರಿತು ಚರ್ಚೆ ನಡೆಸುತ್ತಿದ್ದ ವ್ಯಕ್ತಿಗಳ ಸಮೀಪದಿಂದ ಹಾದು ಹೋದರು. ಆಗ ಆ ವ್ಯಕ್ತಿಗಳೊಂದಿಗೆ ' ನೀವು ಯಾವುದರ ಕುರಿತು ಮಾತನಾಡುತ್ತಿರುವಿರಿ?' ನಿಮ್ಮ ಮೇಲೆ ದೇವನ ಕರುಣೆಯು ವರ್ಷಿಸಿರುವುದನ್ನು ನಾನು ನೋಡಿದೆ. ಅದರಲ್ಲಿ ಪಾಲುದಾರನಾಗಲು ನಾನು ಬಯಸಿದೆ' ಎಂದು ಹೇಳಿದರು.

ಕುರ್‌ಆನ್ ಪಾರಾಯಣ ಮಾಡುವವರು ಮಲಕ್(ದೇವಚರ)ಗಳ ಸಂರಕ್ಷಣೆ ಯಲ್ಲಿರುತ್ತಾರೆ ಎಂಬುದು ಮೂರನೆಯ ಅನುಗ್ರಹವಾಗಿದೆ. ಪೈಶಾಚಿಕವಾದ ನಿಯಂತ್ರಣ ದಿಂದ ಆ ಮನುಷ್ಯನನ್ನು ಅಲ್ಲಾಹನು ಸುರಕ್ಷಿತಗೊಳಿಸುವನು ಎಂಬುದು ಇದರ ತಾತ್ಪರ್ಯ ವಾಗಿದೆ. ಅವರನ್ನು ಮಾರ್ಗಭ್ರಷ್ಟಗೊಳಿಸಲು ಪ್ರಯತ್ನಿಸುವ ಎಲ್ಲಾ ಕೆಟ್ಟ ವ್ಯಕ್ತಿಗಳಿಂದಲೂ, ಅವರಿಗೆ ರಕ್ಷಣೆಯನ್ನು ಒದಗಿಸಲು ದೇವಚರರು ಅವರ ಸುತ್ತಲೂ ಕಾವಲಿರುತ್ತಾರೆ ಎಂಬುದು ಇದರ ಅರ್ಥವಾಗಿದೆ.

ಅಲ್ಲಾಹನಿಂದ ಪ್ರಶಂಸಿಸಲ್ಪಡುತ್ತಾರೆ ಎಂಬುದು ನಾಲ್ಕನೆಯ ಅನುಗ್ರಹವಾಗಿದೆ. ಕುರ್ ಆನಿನಲ್ಲಿ ಮನಸ್ಸನ್ನು ಕೇಂದ್ರೀಕರಿಸಿರುವ ತನ್ನ ದಾಸರ ಬಗ್ಗೆ ಅಲ್ಲಾಹನು ಅವನ ಸನ್ನಿಧಿ

ಯಲ್ಲಿರುವ ದೇವಚರರೊಂದಿಗೆ ಪ್ರಶಂಸೆಯ ಮಾತುಗಳನ್ನಾಡುವನು. ದಾಸನ ಕುರ್‌ಆನ್ ಪಾರಾಯಣದ ಬಗ್ಗೆ ಅಲ್ಲಾಹನಿಗಿರುವ ಅತಿಯಾದ ಪ್ರೀತಿಯನ್ನು ವ್ಯಕ್ತಪಡಿಸುತ್ತದೆ.

ಈ ರೀತಿಯಲ್ಲೆಲ್ಲಾ ನೋಡುವುದಾದರೆ, ಕೇವಲ ಕುರ್‌ಆನ್ ಓದುವುದು ಮಾತ್ರ ಇಲ್ಲಿ ಉದ್ದೇಶವಲ್ಲ, ಮನಸ್ಸಿನ ಶುದ್ಧತೆ ಮತ್ತು ಕರ್ಮಗಳಲ್ಲಿರುವ ಪ್ರಾಮಾಣಿಕತೆಯನ್ನು ಈ ಪಾರಾಯಣವು ಉದ್ದೇಶಿಸುತ್ತದೆ. ಕರ್ಮಗಳನ್ನು ಮಾಡುವುದಿಲ್ಲವೆಂದಾರೆ ವಿದ್ವಾಂಸರೂ ಕಪಾಟಿನಲ್ಲಿರುವ ಗ್ರಂಥಗಳಂತೆ ಆಗಿ ಬಿಡುತ್ತಾರೆ. ಜ್ಞಾನವು ಕರ್ಮಕ್ಕೆ ಪರ್ಯಾಯವಲ್ಲ, ಕರ್ಮಗಳಿಗೆ ಪ್ರೇರಣೆಯಾಗಬೇಕು. ಕರ್ಮಕ್ಕೆ ಪರ್ಯಾಯ ಕರ್ಮಗಳು ಮಾತ್ರ. ಪ್ರೌಢವಾದ ಪರಂಪರೆ, ಕುಲಮಹಿಮೆ ಯಾವುದೂ ಕರ್ಮದ ಸ್ಥಾನದಲ್ಲಿ ನಿಲ್ಲಲಾರದು. ಸತ್ಕರ್ಮದಲ್ಲಿ ಹಿಂದುಳಿದವರು ತನ್ನ ವಂಶದ ಕಾರಣದಿಂದಲೋ, ಪರಂಪರೆಯ ಕಾರಣದಿಂದಲೋ ಇಹದಲ್ಲೂ ಯಶಸ್ವಿ ಹೊಂದಲಾರನು.

